# ಗಗನ ಪಿಶಾಚಿ

ಅಥವಾ

## ರಾಜಕೀಯ ಗುಪ್ತರಹಸ್ಯ.

( ಪತ್ತೆದಾರೀ ಕತೆ )



ಲೇಖಕ:—

ರಾಧಾರಮಣ



೧೯೪೪

# ಪ್ರಕಾಶಕರ ಬಿನ್ನಹ.



ಕನ್ನಡಿಗರಲ್ಲಿ ಪತ್ತೇದಾರೀ ಕಥೆಗಳನ್ನೋದುವ ಲಾಲಸೆ ಹೆಚ್ಚುತ್ತಿರುವ ಈಕಾಲದಲ್ಲಿ ಶ್ರೀಯುತ **ರಾಧಾರಮಣ**ರಿಂದ ಬರೆಯಲ್ಪಟ್ಟ ಈ **ರಾಜಕೀಯ ಗುಪ್ತರಹಸ್ಯ**ವೆಂಬ ಪತ್ತೇದಾರೀ ಪುಸ್ತಕವು ಕನ್ನಡ ವಾಚಕರನ್ನು ಚೆನ್ನಾಗಿ ತೃಪ್ತಿಪಡಿಸಿ, ಅವರ ಆದರಕ್ಕೆ ಪಾತ್ರವಾಗಬಹುದೆಂದು ನಂಬಿ, ನಾವು ಇದನ್ನು ನಮ್ಮ ಶ್ರೀ ಶೇಷಾಚಲ ಗ್ರಂಥ ಮಾಲೆಯಲ್ಲಿ ಪ್ರಕಟಿಸಿರುತ್ತೇವೆ.

ಹಲವು ಅಪರಿಹಾರ್ಯ ಕಾರಣಗಳ ಮೂಲಕ ಪುಸ್ತಕ ಪ್ರಕಟನಕ್ಕೆ ತಡವಾಯಿತು, ನಮ್ಮ ಗ್ರಂಥಮಾಲೆಯ ಚಂದಾದಾರರು ಅದಕ್ಕಾಗಿ ನಮ್ಮನ್ನು ಕ್ಷಮಿಸುವದಲ್ಲದೆ, ಇಂಥ ಸುರಮ್ಯವಾದ ಪುಸ್ತಕಗಳಿಂದ ಪರಿಶೋಭಿಸುವ ನಮ್ಮ ಗ್ರಂಥಮಾಲೆಗೆ ತಮ್ಮ ಇಷ್ಟ-ಮಿತ್ರರಲ್ಲಿಯು ಕೆಲವರನ್ನಾದರೂ ಕಾಯಂ ಗ್ರಾಹಕ ವರ್ಗಕ್ಕೆ ಸೇರಿಸಿ, ಕನ್ನಡ ಭಾಷೆಯ ಏಳ್ಗೆಗೆ ಸಹಾಯ ಮಾಡಬೇಕೆಂದು ಕೋರುವ,

ಸಜ್ಜನ ವಿಧೇಯ,

ಆನಂದವನ, ೧೦-೩-೧೯೩೩ **ಪ್ರಕಾಶಕ**

— ೨ನೇ ಮುದ್ರಣದ ಬಗ್ಗೆ —

ಈ ಪುಸ್ತಕದ ಮೊದಲಿನ ಪ್ರತಿಗಳು ಮುಗಿದು ಹಲವು ವರ್ಷಗಳಾದರೂ ಪುನರ್ಮುದ್ರಣಕ್ಕೆ ಅನುವಾಗಿರಲಿಲ್ಲ. ಈಗ ಇದೇ ಪುಸ್ತಕವನ್ನೇ ಲೇಖಕರ ಸೂಚನೆಯಂತೆ '**ಗಗನ ಪಿಶಾಚಿ**' ಎಂಬ ಸಾರ್ಥಕನಾಮದಿಂದ ಪ್ರಕಟಿಸಿರುವೆವು.

**ಪ್ರಕಾಶಕ**

ತಾ. ೩೦-೧೧-೪೯

— —

# ವಿಷಯಾನುಕ್ರಮಣಿಕೆ







# ಗಗನ ಪಿಶಾಚಿ

ಅಥವಾ

## ರಾಜಕೀಯ ಗುಪ್ತರಹಸ್ಯ!



### ೧ನೇ ತೆರೆ—ಹೂಂ ಆಗುವೆ.

ಡ್ಯೂಕ ವಿಲ್ಯಮ್ಸ್ ಬ್ರಿಟಿಶ ಸಾಮ್ರಾಜ್ಯದ ಸೂತ್ರಧಾರಕನಾದ ಲಾರ್ಡ್ ಬೋರ್ಲನ ಪ್ರಾಯುವ್ಹೇಟ ಸೆಕ್ರೆಟರಿ. (ಖಾಸಗೀ ಕಾರಭಾರಿ) ಆತ ಒಂದು ರಾತ್ರಿ ತನ್ನ ಮಾಲಕನ ಮನೆಯಲ್ಲೇ ತನ್ನ ಬಂಧುಸದೃಶನಾದ ಕ್ಯಾಪ್ಟನ್ ರೆನ್‌ಹ್ಯಾಮ ಎಡ್ವರ್ಡ ಎಂಬ ಹೆಸರಿನ ಮಿತ್ರನ ಕೂಡ ಇಸ್ಪೇಟೆಸ್ನಾಡುತ್ತ ಕುಳಿತಿದ್ದ. ಕ್ಯಾಪ್ಟನ್ ರೇನ್‌ಹ್ಯಾಮ ಮೊದಲು ಬ್ರಿಟಿಶ ದಂಡಿನಲ್ಲಿ ಅಮಲ್ದಾರನಾಗಿದ್ದ; ಆದರೆ ನಾವು ಯಾವ ಕಾಲದ ಸಂಗತಿ ಬರೆಯುತ್ತಿರುವೆವೋ, ಆಗ ಆತ ರಾಜಕೀಯ ಗುಪ್ತ ರಹಸ್ಯಗಳನ್ನು ತಿಳಿಯುವ (ಸಿ. ಆಯ್. ಡಿ.) ಖಾತೆಯಲ್ಲಿ ಕೆಲಸ ಮಾಡುತ್ತಿದ್ದ.

ಕೆಲ ಹೊತ್ತು ಆಟವಾಡಿದಮೇಲೆ ಅವರೀರ್ವರಲ್ಲಿ ಸಂಭಾಷಣಾರಂಭವಾಯಿತು. ಮೊದಮೊದಲು ಅವರ ಮಾತಿನ ಹೊಲುವು ಆದುವರೆಗೆ ಅವರಾಡಿದ ಇಸ್ಪೇಟಿನಾಟದ್ದೇ ಆಗಿತ್ತು; ಆದರೆ ಬರಬರುತ್ತ ಅವರ ಹರಟೆಯಲ್ಲಿ ನಾನಾ ಬಗೆಯ ವಿಷಯಗಳ ಸಮಾವೇಶವಾಗಹತ್ತಿತು. ಮಾತಿನ ಭರದಲ್ಲಿ ಡ್ಯೂಕ:-ನಮ್ಮ ಅಮೇರಿಕನ್ ಮಿತ್ರನಾಗಿರುವ ಮಾರ್ಕ್ವಿಸ ಹ್ಯಾಮನ್ ಆರ್ಟನ್ ಈ ಆಟದಲ್ಲಿ ಒಳ್ಳೇ ಗಟ್ಟಿಗ. ಆತನಂಥ ನಿಪುಣ ಆಟಗಾರ ಸಿಗುವದು ದುರ್ಲಭವೆಂದೇ ಅನ್ನಬೇಕಾಗುತ್ತದೆ. ಆತ ದೊಡ್ಡ ಧನಿಕ! ದಿನಾಲು ಬೊಗಸೆಗಟ್ಟಲೆ ಹಣ ವ್ಯಯ ಮಾಡುತ್ತಿದ್ದರೂ ಅವನಿಗೆ ದುಡ್ಡಿನ ಕೊರತೆ ಇಲ್ಲ.

'ಆ ಕುಬೇರಸದೃಶ ಮಾರ್ಕ್ವಿಸ ಬಹು ಉದಾರ. ಅದರಿಂದ ಆತ ದುಡ್ಡಿಗೆ ಬೆಲೆ ಕೊಡುವದಿಲ್ಲ; ಅಲ್ಲದೆ ಆತ ಒಳ್ಳೇ ಚತುರನೂ ಆಗಿರುತ್ತಾನೆ; ಆದರೆ ಆತನ ಪೂರ್ವವೃತ್ತ ಮಾತ್ರ ನನಗೆ ಗೊತ್ತಾಗಿಲ್ಲ. ನಾನು ಅಂದು ನಮ್ಮ ಕ್ಲಬ್ಬಿನೊಳಗಿನ ಬಹು ಜನರಿಗೆ ಆ ಒಗ್ಗೆ ವಿಚಾರಿಸಿದೆ; ಅದು ಅವರಾರಿಗೂ ಗೊತ್ತಿಲ್ಲ. ಮಿತ್ರಾ, ಡ್ಯೂಕಾ, ನಿನಗೇನಾದರೂ ಆರ್ಟಿನ್ನನ ಪೂರ್ವವೃತ್ತ ತಿಳಿದಿದೆಯೋ?'

'ಇಲ್ಲ; ಅದು ನನಗೆ ಗೊತ್ತಿಲ್ಲ. ಆರೇಳು ತಿಂಗಳುಗಳ ಮುಂಚೆ ವಾಶಿಂಗ್ಟನ್ನಿನೊಳಗಿನ ನಮ್ಮ ಬ್ರಿಟಿಶ ವಕೀಲನ ಕಡೆಯದೊಂದು ಶಿಫಾರಸ ಪತ್ರ ತಕ್ಕೊಂಡು ಬಂದು ಈ ಆರ್ಟಿನ್ನ ನಮ್ಮ ಲಾರ್ಡ ಬೋರ್ಲರಿಗೆ ಭೆಟ್ಟಿಯಾಗಿ ಗುರುತು ಮಾಡಿಕೊಂಡ. ಮೊದಮೊದಲು ಬೋರ್ಲರು ಈ ಮಾರ್ಕ್ವಿಸ ಕುಬೇರನ ಬಗ್ಗೆ ಅಷ್ಟೊಂದು ಚಲೋ ಅಭಿಪ್ರಾಯಪಡಲಿಲ್ಲ. ಆರ್ಟಿನ್ನನ ದೃಢ ಪರಿಚಯದ ಮೂಲಕ ಈತನೊಳ್ಳೇ ಧನವಂತನೆಂಬದು ಹಿಂದಿನಿಂದ ತಿಳಿಯಿತು. ಆದರೂ ಅವರು ಈತನ ಬಗ್ಗೆ ಅಷ್ಟೊಂದು ಸಹಾನುಭೂತಿಯುವರಾಗಿರಲಿಲ್ಲ; ಆದರೆ ತುಸ ದಿನಗಳಲ್ಲಿಯೇ ಲಾರ್ಡ ಬೋರ್ಲರು ಅವನಲ್ಲಿ ಪುತ್ರವತ್ ಪ್ರೀತಿ ತಾಳಿದುದು ಬಹು ವಿಸ್ಮಯಜನಕ ಸಂಗತಿಯಾಗಿದೆ ನಿಜವಾಗಿ ಹೇಳುವದೆಂದರೆ, ಹ್ಯಾಮುನ್ ಆರ್ಟಿನ್ನನಂಥ ದೊಡ್ಡಮನುಷ್ಯರು ಸಿಗುವದೇ ದುರ್ಲಭ. ಆಟದಲ್ಲಾಗಲಿ, ಬೇಟೆಯಲ್ಲಾಗಲಿ, ಮತ್ತಾವ ವಿಷಯದಲ್ಲೇ ಆಗಲಿ ಆತ ನಿಪುಣನೇ ಸರಿ. ಇಂಥ ಗುಣಜ್ಞ ಮತ್ತು ಧನಿಕನನ್ನು ಲಾರ್ಡ ಬೋರ್ಲರು ಪ್ರೀತಿಸುವದು ಯೋಗ್ಯವೇ ಆಗಿದೆ.'

ಕ್ಯಾಪ್ಟನ್ ರೆನ್‌ಹ್ಯಾಮು ಮತ್ತೆ ಏನೋ ಮಾತಾಡತಕ್ಕವನಿದ್ದ; ಅಷ್ಟರಲ್ಲಿ ಇಪ್ಪತ್ತು-ಇಪ್ಪತ್ತೆರಡು ವಯಸ್ಸಿನ ಒಬ್ಬ ಪರಮ ಸುಂದರಿಯಾದ ಯುವತಿ ಆ ಕೋಣೆಯನ್ನು ಪ್ರವೇಶಿಸಿದಳು. ಆಗಿನ ಆಕೆಯ ವೇಷ-ಭೂಷಣಗಳು ಒಳ್ಳೇ ಮನಮೋಹಕವಾಗಿದ್ದವು. ಆಕೆ ಬಂದವಳೇ ನಗೆಮೊಗದಿ ದ:-

ಕ್ಯಾಪ್ಟನ್ನರೇ, ನೀವು ಈ ಡ್ಯೂಕರ ವರ್ಣಿಸಲಸದಳವಾದ ಗರ್ವವನ್ನು ಖಂಡಿಸಲಾರಿರಾ? ಇಸ್ಪೀಟನಾಟದಲ್ಲಿ ತಾವು ಅಜೇಯರೆಂದೇ ಇವರ ಭಾವನೆಯಾಗಿದೆ.

ಲೇಡಿಯವರೇ, ತಮ್ಮ ಅಂಬೋಣಕ್ಕೆ ತೀರ ವಿರುದ್ಧವಾಗಿಯೇ ಈಗಾಗಿದೆ. ಡ್ಯೂಕನೇ ನನ್ನ ಗರ್ವಖಂಡನೆ ಮಾಡಿಬಿಟ್ಟಿರುತ್ತಾನೆ. ಈ ಮೊದಲಿನ

ಆಟದಲ್ಲಿ ಇವನು ನನ್ನನ್ನು ಸಂಪೂರ್ಣವಾಗಿ ಸೋಲಿಸಿರುತ್ತಾನೆ. ಎಂದು ಕ್ಯಾಪ್ಟನ್ ರಿ್ಹ್ಯಾಮು ನಗೆಮೊಗದಿಂದಲೇ ಉತ್ತರವನ್ನಿತ್ತ.

ಆ ತರುಣಿಯು ಹೆಸರು ಲೇಡಿ ಎಲೀಸಿಯಾ. ಆಕೆ ಲಾರ್ಡ ಬೋರ್ಲನ್ನ ಏಕಮಾತ್ರ ಪುತ್ರಿ. ಅವಳದಿನ್ನೂ ವಿವಾಹವಾಗಿರಲಿಲ್ಲ. ಆಕೆ ಎಷ್ಟು ಸುಂದರಿಯಾಗಿದ್ದಳೋ, ಅಷ್ಟೇ ಸುಶಿಕ್ಷಿತಳು. ನೃತ್ಯ—ಗೀತಗಳಲ್ಲಿಯೂ ಮಾತು--ಕಥೆಗಳಲ್ಲಿಯೂ ರಸಿಕತೆಯಲ್ಲಿಯೂ ಲಂಡನ್ನಿನ ಆಗಿನ ಮನೆ ತನಸ್ತ ಸ್ತ್ರೀ ಸಮಾಜದಲ್ಲಿ ಲೇಡಿ ಎಲೀಸೆ ಆದರ್ಶಪ್ರಾಯಳಾಗಿದ್ದಳು. ಎಷ್ಟೋ ಜನ ಹಟ್ಟಾ ಶ್ರೀಮಂತರಾದ ಉಚ್ಚಪದಸ್ಥ ಅವಿವಾಹಿತ ತರುಣರು ಆಕೆಯ ಒಂದಿಷ್ಟು ನಗೆಮೊಗದ ಇಲ್ಲವೇ ಮಧುರ ನೇತ್ರಕಟಾಕ್ಷದ ಲಾಭವು ತಮಗಾದರೆ, ತಾವು ಕೃತಾರ್ಥರಾದೇವೆಂದು ಬಗೆದು, ಪರಿಮಲ ಲೋಲಾಕುಲಗಳಾದ ಭೃಂಗಿಗಳಂತೆ ಎಲೀಸೆಯನ್ನು ಸುತ್ತುವರೆದು ಆಡ್ದಾಡುತ್ತಿದ್ದರು; ಆದರೆ ಆಕೆ ಮಾತ್ರ ಯಾವ ತರುಣನ ಕೂಡಲೂ ಮಾತಾಡುತ್ತಿರಲಿಲ್ಲ; ಯಾರ ಸ್ತುತಿಪರ ಭಾಷಣಗಳಿಗೂ ಕಿವಿಗೊಡುತ್ತಿರಲಿಲ್ಲ. ಅವಳು ತನ್ನ ತಂದೆಯ ಪ್ರಾಯವ್ಹೇಟ ಸೆಕ್ರೆಟರಿಯಾಗಿದ್ದ ಡ್ಯೂಕ ವಿಲ್ಯಮ್ಸನೇ ತನಗೆ ತಕ್ಕ ವರನೆಂದು ಮನಸ್ಸಿನಲ್ಲಿ ನಿಶ್ಚಯಿಸಿಕೊಂಡಿದ್ದಳು.

ಲೇಡಿ ಎಲಿ ಸೆಯು ಡ್ಯೂಕನನ್ನು ಓರೆಗಣ್ಣಿನಿಂದ ನೋಡುತ್ತ ರಿನ ಹ್ಯಾಮನನ್ನು ಕುರಿತು:—ನೀವು ಈ ಕ್ಲೈಲಾಗದವರಿಗೆ ಸೋತಿರಾ? ಎಂಥ ನಾಚಿಕೆಗೇಡಿತನವಿದು! ಕ್ಯಾಪ್ಟನ್, ಮತ್ತೆ ಆಟ ಹೂಡಿರಿ. ನೀವು ಇವರನ್ನು ಸೋಲಿಸಲಿಕ್ಕೇ ಬೇಕು. ನಾನೂ ನಿಮ್ಮ ಕಡೆಗಾಗುವೆನು; ಅಂಜಬೇಡಿರಿ.

"ಲೇಡಿಯವರೇ, ಇನ್ನು ಈ ಆಟ ಸಾಕು. ಮತ್ತೆ ಎಂದಾದರೂ ಆಡೋಣವಂತೆ. ಇಂದಿನ ರಾತ್ರಿ ಡ್ಯೂಕ ಆಫ್ ಸ್ಕಾಚ್ಚರ ಮನೆಯಲ್ಲಿ ನಿಮಂತ್ರಣವಿರುತ್ತದೆ. ಈಗಲೆ ಬಹಳ ರಾತ್ರಿಯಾದಂತಾಗಿದೆ. ಇನ್ನು ನಾನು ಹೊರಡುತ್ತೇನೆ. ನೀವು ಈ ನಮ್ಮ ಡ್ಯೂಕನೊಡನೆ ಕುಳಿತು ಆಡವಾಡಿ, ನನಗುಂಟ ದ ಸೋಲಿನ ಸೇಡು ತೀರಿಸಿಕೊಳ್ಳಿರಿ."

ಹೀಗೆಂದು ಹೇಳಿ, ಕ್ಯಾಪ್ಟನ್ನನು ಅವರೀರ್ವರ ಸಮ್ಮತಿಯನ್ನು ಪಡೆದ, ಅಲ್ಲಿಂದ ಹೊರಹೊರಟ. ಬಳಿಕ ಡ್ಯೂಕನೊಬ್ಬನೇ ಎಲೀಸೆಯೊಡನೆ ಅಲ್ಲಿ ಕುಳಿತ. ಲೇಡಿ ಎಲೀಸೆ ಡ್ಯೂಕನ ಮುಖದ ಕಡೆಗೆ ಟಕಮಕವೆಂದು ನೋ-

ಹುತ್ತ, ಮುಗುಳು ನಗೆಯಿಂದ:-ಡ್ಯೂಕರೇ, ಕ್ಯಾಪ್ಟನ್ನನು ನನ್ನ ವಿಶ್ವಾಸಕ್ಕೆ ಪಾತ್ರನೆಂದು ನಿಮ್ಮ ಅಭಿಪ್ರಾಯವಲ್ಲವೇ?

ಡ್ಯೂಕನು ಸಮ್ಮತಿಸೂಚಕವಾಗಿ ಗೋಣು ಅಲ್ಲಾಡಿಸುತ್ತ:-ಅಹುದು; ಆತ ಪರಮ ವಿಶ್ವಾಸಿಗ. ಆತನ ಮೈತ್ರಿ ಅತುಲನೀಯವಾದುದು. ಸಭ್ಯತೆಯಲ್ಲಿ ಆತನನ್ನು ಸರಿಗಟ್ಟುವವರೇ ವಿರಳ. ಆತನ ಸಹೃದಯತೆಯಂತೂ ವರ್ಣಿಸಲಸದಳವಾಗಿದೆ; ಅಲ್ಲದೆ ಮನೋರಂಜಕತೆಯಲ್ಲಂತೂ ಆತ ವಸುಂಧರೆಯನ್ನು ಕೂಡ ಮರೆಯಿಸ ಬಲ್ಲ. ಆತನ ಇವೆಲ್ಲ ಸದ್ಗುಣಗಳನ್ನು ಒಪ್ಪದಿದ್ದರೆ, ನಾನು ತಿಳುವಳಿಕೆಯುಳ್ಳವನೆಂದೆಣಿಸಿಕೊಳ್ಳಲಿಕ್ಕೆ ತೀರ ಅಯೋಗ್ಯನಾದೇನು.

ಡ್ಯೂಕನ ಆ ಉತ್ತರ ಕೇಳಿ ಎಲೀಸೆ ಘೊಳ್‌ಘೊಳ್ಳೆಂದು ನಕ್ಕು:—ನಿಮ್ಮ ವಿಷಯಕ್ಕಾದರೂ ಕ್ಯಾಪ್ಟನ್ನನ ಮತವು ಇದೇ ಬಗೆಯಾಗಿದೆ. ಆತ ಭೆಟ್ಟಿಯಾದಾಗೆಲ್ಲ ನಿಮ್ಮ ಸದ್ಗುಣಗಳನ್ನೇ ವರ್ಣಿಸುತ್ತಿರುತ್ತಾನೆ. ನಿಮ್ಮೀರ್ವರ ಈ ಕೃತಿಯ ಮೇಲಿಂದ ನೀವು ಉಭಯತರೂ ಪರಸ್ಪರ ಪ್ರಶಂಸಾಕೀರ್ತನ ಸಭೆಯ ಸಭಾಸದರಾಗಿರುವಂತೆ ಅನುಮಾನವಾಗುತ್ತಿದೆ. ನೀವನ್ನುವಿರಿ, ಅವನಂತಹ ಯೋಗ್ಯ ಮನುಷ್ಯನಿಲ್ಲೆಂದು; ಆತನನ್ನುವ ನಿಮ್ಮಂತಹ ಸದ್ಗುಣಿ ಪುರುಷನಿಲ್ಲೆಂದು! ಆತ ನಿಮ್ಮ ವಿಷಯವಾಗಿ ಇಷ್ಟು ಸದಭಿಮಾನಿಯಾದುದರಿಂದಲೇ ನಾನು ಅವನಲ್ಲಿ ಅಷ್ಟು ವಿಶ್ವಾಸವುಳ್ಳವಳಾಗಿರುತ್ತೇನೆ.

ಆಗ ಡ್ಯೂಕನು ಆಗ್ರಹಪೂರ್ವಕವಾಗಿ ನುಡಿದನೇನಂದರೆ:-ಎಲೀಸಿಯಾ! ನೀನು ನನ್ನ ಗುಣಕೀರ್ತನ ಕೇಳಿಕೊಳ್ಳುವದಕ್ಕೆ ಇಷ್ಟೊಂದು ಮನಸೋತಿರುವದೇಕೆಂಬ ವಿಷಯ ತಿಳಿಯುವ ಅಧಿಕಾರ ನನಗಿಲ್ಲವೆ?

“ಇರದೇನು? ನಾನು ನಿಮ್ಮನ್ನು ನನ್ನ ಪರಮ ಮಿತ್ರರೆಂದು ಮನಃಪೂರ್ವಕವಾಗಿ ಭಾವಿಸುವದರಿಂದ ನನಗೆ ನಿಮ್ಮ ವಿಷಯದ ಪ್ರಶಂಸೆ ಕೇಳಿಕೊಳ್ಳಲಿಕ್ಕೆ ಒಳ್ಳೇ ಆಹ್ಲಾದವೆನಿಸುತ್ತದೆ.”

ಕೂಡಲೆ ಡ್ಯೂಕ ವಿಲ್ಯಮ್ಮನು ಚಟಕ್ಕನೆ ಅವಳ ಕೈಗಳನ್ನು ಹಿಡಿದುಕೊಂಡು ಅವಳನ್ನು ಸತೃಷ್ಣ ನಯನಗಳಿಂದ ನೋಡುತ್ತ:-ನೀನು ನನ್ನನ್ನು ಬರೀ ಮಿತ್ರನೆಂದೆಣಿಸಿರುವಿಯೋ?—ಮತ್ತೇನಿಲ್ಲವೋ? ಆದರೆ ಎಲೀಸಿಯಾ, ನಾನಂತೂ ನನ್ನ ಹೃದಯವನ್ನು ನಿನ್ನ ಚರಣಗಳಿಗರ್ಪಿಸಿರುತ್ತೇನೆ ಪ್ರಿಯೇ, ನಾನು ನಿನ್ನನ್ನೆಷ್ಟು ಪ್ರೀತಿಸುತ್ತಿರುವೆನೆಂಬದನ್ನದೆಂತು ಹೇಳಲಿ? ಎನ್ನಲು,

ಲೇಡಿ ಎಲೀಸೆಯಾದರೂ ನತಮುಖಿಳಾಗಿ ಕುಂಠಿತ ಸ್ವರದಿಂದ:— ನಾಥಾ, ನಾನಾದರೂ ನಿಮ್ಮನ್ನು..........

ಕೂಡಲೆ ಡ್ಯೂಕನು ಉನ್ಮತ್ತನಂತಾಗಿ ಆಕೆಯನ್ನು ಬಿಗಿದಪ್ಪಿಕೊಂಡು: ನಾನೇ ಧನ್ಯ! ನಾನೇ ಸುಖಿ! ನಿನ್ನ ಇದೊಂದೇ ವಾಕ್ಯ ನನ್ನ ಕಿವಿಯಲ್ಲಿ ಅದೆಷ್ಟು ಅಮೃತವನ್ನೆರಚಿತೆಂಬದನ್ನದೆಂತು ತಿಳಿಸಲಿ? ನನ್ನ ಪ್ರೇಮಯಾಚನೆ ವ್ಯರ್ಥವಾಗಲಿಲ್ಲೆಂಬದು ಇಂದು ನನ್ನ ಅನುಭವಕ್ಕೆ ಬಂತು; ಆದರೆ ಎಲೀಸಿಯಾ! ನಿನ್ನಿಂದ ನಾನೊಂದು ಸಂಗತಿ ತಿಳಿಯಬೇಕಾಗಿದೆಯಲ್ಲ! ಹೇಳುವಿಯಾ? ಪ್ರಿಯೆ, ನನ್ನಂಥ ಸಾಮಾನ್ಯ ಕುಲೋತ್ಪನ್ನನಿಗೆ ನಿನ್ನ ಹೃದಯದಲ್ಲಿ ಸ್ಥಳಮೀಯಲಿಕ್ಕೆ ನಿನಗದೆಂತು ಪ್ರವೃತ್ತಿಯಾಯಿತು? ನಿನ್ನ ಪ್ರೇಮಕ್ಕೆ ತೀರ ಅಯೋಗ್ಯನಾಗಿರುವ ನಾನು, ಅದಾವ ಸಾಹಸದಿಂದ ನಿನ್ನ ಬಳಿಯಲ್ಲಿ ಪಾಣಿಗ್ರಹಣದ ಪ್ರಸ್ತಾಪವನ್ನೆತ್ತಲಿ?

“ಛೀ, ಛೀ! ನೀವು ಆ ಪ್ರಸ್ತಾಪವನ್ನೆತ್ತಲಿಕ್ಕೆ ಕೊಂಚವೂ ಅನುಮಾನಪಡಬೇಡಿರಿ. ನಿಮ್ಮ ಅಭಿಪ್ರಾಯಕ್ಕೆ ನಾನು ಸಮ್ಮತಿಸುತ್ತೇನೆ.”

“ಪ್ರಿಯೇ, ಹೃದಯೇಶ್ವರೀ! ಭಿಜಾತ ಸರೋವರದೊಳಗಿನ ಕಮಲಿನಿಯಂತಿರುವ ಲೇಡಿ ಎಲೀಸಿಯಾ! ನಾನು ನಾಳೆಯೇ ನಿಮ್ಮ ತಂದೆಯ ಬಳಿಯಲ್ಲಿ ಆ ಪ್ರಸ್ತಾಪವನ್ನೆತ್ತುವೆನು. ನೀನು ಮಾತ್ರ ನನ್ನ ಪಾಣಿಗ್ರಹಣಕ್ಕೆ ಒಪ್ಪುವಿಯಷ್ಟೇ?”

ಲೇಡೀ ಎಲೀಸೆಯು ಸಂತೋಷಭರದಿಂದ:— “ಪ್ರಿಯಕರಾ, ಹೂಂ ಆಗುವೆ, ನಾನು ಖಂಡಿತವಾಗಿಯೂ ನಿನ್ನವಳಾಗುವೆ” ಎಂದು ಅಭಿಪ್ರಾಯವನ್ನಿತ್ತಳು.

ಬಳಿಕ ಅವರೀರ್ವರೂ ಪರಸ್ಪರರನ್ನು ಬಿಗಿದಪ್ಪಿಕೊಂಡು ಅಲ್ಲಿಯದೊಂದು ಕೋಚದ ಮೇಲೆ ಕುಳಿತು, ತಮ್ಮೀರ್ವರ ಆಗಾಮಿ ಸುಖಸ್ವಪ್ನದಲ್ಲಿ ನಿಮಗ್ನರಾದರು!



## ೨ನೇ ತೆರೆ. ಅದ್ಭುತ ಗುಪ್ತರಹಸ್ಯ ಪ್ರಕಾಶ

ಡ್ಯೂಕ ವಿಲ್ಯಮ್ಸ ಲಾರ್ಡ ಬೋರ್ಲನ ಪ್ರಾಯವ್ಹೇಟ ಸೆಕ್ರೆಟರಿಯಾಗಿದ್ದನೆಂದು ಹಿಂದೆಯೇ ಹೇಳಿದೆ; ಅಲ್ಲದೆ ಲಾರ್ಡ ಬೋರ್ಲನಿಗೆ ಬರುತ್ತಿರುವ ಬಿನ್ ಸರಕಾರೀ ಕಾಗದ-ಪತ್ರಗಳಿಗೆ ಉತ್ತರಕೊಡುವ ಕೆಲಸವೂ ಡ್ಯೂಕನದೇ ಆಗಿತ್ತು. ಇತ್ತೀಚಿಗೆ ಆತನ ಸರಕಾರೀ-ಪ್ರಾಯವ್ಹೇಟ ಸೆಕ್ರೆಟರಿಯ-ಕೆಲಸಕ್ಕಿಂತ ಈ ಬಿನ್ ಸರಕಾರೀ ಕೆಲಸವೇ ಹೆಚ್ಚಾಗಿತ್ತು.

ದಿನಾಲು ಬೆಳಿಗ್ಗೆ ಲಾರ್ಡ ಬೋರ್ಲ ತನ್ನ ಖಾಸ ಲಾಯಬ್ರರಿಯಲ್ಲಿ ಕುಳಿತು ತನ್ನ ಟಪಾಲು ಓದಿಕೊಳ್ಳುತ್ತಿದ್ದ; ಮತ್ತು ಯಾವ ಪತ್ರಕ್ಕೆ ಏನು ಉತ್ತರ ಕೊಡಬೇಕೆಂಬದನ್ನು ಡ್ಯೂಕನಿಗೆ ಸಂಕ್ಷೇಪವಾಗಿ ಆಗಲೆ ತಿಳಿಸಿ ಬಿಡುತ್ತಿದ್ದ. ಅದಕ್ಕಾಗಿ ಪ್ರತಿನಿತ್ಯ ಬೆಳಗಿನಲ್ಲಿ ಡ್ಯೂಕ ಬೋರ್ಲನ ಆ ಲಾಯಬ್ರರಿಗೆ ತಪ್ಪದೆ ಬರಬೇಕಾಗುತ್ತಿತ್ತು.

ಮೊದಲನೇ ತೆರೆಯಲ್ಲಿ ನಾವು ಯಾವ ರಾತ್ರಿಯ ಸಂಗತಿ ಬಣ್ಣಿಸಿರುವೆವೋ, ಆದರ ಮರು ದಿನ ಬೆಳಿಗ್ಗೆ ಡ್ಯೂಕ ಎಷ್ಟೋ ಪತ್ರೋತ್ತರಗಳ ಪುಡಿಕೆಗಳನ್ನು ಬಗಲಲ್ಲಿ ಹಿಡಿಕೊಂಡು ಬೋರ್ಲನ ಆ ಖಾಸ ವಾಚನಾಲಯವನ್ನು ಪ್ರವೇಶಿಸಿದ. ಆ ದಿನ ಲಾರ್ಡ ಬೋರ್ಲನ ಎದುರಿಗೆ ಹೋಗಿ ನಿಲ್ಲಲಿಕ್ಕೆ ಅವನಿಗೆ ಧೈರ್ಯ ಸಾಲದಾಯಿತು. ಆಗ ಆತನ ಕಾಲುಗಳು ನಡುಗಹತ್ತಿದವು. ಕಂಠಶೋಷವಾಗಹತ್ತಿತು. ಹೃದಯು ಧಕ್‌ಧಕ್ ಎಂದು ಹಾರಹತ್ತಿತು. ಮೈಯು ಜೋರಿಂದು ಬೆವರಿತು. ಬ್ರಿಟಿಶ ಪಾರ್ಲಿಮೆಂಟಿನ ಮುಖ್ಯ ಮಂತ್ರಿಯಾದ ಲಾರ್ಡ ಬೋರ್ಲನ ಮಗಳಾದ ಲೇಡೀ ಎಲೀಸೆಯು ತನ್ನನ್ನು ವರಿಸಲಿಕ್ಕೆ ಸಮ್ಮತಿಸಿದ್ದರೂ, ಈ ವೃದ್ಧ ಲಾರ್ಡ ಆ ಬಗ್ಗೆ ಏನೆನ್ನುವನೋ? ತನ್ನ ಏಕ ಮಾತ್ರ ಪುತ್ರಿಯನ್ನು ತನ್ನ ಕೈಕೆಳಗಿನ ಸಾಮಾನ್ಯ ನೌಕರನಿಗೆ ಕೊಡಲಿಕ್ಕೆ ಸಮ್ಮತಿಸುವನೋ—ಇಲ್ಲವೋ? ಎಂಬದನ್ನು ನಿರ್ಧರಿಸಲಾರದ ಡ್ಯೂಕ ಆಗ ಹೆಚ್ಚಾಗಿ ಚಂಚಲವಾಗಿದ್ದ. ನಾನಾ ಬಗೆಯ ಆಶಂಕೆಗಳಿಂದಲೂ, ಅವುಗಳಿಂದುಂಟಾದ ದುಶ್ಚಿಂತೆಯಿಂದಲೂ ಆತನ ಹೃದಯು ತಲ್ಲಣಿಸಿ ಹೋಗಿತ್ತು. ಆದರೂ ಆತನು ತನ್ನ ಮಾನಸಿಕ ಚಾಂಚಲ್ಯವನ್ನು ಹತ್ತೊತ್ತಿಕೊಂಡು, ಹೇಗಾದರೂ ಮಾಡಿ ಲಾರ್ಡನ ಎದುರಿಗೆ ಹೋಗಿ ನಿಂತ.

ಲಾರ್ಡ ಬೋರ್ಲ ತೀರ ಮಿತಭಾಷಿಯೂ, ಗಂಭೀರ ಸ್ವಭಾವದವನೂ ಆಗಿದ್ದ. ಆತ ಎಂದೂ ಯಾವ ಕಾರಣದಿಂದಲೂ ಉತ್ತೇಜಿತವಾದುದನ್ನೂ

ಋಷಿ-ಮೋಜಿನಲ್ಲಿದ್ದದ್ದನ್ನೂ ಡ್ಯೂಕ ಇದುವರೆಗೂ ಕಂಡಿರಲಿಲ್ಲ; ಆದರೆ ಡ್ಯೂಕ ಇಂದು ಆತನ ಮೋರೆಯ ಕಡೆಗೆ ಒಮ್ಮೆಯೇ ನೋಡಿದ ಮಾತ್ರ. ಕೂಡಲೆ ಲಾರ್ಡ ಬೋರ್ಲನಲ್ಲಿ ಏನೋ ವಿಶೇಷ ತರದ ಅಭ್ಯಂತರವಾದಂತೆ ಅವನಿಗೆ ಕಾಣಿಸಿತು- ಆಗಿನ ಆ ಲಾರ್ಡನ ಮುಖಚರ್ಯೆಯು-ಅವನಿಗೆ ಒಳ್ಳೇ ಸಿಟ್ಟು ಬಂದದ್ದರಿಂದ-ಹೆಚ್ಚು ಗಂಭೀರವೂ ಅಪ್ರಸನ್ನವೂ ಆಗಿತ್ತು. ಅಂದು ಡ್ಯೂಕ ಆ ಸುಪ್ರಭಾತ ಕಾಲದಲ್ಲಿಯೇ ಲಾರ್ಡ ಬೋರ್ಲನೆದುರಿಗೆ ಅವನ ಕನ್ಯಾಪಾಣಿಗ್ರಹಣದ ವಿಷಯವನ್ನೆತ್ತಬೇಕೆಂದಿದ್ದ; ಆದರೆ ಬೋರ್ಲನ ಆ ಅಪ್ರಸನ್ನ ಮುಖಭಾವವನ್ನು ಕಂಡು, ಆತ ತನ್ನ ಆ ಮನೀಷೆಯನ್ನು ಹೊರಗೆಡವದೆ ಸುಮ್ಮನಾದ.

ಡ್ಯೂಕ ಲಾರ್ಡ ಬೋರ್ಲನ ಟೇಬಲ್ಲಿನೆಡೆಯಲ್ಲಿ ನಿಂತು, ಬೋರ್ಲನ ಹೆಸರಿಗೆ ಆಗಲೆ ಬಂದಿದ್ದ ಒಂದೊಂದೇ ಪತ್ರದ ಆವರಣ ಬಿಚ್ಚಿ ಬಿಚ್ಚಿ ಲಾರ್ಡನ ಎದುರಿಗೆ ಇಡುತ್ತಿದ್ದ. ಅಷ್ಟರಲ್ಲಿ ಲಾರ್ಡ ಡ್ಯೂಕನನ್ನುದ್ದೇಶಿಸಿ ಅನ್ನುತ್ತಾನೆ:—'ಡ್ಯೂಕಾ, ಈ ಪತ್ರಗಳನ್ನೆಲ್ಲ ಆ ಮೇಲೆ ಓದುವೆನು. ಸದ್ಯಕ್ಕೆ ನಿನ್ನೊಡನೆ ಮನೆತನದ ಕೆಲ ಮಾತುಗಳನ್ನಾಡಬೇಕೆಂದಿರುತ್ತೇನೆ.' ಲಾರ್ಡನ ಆ ನುಡಿ ಕೇಳಿದ ಬಳಿಕಂತೂ ಡ್ಯೂಕನ ಹೃದಯ ಮತ್ತಿಷ್ಟು ಗಟ್ಟಿಯಾಗಿ ಹಾರಲುಪಕ್ರಮಿಸಿತು. ಕೂಡಲೆ ಆತ ಅವನತ ಮುಖದಿಂದಲೇ:-'ಮಹಾನು ಭಾವರೇ, ನನ್ನಿಚ್ಛೆಯಾದರೂ ಅದೇ ಆಗಿದೆ. ನಿನ್ನೆ ರಾತ್ರಿ ನಿಮ್ಮ ಮಗಳು ನನ್ನನ್ನು ಲಗ್ನವಾಗುವೆನೆಂದು ಒಪ್ಪಿಕೊಂಡಿರುತ್ತಾಳೆ.' ಇಷ್ಟು ಮಾತಾಡ ಬೇಕಾದರೆ ಡ್ಯೂಕನಿಗೆ ಸಾಕುಸಾಕಾಗಿ ಹೋಯಿತು.

'ನಿನ್ನೆ ರಾತ್ರಿಯೇ? ಆಗ ಎಷ್ಟು ಗಂಟೆಯಾಗಿತ್ತು?'

'ಆಗ್ಗೆ ಹತ್ತು-ಹತ್ತೂವರೆ ಗಂಟೆಯಾಗಿರಬಹುದು.'

ಅದನ್ನು ಕೇಳಿ ಲಾರ್ಡ ಬೋರ್ಲ:-'ಬಹು ಸೋಜಿಗ. ಅದೊಳ್ಳೇ ದುರ್ವೇಳೆಯೆನ್ನಬೇಕು' ಎಂದಂದ. ಆಗ ಆತನ ಮುಖ ಅನಿವಾರವಾದ ಸಿಟ್ಟಿ ನಿಂದ ಉರಿಯುತ್ತಿತ್ತು. ಕಣ್ಣುಗಳು ಕೆಂಡವನ್ನು ಕಾರುತ್ತಿದ್ದವು

ಲಾರ್ಡ ಬೋರ್ಲ ಕೆಲ ಕ್ಷಣಗಳ ವರೆಗೆ ಜ್ವಾಲಾಮುಖಿಯ ಗುಡ್ಡದಂತೆ ನಿಸ್ತಬ್ಧನಾಗಿದ್ದು, ಬಳಿಕ ಒಳ್ಳೇ ಗಂಭೀರ ವಾಣಿಯಿಂದ:—ನೀನು ನನ್ನ ಮಗಳನ್ನು ವರಿಸ ಬಯಸುವ ವಿಷಯವು ಒತ್ತಟ್ಟಿಗಿರಲಿ; ಆದರೆ ನೀನು ಆ

ಸಂಗತಿಯನ್ನು ನಿನ್ನೆ ಎಷ್ಟು ಜನ ಗೆಳೆಯರೆದುರಿಗೆ ಹೇಳಿರುತ್ತೀಯೆಂಬದನ್ನಷ್ಟು ತಿಳಿಯಲಪೇಕ್ಷಿಸುತ್ತೇನೆ, ಎನ್ನಲು,

ಡ್ಯೂಕ ಅಸ್ತವ್ಯಸ್ತ ಮುಖಭಾವದಿಂದ:—ಯಾವನು ತನ್ನ ಪ್ರಣಯ ಸಂಬಂಧದ ವಿಷಯವನ್ನು ಮಂದಿಯ ಎದುರಿಗೆ ಉಸುರುವನೋ ಆತ ಸಭ್ಯ ಮನುಷ್ಯನೇ ಅಲ್ಲ. ವಿಶೇಷವಾಗಿ, ಯಾವನು ತನಗಿಂತಲೂ ದೊಡ್ಡ ಯೋಗ್ಯತೆಯವರ ಮನೆಯ ಹೆಣ್ಣು ವರಿಸಲಿಚ್ಛಿಸುವನೋ, ಆತನಂತೂ ಆ ವಿಷಯವನ್ನು ಸರ್ವಸಾಮಾನ್ಯವೆಂದು ಯಾರ ಮುಂದೂ ಹೇಳಲಾರ. ಮಹನೀಯರೇ, ಈ ಶಿಷ್ಟಾಚಾರಗಳೆಲ್ಲ ನನಗೆ ಗೊತ್ತಿಲ್ಲೆಂತಿಲ್ಲ.

ಡ್ಯೂಕನ ಆ ನಿಸ್ಸಂದಿಗ್ಧವಾದ ಉತ್ತರ ಕೇಳಿ ಬೋರ್ಲ ತುಸ ಸಮಾಧಾನ ತಾಳಿ:"ಡ್ಯೂಕಾ, ನೀನು ಯೋಗ್ಯವಾದುದನ್ನೇ ಹೇಳಿದೆ; ನಿನ್ನ ಮಾತಿನಂತೆ ಕೃತಿಯೂ ಇದ್ದಿದ್ದರೆ ಈ ಬಗೆಯ ಪ್ರಸಂಗವೇ ಉಂಟಾಗುತ್ತಿರಲಿಲ್ಲ. ನೀನು ಆ ಬಗ್ಗೆ ಯಾರೊಡನೆಯೂ ಮಾತನಾಡಿಲ್ಲೆನ್ನುತ್ತೀ; ಹಾಗಾದರೆ ಆ ಸಂಗತಿ ಇಷ್ಟು ಬೇಗನೆ ಬಹಿರಂಗವಾದುದು ಹೇಗೆ?' ಎಂದೆಂದು, ಅಂದೇ ಬೆಳಿಗ್ಗೆ ಪ್ರಸಿದ್ಧವಾದ ಒಂದು ವೃತ್ತಪತ್ರ ತೆರೆದು, ಅದರೊಳಗಿನ ಒಂದು ಸ್ತಂಭದ ಕಡೆಗೆ ಬೊಟ್ಟು ಮಾಡಿ ತೋರಿಸಿದ.

ಡ್ಯೂಕ ಟೇಬಲ್ಲಿಗೆ ಆತುಕೊಂಡು ಬೊಗ್ಗಿ ನಿಂತು, ಆ ಸ್ತಂಭವನ್ನೋದ ತೊಡಗಿದ. ಅದು ಈ ಬಗೆಯಾಗಿತ್ತು:—

'ಲಂಡನ್ನಿನ ಬಹು ಮರ್ಯಾದಸ್ತರ ಮನೆಯಲ್ಲಿ ಬೇಗನೆ ಒಂದು ವಿವಾಹಮಹೋತ್ಸವ ನಡೆಯತಕ್ಕದ್ದಿದೆ. ಮಿ. ಡ್ಯೂಕ ರಿಚರ್ಡ ವಿಲ್ಯಮ್ಸ ಎಂಬಾತ, ಮುಖ್ಯ ಮಂತ್ರಿ ಲಾರ್ಡ ಬೋರ್ಲರ ಏಕಮಾತ್ರ ಪುತ್ರಿಯಾದ ಲೇಡಿ ಎಲೀಸಿಯಾ ಎಂಬವಳನ್ನು ಪಾಣಿಗ್ರಹಣ ಮಾಡುವವನಿರುತ್ತಾನೆಂಬದು ನಮಗೆ ಖಾತ್ರಿಪೂರ್ವಕ ತಿಳಿದಿರುತ್ತದೆ; ಆದರೆ ಆ ಮಂಗಲ ಕಾರ್ಯದ ತಾರೀಖು ಮಾತ್ರ, ಇನ್ನೂ ನಿಶ್ಚಿತವಾಗಿಲ್ಲ.'

ಆತ ಆ ಸಂಗತಿಯನ್ನು ಎರಡೆರಡು ಸಾರೆ ತನ್ನ ಮನಸ್ಸಿನೊಳಗೇ ಓದಿಕೊಂಡು ನಂತರ ಮೋರೆಯನ್ನೆತ್ತಿ, ತುಸ ರೇಗಿಗೆದ್ದು:—'ಲಾರ್ಡಸಾಹೇಬರೇ, ಈ ಪತ್ರದೊಳಗಿನ ಈ ಸಂಗತಿಗಾಗಿ ತಾವು ನನ್ನನ್ನು ದೋಷಿಯೆಂದೆಣಿಸಬೇಡಿರಿ. ನನ್ನ ಜೀವನದೊಳಗಿನ ಈ ಪ್ರಾಮುಖ್ಯವಾದ ಅಭಿಲಾಷೆ ಈಡೇರೀತೆಂಬದನ್ನೂ, ಅದು ನಿನ್ನಿನ ರಾತ್ರಿಯಲ್ಲೇ ಸಫಲವಾದೀತೆಂಬದನ್ನೂ

ನಾನು ನಿನ್ನೆ ರಾತ್ರಿ ಹತ್ತು ಗಂಟೆಯ ವರೆಗೂ ನಂಬಿರಲಿಲ್ಲ. ಅಷ್ಟರೊಳಗೆ ನಾನು ಅದನ್ನು ಮುಂದಿಗೆ ಹೇಳುವದಂತೂ ದೂರೇ ಉಳಿಯಿತು.'

ಲಾರ್ಡ ಬೋರ್ಲ ತನ್ನ ಗಂಭೀರ ಮುಖದಿಂದ ವಿದ್ರೂಪದ ನಗೆಯನ್ನು ಹೊರಪಡಿಸಿ:—ನೀವು ಈ ವಿವಾಹದ ಬಗ್ಗೆ ನಿಮ್ಮ ಮನಸ್ಸಿನಲ್ಲಿ ನಿಶ್ಚಯಿಸಿಕೊಂಡಿರಬಹುದು; ಆದರೆ ವಾಗ್ದಾನದ ಪೂರ್ವದಲ್ಲಿ ಈ ವೃದ್ಧನ ಅನುಮತಿ ಪಡೆಯುವದು-ಕೇವಲ ಸ್ವೈರವರ್ತನದ ಈ ಯುಗದಲ್ಲೂ ಕೂಡ ಅತ್ಯವಶ್ಯವೆಂಬದು ನಿಮ್ಮಲ್ಲಿಯ ಯಾರಿಗೂ ಹೊಳೆಯದಿರುವದಕ್ಕೇ ನಾನು ಪರಮ ವಿಸ್ಮಿತನಾಗಿರುತ್ತೇನೆ. ಹೀಗೆ ಮಾಡುವದರಿಂದ ನೀವು ನನ್ನನ್ನು ಉಪೇಕ್ಷೆಗೊಳಿಸಿದಂತಾಯಿತೆಂಬದು ನಿಮಗೆ ಹೇಗೆ ತಿಳಿಯಲಿಲ್ಲ?

'ನಾನು ನಿನ್ನೆ ರಾತ್ರಿ ಹತ್ತುಗಂಟೆಯಾದಗಲೇ ತಮ್ಮ ಸಮ್ಮತಿ ಪಡೆಯಬೇಕೆಂದಿದ್ದೆ; ಆದರೆ ನನ್ನ ದುರ್ಭಾಗ್ಯದ ಮೂಲಕ ಆಗ ತಾವು ತಮ್ಮ ಶಯನಾಗಾರವನ್ನು ಪ್ರವೇಶಿಸಿದ್ದಿರಿ. ಅಂತೆಯೇ ನಾನು ಆಗ ತಮಗೆ ತೊಂದರೆ ಕೊಡುವ ಸಾಹಸಕ್ಕೆ ಪ್ರವೃತ್ತನಾಗಲಿಲ್ಲ. ತಾವು ಆ ನನ್ನ ಅಪರಾಧವನ್ನು ಕ್ಷಮಿಸ...........'

ಡ್ಯೂಕನ ಸಂಭಾಷಣವು ಸಂಪೂರ್ತಿಗೊಳ್ಳುವ ಮೊದಲೇ ಲೇಡಿ ಎಲೀಸೆ ತನ್ನ ಸೌಂದರ್ಯಕಿರಣಗಳಿಂದ ಆ ಕೋಣೆಯನ್ನು ಬೆಳಗುತ್ತ ತನ್ನ ತಂದೆಯ ಸಮ್ಮುಖದಲ್ಲಿ ಬಂದು ನಿಂತಳು. ಆವಳು ತೀಕ್ಷ್ಣದೃಷ್ಟಿಯಿಂದ ಅವರೀರ್ವರ ಮುಖಗಳನ್ನೊಮ್ಮೆ ನಿರೀಕ್ಷಿಸಿ, ತನ್ನ ತಂದೆಯ ಹೆಗಲ ಮೇಲೆ ಕೈಯಿಟ್ಟು:—ಅಪ್ಪಾ, ನಿಮ್ಮ ಕೇವಲ ಗಂಭೀರ ಮುಖ ಚರ್ಯೆಯಿಂದ ನೀವು ತೀರ ಕಠೋರರಂತೆ ತೋರುತ್ತಿದ್ದರೂ, ನಿಮ್ಮ ಸ್ವಭಾವವು ಕಠೋರವೂ ಅಲ್ಲ; ಕುಟಿಲವೂ ಅಲ್ಲ. ನಿಮ್ಮ ಅಂತಃಕರಣ ಎಂಥ ಉದಾರವಾದುದೆಂಬದೂ, ಎಷ್ಟು ಕೋಮಲವಾದುದೆಂಬದೂ, ಎಷ್ಟು ಸಹಾನುಭೂತಿಪರವಾದದ್ದೆಂಬದೂ ನನಗರಿಯದಿಲ್ಲ. ಅಪ್ಪಾ, ಈ ರುಕ್ಷವಾದ ಗಾಂಭೀರ್ಯ ನಿಮ್ಮಂತಹರಿಗೆ ಸ್ವಲ್ಪವೂ ಒಪ್ಪುವದಿಲ್ಲ. ಅಪ್ಪಾ, ನಾನು ಈ ಡ್ಯೂಕರನ್ನು ಇಷ್ಟೇಕೆ ಪ್ರೀತಿಸುತ್ತೇನೆಂಬದು ನಿಮಗೆ ತಿಳಿಯಿತೆ? ಈ ಡ್ಯೂಕರು ನಿಮಗೆ ಕೇವಲ ಪ್ರೀತಿಪಾತ್ರರೆಂದೇ ನಾನು ಇವರನ್ನು ಈ ಪರಿ ಪ್ರೀತಿಸುತ್ತೇನೆ.

ಮಗಳ ಮಾತಿನಿಂದ ಆ ವೃದ್ಧ ಹರ್ಷನಿರ್ಭರನಾದ. ಇದುವರೆಗಿನ ಆತನ ಗಾಂಭೀರ್ಯವೂ ಕಠೋರತೆಯೂ ಹೇಳಹೆಸರಿಲ್ಲದಂತಾದವು. ಆತ

ಆದರಪೂರ್ವಕವಾಗಿ ಮಗಳನ್ನಪ್ಪಿಕೊಂಡ. ವಾಚಕರೇ, ನಮ್ಮ ದೇಶ ದಲ್ಲಿ ಇಷ್ಟು ದೊಡ್ಡ ಕನ್ಯೆಯರನ್ನು ಯಾವ ಪಿತನೂ ಅಪ್ಪಿಕೊಳ್ಳಲಾರ; ಹಾಗೆ ಮಾಡುವದೆಂದರೆ, ನಮ್ಮ ಜನರ ಉಪಹಾಸ್ಯಕ್ಕೆ ಕಾರಣವಾಗುವದೇ ಸರಿ! ಆದರೆ ಪಾಶ್ಚಾತ್ಯ ದೇಶದ ರೀತಿ-ನಡಾವಳಿಗಳು ನಮ್ಮ ದೇಶದ ರೀತಿ ನಡಾವಳಿಗಿಂತ ತೀರ ಭಿನ್ನವಾಗಿರುತ್ತವೆ. ಇರಲಿ. ಬೋರ್ಲ ಎಲೀಸೆ ಯನ್ನು ಹಾಗೆ ಅಪ್ಪಿಕೊಂಡು:— ತಂಗೀ, ನನಗೆ ಬಹು ಸಂತೋಷ ವಾಯಿತಮ್ಮಾ. ನಿಮ್ಮ ಲಗ್ನದ ಪ್ರಸ್ತಾಪ ಕೇಳಿ ನಮಗೆ ಪರಮ ಸಂತೋಷ ವಾಗಿರುತ್ತದೆ. ನೀವಿಬ್ಬರೂ ಚಿರಕಾಲದವರೆಗೆ ಸುಖದಿಂದ ಬಾಳಿರೆಂದು ನಾನು ಆಶೀರ್ವದಿಸುತ್ತೇನೆ, ಎಂದು ನುಡಿದು, ಅವನು ತನ್ನ ಕನ್ಯೆಯ ನ್ನೊಮ್ಮೆ ಚುಂಬಿಸಿ, ತನ್ನ ಬಲಗೈಯನ್ನು ಡ್ಯೂಕನ ಕಡೆಗೆ ಚಾಚಿದನು. ಕೂಡಲೆ ಡ್ಯೂಕನು ಆತನ ಆ ಕೈಯನ್ನು ಆದರಪೂರ್ವಕವಾಗಿ ಅಗಳಾಡಿಸಿ ಶೆಕಹ್ಯಾಂಡ್ ಮಾಡುತ್ತ, ಹರ್ಷಭರದಿಂದ:—ಮಹನೀಯರೆ, ಈ ಪ್ರಸಂಗ ದಲ್ಲಿ ತಮ್ಮ ಧನ್ಯವಾದವನ್ನು ಯಾವ ಶಬ್ದಗಳಿಂದ ಮಾಡಬೇಕೆಂಬದೇ ನಾನರಿಯೆ. ನನಗುಂಟಾದ ಆನಂದವನ್ನು ವರ್ಣಿಸಲಿಕ್ಕೆ ನಮ್ಮ ಭಾಷೆ ಯಲ್ಲಿ ತಕ್ಕ ಶಬ್ದಗಳೇ ಇಲ್ಲದಾಗಿವೆ, ಎಂದು ನುಡಿದ.

'ತಮ್ಮಾ, ನೀನು ದೀರ್ಘ ಜೀವಿಯಾಗಿ ನನ್ನ ಈ ಪ್ರೇಮದ ಪುತ್ಥಳಿ ಯನ್ನು ಸಕಲ ವಿಪತ್ತುಗಳಿಂದಲೂ ಸಂರಕ್ಷಿಸು, ನನ್ನ ಹಿಂದಿನಿಂದ ಈ ಬ್ರಿಟಿಶ ರಾಜನೈತಿಕ ಕ್ಷೇತ್ರದಲ್ಲಿ ನನ್ನ ಸ್ಥಾನವನ್ನು ಭೂಷಿಸಲಿಕ್ಕೆ ಸಮರ್ಥ ನಾಗು. ಇದೇ ನನ್ನ ಅಂತಃಕರಣದ ಇಚ್ಛೆ.'

ಹೀಗೆಂದು ನುಡಿದು, ಆ ವೃದ್ಧ ಲಾರ್ಡ ಒಂದು ಕೈಯಿಂದ ತನ್ನ ಕನ್ಯೆಯ ಕೈಯನ್ನೂ ಮತ್ತೊಂದು ಕೈಯಿಂದ ಅಳಿಯನ ಕೈಯನ್ನೂ ಹಿಡಿದು, ಆ ಕೋಣೆಯ ಕಿಟಕಿಯ ಎದುರಿಗೆ ನಿಂತುಕೊಂಡ. ಆಗ ಆ ತ್ರಿವರ್ಗರ ಮನಸ್ಸಿನಲ್ಲಿಯೂ ಬೇರೆ ಬೇರೆ ಬಗೆಯ ಆಲೋಚನೆ ವೇಗವಾಗಿ ನಡೆದಿತ್ತು. ಹೀಗೆ ಅವರು ಅಲ್ಲಿ ಕೆಲ ನಿಮಿಷಗಳ ವರೆಗೆ ನಿಂತ ಬಳಿಕ ಎಲೀಸೆ ಡ್ಯೂಕನನ್ನು ಕುರಿತು:— ಡ್ಯೂಕರೆ, ಇಲ್ಲಿಯ ನಿಮ್ಮ ಕೆಲಸ ಮುಗಿದ ಬಳಿಕ ನನಗೆ ಭೆಟ್ಟಿಯಾಗಿರಿ. ವರ್ತಮಾನ ಪತ್ರಗಳಿಗೆ ಏನೇನು ಬರೆದು ತಿಳಿಸಬೇಕೆಂಬದನ್ನು ನಿಷ್ಕರ್ಷಿಸಬೇಕಾಗಿದೆ, ಎಂದಳು.

'ಆ ಕೆಲಸ ಈ ಮೊದಲೇ ಆಗಿಹೋಗಿದೆ!' ಎಂದೆಂದು, ಡ್ಯೂಕ ಈ ಮೊದಲಿನ ವೃತ್ತಪತ್ರದೊಳಗಿನ ಆ ಕಾಲಮಿನ ಕಡೆಗೆ ಬೊಟ್ಟುಮಾಡಿ ತೋರಿಸಿದನು.

ಆ ಸಂಗತಿಯನ್ನೋದಿ ಎಲೀಸೆ ಕರ್ಕಶ ದನಿಯಿಂದ ಒದರಿ:—ಡ್ಯೂಕರೆ, ಈ ಸರ್ವನಾಶವನ್ನು ಮಾಡಿದವರಾರು?

ಡ್ಯೂಕನಾದರೂ ಅದೇ ಬಗೆಯಾಗಿ ಚೀರಿ:—ಎಲೀಸಿಯಾ! ಈ ಸರ್ವನಾಶಕ್ಕೆ ಆದಾರು ಕಾರಣರಾಗಿರಬಹುದು? ಎಂದು ಪ್ರತಿಧ್ವನಿಯುಂಟಾಗುವಂತೆ ನುಡಿದನು.

ಬಳಿಕ ಲೇಡಿ ಎಲೀಸೆ ಅನ್ನುತ್ತಾಳೆ:—ಡ್ಯೂಕರೇ, ಈ ಸಂಗತಿಯನ್ನು ನಾನೇ ಪ್ರಕಟಿಸಿರುವೆನೆಂದು ನಿಮ್ಮ ತಿಳುವಳಿಕೆಯಾಗಿರುವದಷ್ಟೇ? ಇಲ್ಲ-ಇಲ್ಲ; ನೀವು ಹಾಗೆಂದು ಸರ್ವಥಾ ಭಾವಿಸಕೂಡದು. ನಮ್ಮ ತಂದೆಯ ಸಮ್ಮತಿ ಪಡೆಯದ ಹೊರತು ಈ ಸಂಗತಿ ಮೂರನೆಯವರ ಕಿವಿಗೆ ಕೂಡ ಮುಟ್ಟಬಾರದೆಂದು ನಾನು ನಿನ್ನೆ ಎಷ್ಟು ಎಚ್ಚರಪಟ್ಟಿದ್ದೆನೆಂಬದು ನಿಮಗೆ ಗೊತ್ತೇ ಇದೆ. ನಿನ್ನೆ ರಾತ್ರಿಯಲ್ಲಿ ನಾನು ನಿಮಗೆ ವಿವಾಹದ ಅಭಿವಚನವನ್ನಿತ್ತ ನಂತರ, ನಾನು ನನ್ನ ಮಲಗುವ ಕೋಣೆಗೆ ಹೋದೆ. ಅಲ್ಲಿ ನನ್ನ ಖಾಸ ದಾಸಿಯ ಹೊರತು ಅನ್ಯರಾರೂ ಇರಲಿಲ್ಲ. ಆ ನನ್ನದಾಸಿಯು ಮುಂದೆ ಈ ಅದ್ಭುತ ಗುಪ್ತ ರಹಸ್ಯವನ್ನು ಪ್ರಕಟಗೊಳಿಸಲಿಕ್ಕೆ ನಾನ ಷ್ಟೊಂದು ಅಜ್ಞ ಬಾಲಿಕೆಯಾಗಿಲ್ಲ.

'ನಿಮ್ಮಲ್ಲಿಂದ ಹೊರಬಿದ್ದ ನಾನು ನೆಟ್ಟಗೆ ನನ್ನ ಮನೆಗೆ ಹೋಗಿ ಓದು ಬರೆಯುವ ವ್ಯವಸಾಯದಲ್ಲಿ ನಿಮಗ್ನನಾದೆ. ಬಳಿಕ ಮಲಗಿ ನಿದ್ರೆ ಮಾಡಿದೆ. ನಾನು ಇದುವರೆಗೆ ಯಾರ ಮುಂದೂ ಈ ಪ್ರಸ್ತಾಪವನ್ನೆತ್ತಿರುವದಿಲ್ಲ' ಎಂದು ಡ್ಯೂಕ ಹೇಳಲು;

'ಹಾಗಾದರೆ ಈ ಅತ್ಯಂತ ಗುಪ್ತ ರಹಸ್ಯವು ಪತ್ರಿಕಾ ಮುಖಾಂತರ ಬೆಳಗಾಗುವಷ್ಟರಲ್ಲಿ ಹೀಗೆ ಪ್ರಕಟವಾದ ಬಗೆ ಹೇಗೆ? ಇದಂತೂ ಬಹು ಅದ್ಭುತ ವ್ಯಾಪಾರವಾದಂತಾಗಿದೆಯಲ್ಲವೆ?' ಎಂದು ಎಲೀಸೆ ಪ್ರಶ್ನೆ ಮಾಡಿದಳು. ಬಳಿಕ ಕೆಲ ಹೊತ್ತು ಸುಮ್ಮನೆ ಕುಳಿತು ಮತ್ತೆ ಅವಳೇ:—ನಮ್ಮ ತಂದೆಯು ಯಾವನೊಬ್ಬ ಸೇವಕ ಮರೆಗೆ ನಿಂತು ನಮ್ಮಿಬ್ಬರ ಮಾತು-ಕಥೆ

ಗಳನ್ನು ಕೇಳಿಕೊಂಡು, ಹೀಗೆ ಪತ್ರಿಕಾ ಮುಖಾಂತರ ಪ್ರಕಟಿಸಿರಬೇಕೆಂದು ನನ್ನ ಅನುಮಾನವಿದೆ. ಆತನೀ ಕೃತಿ ಎಂಥ ಘೋರತರ!

'ಆ ನೀಚನ ಪತ್ತೆಯಾದರೆ ನಾನು ಅವನನ್ನು ಚಬಕದಿಂದ ಚೆನ್ನಾಗಿ ಥಳಿಸಿಬಿಡುವೆ' ಎಂದು ಡ್ಯೂಕ ರಭಸದಿಂದ ನುಡಿದ.

ಆಗ ಲಾರ್ಡ ಬೋರ್ಲ ಡ್ಯೂಕನನ್ನುದ್ದೇಶಿಸಿ:—ಚಬಕದಿಂದ ಥಳಿಸುವ ಕೆಲಸವನ್ನು ಹಿಂದಿನಿಂದ ಮಾಡುವಿಯಂತೆ. ಈಗ ಮೊದಲು ನನ್ನ ಮಾತನ್ನಷ್ಟು ಕೇಳಿಕೊ. ಇಂದೇ ಮಧ್ಯಾಹ್ನ ೧೧।। ಗಂಟೆಗೆ ಪಾರ್ಲಿಮೆಂಟಿನ ಅಧಿವೇಶನವಿರುತ್ತದೆ. ಈಗಾಗಲೆ ಹತ್ತು ಹೊಡೆದಿರಬಹುದು. ನಾನು ಇನ್ನು ಇಲ್ಲಿ ಹೆಚ್ಚು ವೇಳೆ ನಿಲ್ಲಲಾರೆ. ನಿನ್ನ ಉಳಿದ ಕೆಲಸಗಳೇ ನಿದ್ದರೂ ತೀರಿಸಿಕೊಂಡು, ಬೇಗನೆ ನನ್ನನ್ನನುಸರಿಸು, ಎಂದು ಹೇಳಿದ.

ಲೇಡಿ ಎಲೀಸ ತಂದೆಯ ಅಪ್ಪಣೆ ಪಡೆದು ಹೊರಟು ಹೋದಳು. ಲಾರ್ಡ ಬೋರ್ಲ ತನ್ನ ಟಪಾಲನ್ನೋದಿಕೊಂಡು ಆ ಬಗ್ಗೆ ಡ್ಯೂಕನಿಗೆ ಹೇಳತಕ್ಕದ್ದನ್ನು ಹೇಳಿದ ನಂತರ ಅನ್ನುತ್ತಾನೆ:—ಆ ವರ್ತಮಾನಪತ್ರಕ್ಕೆ ಈ ಸಂಗತಿಯನ್ನು ಯಾರು ಕಳಿಸಿದರೆಂಬ ವಿಷಯದ ಬಗ್ಗೆ ನೀನು ಚನ್ನಾಗಿ ಶೋಧ ನಡೆಸು. ನನ್ನ ಮನೆಯೊಳಗಿನ ಗುಪ್ತ ಸಂಗತಿಗಳು ಪ್ರಕಟವಾಗುತ್ತಿದ್ದುದು, ಇದೇ ಮೊದಲಲ್ಲ. ನಿನಗೆ ನೆನಪಿರಬಹುದು, ಹಿಂದ ಕ್ಕೊಮ್ಮೆ ಹೀಗೆಯೇ ನನ್ನ ಮನೆಯೊಳಗಿನ ಒಂದು ಗುಪ್ತಸಂಗತಿ ಪ್ರಕಟವಾದ್ದರಿಂದ, ಪೇಟೆಯೊಳಗಿನ ಕುದುರೆಗಳು ಒಮ್ಮೆಲೆ ತುಟ್ಟಿಯಾಗಿಬಿಟ್ಟದ್ದವೆಂಬದನ್ನು! ನನ್ನ ಮನೆಯ ಸೇವಕರಿಂದ ಈ ಕೆಲಸವಾಗಿರಬಹುದೆಂದು ನನಗನಿಸುವದಿಲ್ಲ. ಅದ್ದರಿಂದ ಅವರಾರ ಮೇಲೆಯೂ ಅವಿಶ್ವಾಸಪಡುವ ಕಾರಣವಿಲ್ಲ. ಯಾವದೇ ಕಾರಣದಿಂದಾಗಲಿ ಬ್ರಿಟಿಶರಾಜ್ಯದ ಮುಖ್ಯಮಂತ್ರಿಯ ಮನೆಯ ಗುಪ್ತ ರಹಸ್ಯ ಹೀಗೆ ಪ್ರಕಟವಾಗುವದೆಂದರೆ, ಇಂಥ ಲಜ್ಜೆಯ ಹಾಗು ಅಪಮಾನದ ವಿಷಯುವು ಬೇರಿಲ್ಲೆನ್ನಬೇಕಾಗುತ್ತದೆ. ಭವಿಷ್ಯತ್ಕಾಲದಲ್ಲಿ ಈ ಪ್ರಕಾರ ನಡೆಯದ ಹಾಗೆ ನಾವು ಬಹು ಎಚ್ಚರ ಪಡಬೇಕಾಗಿದೆ. ಈ ಹೇಸಿ ಕೆಲಸಮಾರದೆಂಬದನ್ನು ಹೊರಹೊರಡಿಸಲೇಬೇಕು. ಅಪರಾಧಿಗಳನ್ನು ಚಬಕದಿಂದ ಚೆನ್ನಾಗಿ ಥಳಿಸಲಿಕ್ಕೆ ನನ್ನದೇನೂ ಅಡ್ಡಿಯಿಲ್ಲ; ಆದರೆ ನಿರಪರಾಧಿಗಳ ಬೆನ್ನು ಚಬಕದ ಪೆಟ್ಟಿಗೆ ಬಲಿಯಾಗದಂತೆ ಎಚ್ಚರಪಟ್ಟರೆ ತೀರಿತು.

## ೩ನೇ ತೆರೆ ಅಶ್ವಶಾಲೆಯ ಗುಪ್ತರಹಸ್ಯ

ಲೇಡಿ ಎಲೀಸೆ ಡ್ಯೂಕ ವಿಲ್ಯಮ್ಸನನ್ನು ವಿವಾಹವಾಗಲಿಕ್ಕೆ ಸಮ್ಮತಿಸಿದ್ದರಿಂದ, ಆತ ಪರಮ ಸಂತೋಷಗೊಂಡ. ಅವನು ಬ್ರಿಟಿಸ್ಸಿನ ಮುಖ್ಯ ಮಂತ್ರಿಯ ಅಳಿಯನಾದುದರಿಂದ, ಭವಿಷ್ಯಕಾಲದಲ್ಲಿ ಆತನೊಳ್ಳೇ ಘನತೆಗೇರುವನೆಂಬ ಬಗ್ಗೆ ಯಾರಿಗೂ ಅನುಮಾನವುಳಿಯಲಿಲ್ಲ. ಆತನಂಥ ನವ ತರುಣನಿಗೆ ಅದಕ್ಕಿಂತಲೂ ಹೆಚ್ಚಿನ ಅದಾವ ಆಕಾಂಕ್ಷೆಯಿರಬೇಕು? ಡ್ಯೂಕನ ಆ ಸುದೈವವು ಆತನ ಎಷ್ಟೋ ಜನ ಸರಿಸಮಾನಸ್ಕಂದರನ್ನು ಹಿಂಸೆಗೊಳಿಸಲಾರಂಭಿಸಿತು.

ಮುಖ್ಯ ಮಂತ್ರಿಯ ಮನೆಯ ಗುಪ್ತಸಂಗತಿಗಳು ಪ್ರಕಟವಾಗುವದನ್ನು ಕಂಡು ಡ್ಯೂಕ ಅತ್ಯಂತ ಖೇದಪಡಹತ್ತಿದ. ಆತನ ಪರಿಪೂರ್ಣ ಸುಖದಲ್ಲಿ ಇದೊಂದು ಹದನಾದ ಮುಳ್ಳಿನಂತೆ ಅವನ ಅಂತಃಕರಣದಲ್ಲಿ ಅಳುಕುತ್ತಿತ್ತು. ಆ ಗುಪ್ತರಹಸ್ಯ ಸ್ಫೋಟನದಿಂದ ಇದುವರೆಗೆ ಯಾವ ಅನರ್ಥವೊದಗಿರದಿದ್ದರೂ-ಮೇಲಾಗಿ ಆ ಗುಪ್ತವು ರಾಜಕೀಯುವಿರದಿದ್ದರೂ ಮನೆತನದ ಇಂಥ ಗುಪ್ತರಹಸ್ಯಗಳೇ ಯಾವ ಮನೆಯಲ್ಲಿ ಬಹಿರಂಗವಾಗುವವೋ, ಅಲ್ಲಿ ರಾಜಕೀಯ ಗುಪ್ತ ರಹಸ್ಯಗಳು ಬಹಿರಂಗವಾಗಲಿಕ್ಕೆ ತಡ ಹಿಡಿಯುವದೇ? ಹೀಗೆ ರಾಜಕೀಯ ಗುಪ್ತ ರಹಸ್ಯಗಳು ಬಹಿರಂಗವಾಗಹತ್ತಿದವೆಂದರೆ, ಮಂತ್ರಿಗಳ ಮಂತ್ರಾಲೋಚನೆಗೆ ಬೆಲೆಯುಳಿಯುವದೇ? ಆದ್ದರಿಂದ ಈ ಗುಪ್ತಸ್ಫೋಟನಕ್ಕೆ ಹೇಗೆ ತಡೆಯನ್ನುಂಟು ಮಾಡಬೇಕು? ಒಂದು ವೇಳೆ ಈ ಬಗೆಯ ಗುಪ್ತರಹಸ್ಯಗಳು ಶತ್ರುಪಕ್ಷದವರಿಗೆ ತಿಳಿದರೆ, ಆದರಿಂದ ಈ ಇಡಿ ಬ್ರಿಟಿಶ ಸಾಮ್ರಾಜ್ಯಕ್ಕೇ ಎಂಥ ಅನರ್ಥವೊಧಗುವದು? ಇತ್ಯಾದಿ ವಿಚಾರಗಳು ಡ್ಯೂಕನನ್ನು ಆವರಿಸಿದವು.

ಲಾರ್ಡ ಬೊರ್ಲ ಡ್ಯೂಕನಿಗೆ ತಿಳಿಸಿದ ಅನ್ಯ ಗುಪ್ತರಹಸ್ಯ ಪ್ರಕಟನದ 'ಸಂಗತಿಯೆಂದರೆ, ಅಶ್ವಶಾಲೆಯ ಗುಪ್ತರಹಸ್ಯ ಸ್ಫೋಟನವಾಗಿತ್ತು. ಆ ಸಂಗತಿ ಡ್ಯೂಕ ವಿಲ್ಯಮ್ಸ ಹಾಗು ಇನ್ನೊಬ್ಬ ವ್ಯಕ್ತಿ ಇವರಿಬ್ಬರ ಹೊರತು ಮತ್ತೆ ಯಾವ ಚರಾಚರ ಪ್ರಾಣಿಗಳಿಗೂ ಅವಗತವಾಗಿರಲಿಲ್ಲ. ಯಾವ ಇನ್ನೊಬ್ಬ ವ್ಯಕ್ತಿಗೆ ಆ ಸಂಗತಿ ಗೊತ್ತಾಗಿತ್ತೋ, ಆತನಾದರೂ ಯಾವ

ನೊಬ್ಬ ಹೊಣೆರಹಿತ ಮನುಷ್ಯನಾಗಿದ್ದಿಲ್ಲ. ಆತ ರಾಜಕೀಯ ಗುಪ್ತರಹಸ್ಯ ಗಳನ್ನು ತಿಳಿಯುವ ಶಾಖೆಯ (ಸಿ. ಆಯ್. ಡಿ.) ವನಾಗಿದ್ದನು. ಆತನೇ ನಮ್ಮ ಡ್ಯೂಕನ ಪರಮ ಮಿತ್ರನಾದ ಕ್ಯಾಪ್ಟನ್ ರೆನ್‌ಹ್ಯಾಮ ಎಡ್ವರ್ಡ. ಬಾಲ್ಯಕಾಲದಿಂದಲೂ ರೆನಹ್ಯಾಮನೂ ಡ್ಯೂಕನೂ ಒತ್ತಟ್ಟಿಗೆ ಕೂಡಿ ಆಡಿದ ವರು; ಕೂಡಿ ಶಾಲೆ-ಕಾಲೇಜುಗಳಲ್ಲಿ ಓದಿದವರು; ಹಾಗು ಜರ್ಮನ್ನ ಮಹಾಯುದ್ಧದ ಕಾಲಕ್ಕೆ ಮಾತೃಭೂಮಿಯ ಗೌರವಕ್ಕಾಗಿ ಕೂಡಿಯೇ ರಣಭೂಮಿಯನ್ನು ಪ್ರವೇಶಿಸಿದ್ದರು. ರೆನ್‌ಹ್ಯಾಮ ಡ್ಯೂಕನ ವಿಷಯಕ್ಕೆ ನಿರ್ವ್ಯಾಜ ಪ್ರೇಮವುಳ್ಳವ. ಡ್ಯೂಕ ಆ ಯುದ್ಧದಲ್ಲಿ ಭಯಂಕರ ಆಹತನಾಗಿ, ಇನ್ನು ಶತ್ರುಗಳ ಕೈಸೇರತಕ್ಕವನೇ, ಅಷ್ಟರಲ್ಲಿ ರೆನ್‌ಹ್ಯಾಮ ಅವನನ್ನು ಒಂದು ಸುರಕ್ಷಿತವಾದ ಸ್ಥಳಕ್ಕೆ ಒಯ್ದು, ಚೆನ್ನಾಗಿ ಶುಶ್ರೂಷೆ ಮಾಡಿದ. ಆತನ ಬಹು ವಿಧವಾದ ಸೇವಾ-ಶುಶ್ರೂಷೆಯಿಂದಲೇ ಡ್ಯೂಕ ಆಗಿನ ಆ ಕಠಿಣ ಪ್ರಸಂಗದೊಳಗಿಂದ ಪಾರಾಗಿ ಉಳಿದ. ಡ್ಯೂಕ ತನ್ನ ಮೈದೊಗ ಲಿನ ಮೊಚ್ಚೆಮಾಡಿಸಿ ರೆನಹ್ಯಾಮನ ಕಾಲಿಗೆ ತೊಡಿಸಿದ್ದರೂ ಆತನ ಉಪ ಕಾರ ತೀರುವಂತಿರಲಿಲ್ಲ. ತನ್ನ ವಿಷಯವಾಗಿ ಇಷ್ಟು ನಿಸ್ಸೀಮ ಪ್ರೇಮ ವುಳ್ಳ ತನ್ನ ಮಿತ್ರ, ತನ್ನ ಲಗ್ನದ ವಿಷಯವನ್ನು ಪತ್ರಿಕಾ ಮುಖಾಂತರ ವಾಗಿ ಪ್ರಕಟಗೊಳಿಸಿರಬಹುದೆನ್ನಲಿಕ್ಕೆ ಆತನ ನಾಲಿಗೆ ಹೇಗೆ ಏಳಬಹುದು? ಒಂದು ವೇಳೆ ಆತ ಹಾಗೆ ಅಂದರೆ, ಅವನನ್ನು ಎಂಥ ಕೃತಘ್ನನೆನ್ನಬೇಕಾ ದೀತು? ಆದರೆ ಆದರೆ............

ಮಹಾಯುದ್ಧದ ನಂತರ ರೆನ್‌ಹ್ಯಾಮ ದಂಡಿನೊಳಗಿನ ಚಾಕರಿ ಬಿಟ್ಟು ಸಿ. ಆಯ್. ಡಿ. ಖಾತೆಗೆ ಸೇರಿಕೊಂಡಿದ್ದ; ಅಲ್ಲದೆ ಆತನ ಆರ್ಥಿಕಾ ವಸ್ಥೆಯೂ ಇತ್ತೀಚೆಗೆ ತೀರ ಶೋಚನೀಯವಾಗಿತ್ತು. ಆದರೂ ರೆನ್‌ಹ್ಯಾಮ ನಂಥ ಕರ್ತವ್ಯಪರಾಯಣ ಸುಶಿಕ್ಷಿತ ವ್ಯಕ್ತಿ ಅರ್ಥಲೋಭಕ್ಕಾಗಿ ಮನಸೋತು ಮಂದಿಯ ಮನೆಯ ಕೌಟುಂಬಿಕ ಗುಪ್ತರಹಸ್ಯಗಳನ್ನು ಸಂಗ್ರಹಿಸಿ, ಪತ್ರಿಕಾ ಕರ್ತರಿಗೆ ಮಾರಿ, ದುಡ್ಡು ಗಳಿಸಿಯಾನೆಂಬ ಕಲ್ಪನೆಯೇ ಡ್ಯೂಕನಿಗೆ ರುಚಿಸ ಲಿಲ್ಲ. ರೆನ್‌ಹ್ಯಾಮನಂಥ ಸನ್ಮಿತ್ರನ ಮೇಲೆ ಇಂಥ ವಿಶ್ವಾಸಘಾತದ ಆರೋಪ ಹೊರಿಸುವದೆಂದರೆ, ಮಹಾ ಪಾಪಕರವೆಂದು ಡ್ಯೂಕನಿಗೆ ಅನಿಸಹತ್ತಿತು; ಆದರೆ ಈ ಮೊದಲಿನ ಅಶ್ವಶಾಲೆಯ ಗುಪ್ತರಹಸ್ಯ ಆ ರೆನ್‌ಹ್ಯಾಮನ ಹೊರತು ಅನ್ನರಾರಿಗೂ ತಿಳಿಯದಿರುವಾಗ, ಅದು ಹೊರಬಿದ್ದುದು ಹೇಗೆ?

ಆ ದೋಷ ಮತ್ತಾರ ಮೇಲೆ ಹೊರುವಂತಿದೆ? ಡ್ಯೂಕ ಈ ಬಗೆಯಾಗಿ ರೆನ್‌ಹ್ಯಾಮನ ವಿಷಯಕ್ಕೆ ಸಂದೇಹಗ್ರಸ್ತನಾಗಿರಲು, ಆವನಿಗೆ ಆ ಮೊದಲಿನ ಆ ವಿಚಿತ್ರ ಪ್ರಸಂಗದ ನೆನಪಾಯಿತು. ಅದೇನಂದರೆ:—

ಕೆಲ ದಿನಗಳ ಮುಂಚೆ ಲಾರ್ಡ ಜೋರ್ಲ ತನ್ನ ಕೆಲ ಜನ ಮಿತ್ರರಿಗೆ ಭೋಜನದ ನಿಮಂತ್ರಣವನ್ನಿತ್ತಿದ್ದ. ನಿಮಂತ್ರಿತರ ಸಂಖ್ಯೆ ಅತ್ಯಲ್ಪವಾಗಿತ್ತು; ಅಂದರೆ ಮೂರೇ ಜನರು. ಅವರಲ್ಲೊಬ್ಬ ಕ್ಯಾಪ್ಟನ್ ರೆನ್‌ಹ್ಯಾಮ ಎಡ್ವರ್ಡ, ಮಾರ್ಕ್ವಿಸ ಹ್ಯಾಮನ್ ಆರ್ಟನ್ನನೊಬ್ಬ, ಹಾಗು ಡ್ಯೂಕ ಆಫ್ ಸ್ಕಾಚ್ಚನೊಬ್ಬ; ಮತ್ತು ನಾಲ್ಕನೆಯವನೇ ನಮ್ಮ ಡ್ಯೂಕ ವಿಲ್ಯಮ್ಮ. ಮಾರ್ಕ್ವಿಸ ಬಹು ಭವ್ಯ ಪುರುಷನಾಗಿದ್ದ. ಆತನ ರಸಿಕತೆಗೆ ಹೋಲುವವರಿರಲಿಲ್ಲ. ಲಂಡನ್ನಿನ ಉಚ್ಚ ಪದಸ್ಥ ಸಮಾಜದಲ್ಲಿ ಅವನೊಳ್ಳೇ ಸರಳಸ್ವಭಾವದವನೆಂದು ಪ್ರಖ್ಯಾತನಾಗಿದ್ದ. ಆದರಿಂದ ಆತ ಎಲ್ಲೆಡೆಯಲ್ಲೂ ಸನ್ಮಾನ ಹೊಂದುತ್ತಿದ್ದ. ಡ್ಯೂಕ್ ಆಫ್ ಸ್ಕಾಚ್ಚನಂತೂ ಲಂಡನ್ನಿನ ಸಭ್ಯ ಸಮಾಜಕ್ಕೆ ಹೊಸಬನಲ್ಲ. ಆತನ ಅಶ್ವಶಾಲೆಯಲ್ಲಿ ಹಲವು ಸರ್ವೋತ್ಕೃಷ್ಟ ಕುದುರೆಗಳಿದ್ದು, ಕುದುರೆಯ ಶರ್ಯತ್ತುಗಳಲ್ಲಿ ಆತನ ಕುದುರೆಯನ್ನು ಸರಿಗಟ್ಟುವ ಕುದುರೆಗಳೇ ಇರಲಿಲ್ಲ. ಆದ್ದರಿಂದ ಡ್ಯೂಕ್ ಆಫ್ ಸ್ಕಾಚ್ಚ ಲಂಡನ್ನಿನ ಪ್ರತಿಯೊಬ್ಬ ವ್ಯಕ್ತಿಗೂ ಚೆನ್ನಾಗಿ ಪರಿಚಿತನಾಗಿದ್ದ.

ಲಾರ್ಡ ಜೋರ್ಲ ಅವರೆಲ್ಲರೊಡನೆ ಊಟಕ್ಕೆ ಕುಳಿತ. ಊಟ ಮುಗಿಯ ಬಂತು. ಇಷ್ಟರಲ್ಲಿ 'ಮುಖ್ಯ ಮಂತ್ರಿ ಪಾರ್ಲಿಮೆಂಟಿನ ಕಾಮನ್ಸ ಸಭೆಗೆ ಬರಬೇಕೆ'ಂದು ಟೆಲಿಫೋನಿನಿಂದ ಕರೆ ಬಂತು. ಅತ್ಯವಶ್ಯದ ಕೆಲಸವಾದ್ದರಿಂದ ಲಾರ್ಡನು ಅತಿಥಿಗಳ ಉಳಿದ ಸತ್ಕಾರದ ಭಾರವನ್ನು ಡ್ಯೂಕ ವಿಲ್ಯಮ್ಮನಿಗೆ ಒಪ್ಪಿಸಿ, ತಾನು ತ್ವರಿತಗತಿಯಿಂದ ಹೊರಟ.

ಊಟವಾದ ಬಳಿಕ ಅತಿಥಿಗಳು ಸಿಗರೇಟು ಸೇದುತ್ತ ಹರಟೆಗೆ ಪ್ರಾರಂಭಿಸಿದರು. ಕಡೆಗೆ ಎಲ್ಲರೂ ಕೂಡಿ ಇಸ್ಪೇಟಾಡಹತ್ತಿದರು. ರಾತ್ರಿ ಹನ್ನೊಂದಾದ ಮೇಲೆ ಹ್ಯಾಮನ್ ಆರ್ಟನ್ನ ರೆನ್‌ಹ್ಯಾಮನಿಗೆ ಗಡಿಯಾರ ತೋರಿಸಿ:—ಈಗ ಹೊತ್ತಾಯಿತು. ಇಷ್ಟು ರಾತ್ರಿಯಾಗಿರಬಹುದೆಂಬದು ತಿಳಿಯಲೇ ಇಲ್ಲ. ಈ ಆಟ ಮುಗಿಯುತ್ತಲೇ ನಾನಿಂದು ನಮ್ಮ ಅಮೇರಿಕನ್ ವಕೀಲರ ಮನೆಗೆ ಹೋಗಬೇಕಾಗಿದೆ. ಅಲ್ಲಿ ಇಂದು ನಾಚು-ರಂಗಿನ ಕಾರ್ಯಕ್ರಮವಿದೆ. ನಾನು ಅಲ್ಲಿಗೆ ಹೋಗದಿದ್ದರೆ ನಡೆಯುವಂತಿಲ್ಲ.

ಸ್ಕಾಚ್ಚದ ಡ್ಯೂಕರೇ, ನೀವು ನಾಳಿನ ಕುದುರೆಯ ಶರ್ಯತ್ತಿನಲ್ಲಿ ಆದಾವ ಕುದುರೆಗೆ ಹಣಕಟ್ಟಿ ಮೊದಲನೇ ಇನಾಮು ಪಡೆಯಬೇಕೆಂದಿರುತ್ತೀರಿ? ಎಂದು ಕೇಳಿದ.

ಡ್ಯೂಕ್ ಆಫ್ ಸ್ಕಾಚ್ಚ ನಕ್ಕು:—ನಿಮ್ಮ ಪ್ರಶ್ನದ ಉತ್ತರ ಭವಿಷ್ಯತ್ಕಾಲದ ಗರ್ಭದಲ್ಲಿರುತ್ತದೆ. ಅದನ್ನು ತಿಳಿಯುವ ಬಗ್ಗೆ ನಿಮ್ಮ ಆಗ್ರಹ ವಿಷ್ಟೇಕೆ?

ಹ್ಯಾಮನ್ ಆರ್ಟಿನ್ನ ಸ್ಕಾಚ್ಚದ ಡ್ಯೂಕನಿಗೆ ಆ ಬಗ್ಗೆ ಮತ್ತೆ ಮತ್ತೆ ಕೇಳಿದ; ಆದರೆ ಆತ ಆರ್ಟಿನ್ನನ ಪ್ರಶ್ನೆಗೆ ಉತ್ತರಕೊಡುವ ಗೋಜಿಗೆ ಹೋಗಲಿಲ್ಲ. ಕಡೆಗೂ ಯೋಗ್ಯ ಉತ್ತರ ದೊರೆಯದ್ದರಿಂದ ಆರ್ಟಿನ್ನ:—ನನ್ನ ಈ ಪ್ರಶ್ನೆಗೆ ಅನಧಿಕಾರದ ಚರ್ಚೆಯೆಂದು ನೀವು ಮನಸ್ಸು ಮಾಡಿರುವಂತಿದೆ. ಒಳ್ಳೇದು. ನಾನಿನ್ನು ಹೊರಟೆ.

ಹ್ಯಾಮನ್ ಆರ್ಟಿನ್ನಹೊರಟು ಹೋದ ಮೇಲೆ ಸ್ಕಾಚ್ಚದ ಡ್ಯೂಕನು ಡ್ಯೂಕ ವಿಲ್ಯಮ್ಸನಿಗೆನ್ನುತ್ತಾನೆ:— ಈತನನ್ನು ನಾನು ನಂಬಲಾರೆ; ನಾನು ಈತನನ್ನೇಕೆ ನಂಬಲಾರೆನೆಂಬ ಬಗ್ಗೆ ನೀವಾರೂ ಕೇಳಬಾರದು. ಈ ಮಾರ್ಕ್ವಿಸ ನನ್ನಿಂದ ಯಾವ ಸಂಗತಿ ತಿಳಿಯಲಪೇಕ್ಷಿಸಿದ್ದನೋ, ಅದು ಬಹು ಗೌಪ್ಯವಾದುದು, ನನ್ನ ಅಶ್ವಶಾಲೆಯ ಮುಖ್ಯಸ್ಥ ಕೂಡ ಅದನ್ನು ಅರಿಯ. ಆದರೂ ನಾನು ಅದನ್ನು ನಿಮಗೆ ಹೇಳಲಿಕ್ಕೆ ಅಂಜುವದಿಲ್ಲ. ನಾನು ನನ್ನ ಆ 'ಶ್ವೇತಾಂಬರಿ' ಕುದುರೆಯ ಮೂಲಕ ನಾಳಿನ ಆ ಇನಾಮು ಗೆಲ್ಲಲಿಕ್ಕೆ ಪ್ರಯತ್ನಿಸುತ್ತೇನೆ.

ಡ್ಯೂಕ ಪರಮಾಶ್ಚರ್ಯದಿಂದ:—ಹಾಗಲ್ಲವೆ? ಈ ಸಂಗತಿ ಪ್ರಕಟವಾದರೆ, ನಾಳಿನ ಶರ್ಯತ್ತಿನಲ್ಲಿ ಜೂಜು ಕಟ್ಟಿದವರಲ್ಲೆಲ್ಲ ಒಳ್ಳೇ ಗುಲ್ಲೇಳಬಹುದಲ್ಲವೆ? ಈ ಸಂಗತಿ ನಾಳೆ ಹಣತೊಡುವವರಿಗೆ ಬಹು ಬೆಲೆಯುಳ್ಳದ್ದಾಗಿರುತ್ತದಲ್ಲವೆ?

ಒಳ್ಳೇದು, ನಾನಿನ್ನು ಹೊರಡುವೆ. ನೀವಿಬ್ಬರೇ ಇಸ್ಪೀಟೆನಾಟವನ್ನಾಡಿರಿ. ನಾನು ಈಗಿಂದೀಗಲೇ ಪರರಾಷ್ಟ್ರ ಕಚೇರಿಗೆ ಹೋಗಬೇಕಾಗಿದೆ. ಸ್ಕಾಚ್ಚದ ಡ್ಯೂಕರೇ, ನಿಮ್ಮ ಈ ಗುಪ್ತ ರಹಸ್ಯ ನನ್ನಿಂದ ಎಂದಿಗೂ ಬಹಿರಂಗವಾಗಲಿಕ್ಕಿಲ್ಲ, ತಿಳಿಯಿತೇ,' ಎಂದು ರೆನ್ ಹ್ಯಾಮನೆನ್ನಲು,

'ನಾವು ನಿನ್ನಲ್ಲಿ ಅಷ್ಟು ಅವಭರವಸೆ ಪಡುವೆವೊ? ನಿನ್ನಿಂದ ಈ ಗುಪ್ತ ರಹಸ್ಯ ಬಹಿರಂಗವಾದೀತೆಂಬ ಅನುಮಾನವಿದ್ದರೆ ನಾವು ಇದನ್ನು ನಿನ್ನ ಮುಂದೆ ಹೇಳುತ್ತಿದ್ದಿಲ್ಲ.' ಎಂದು ಡ್ಯೂಕ್ ಆಫ್ ಸ್ಕ್ಯಾಚ್ಚ ಉತ್ತರ ಕೊಡಲು, ಕೂಡಲೆ ರೆನ್‌ಹ್ಯಾಮ ಅಲ್ಲಿಂದ ಹೊರಟು ಹೋದ. ಬಳಿಕ ಡ್ಯೂಕ ಸ್ಕ್ಯಾಚ್ಚನನ್ನುದ್ದೇಶಿಸಿ:—ಸ್ಕ್ಯಾಚ್ಚರೇ, ನಾಳಿನ ಶರ್ಯತ್ತಿನಲ್ಲಿ ನೀವೂ ಪಣಕಟ್ಟುವಿರೇನು?

'ಕಟ್ಟುವೆನು; ಆದರೆ ಅತ್ಯಲ್ಪ ಹಣಕ್ಕಾಗಿ ಕಟ್ಟುವವನಿರುತ್ತೇನೆ. ನನ್ನ ಸ್ವಂತದ ಕುದುರೆಗಳನ್ನು ಶರ್ಯತ್ತಿಗೆ ಕಳಿಸಿದಾಗ ನಾನು ಬಹುಶಃ ಪಣ ಕಟ್ಟುತ್ತಿರುವದಿಲ್ಲ. ಕುದುರೆಯ ಶರ್ಯತ್ತಿನಂತಹ ಉಚ್ಚ ಶ್ರೇಣಿಯ ಬೇರೊಂದು ಶ್ರೇಷ್ಠ ಆಟವಿಲ್ಲ. ನನ್ನಂತೆ ಯಾವನು ತನ್ನ ಕುದುರೆಗಳನ್ನು ಈ ಈ ಶರ್ಯತ್ತಿಗಾಗಿ ಬಿಡುವನೋ, ಅವನಿಗೆ ಜೂಜಿನಾಟದವರಿಗಿಂತ ಹೆಚ್ಚು ಲಾಭವಾಗುತ್ತಿರುತ್ತದೆ; ಅಲ್ಲದೆ ಜೂಜಿನಾಟದವರಿಗಿಂತ ಈ ಕುದುರೆಯ ಶರ್ಯತ್ತಿನಾಟದವರಿಗೆ ಹೆಚ್ಚು ಮರ್ಯಾದೆಯುಂಟು. ಅಂತೆಯೇ ಕುದುರೆಯ ಆಟದಲ್ಲಿ ಜೂಜು ಕಟ್ಟುವ ಬಗ್ಗೆ ನಾನು ಅಷ್ಟೊಂದು ವಿರೋಧಿಯಾಗಿರುವದಿಲ್ಲ.'

ಹೀಗೆ ಅವರೀರ್ವರೂ ಎಷ್ಟೋ ಹರಟೆ ಕೊಚ್ಚುತ್ತ ಇಸ್ಪೀಟಿನಾಟದಲ್ಲಿ ನಿಮಗ್ನರಾದರು. ಅಂದಿನ ಇಸ್ಪೇಟಿನಾಟದಲ್ಲಿ ನಾಲ್ಕು ನಾಲ್ಕುಸಾರೆಯಾದರೂ ಸ್ಕ್ಯಾಚ್ಚನೇ ಸೋತ. ಆಗ ಸ್ಕ್ಯಾಚ್ಚನು ಮುಗುಳುನಗೆಯಿಂದ:-ಡ್ಯೂಕಾ, ಇಂದಿನ ಈ ಆಟದಲ್ಲಿ ನಿನಗೇ ಸಂಪೂರ್ಣ ಜಯವಾಗಿದ್ದರೂ, ಆ ಬಗ್ಗೆ ನನಗೆ ಯತ್ಕಿಂಚಿತ್ತೂ ದುಃಖವಿಲ್ಲ. ಇನ್ನು ನಿನ್ನ ಭಾಗ್ಯೋದಯ ಕಾಲವೇ ಬಂದಿದೆ. ಲಂಡನ್ನಿನ ಮಹಿಲಾ ಸಮಾಜದೊಳಗಿನ ಸರ್ವಶ್ರೇಷ್ಠ ರತ್ನವು ನಿನ್ನ ಹಸ್ತಗತವಾಗತಕ್ಕದ್ದಿದೆ. ಆದ್ದರಿಂದ ಡ್ಯೂಕಾ, ನಿನ್ನಂತಹ ಸುಖಿಗಳಾರಿರುವರು? ದೇವರು ನಿನ್ನನ್ನು ಹೀಗೆಯೇ ಉತ್ತರೋತ್ತರ ಸುಖಿಯನ್ನಾಗಿಮಾಡಲಿ. ನಿಮ್ಮಗಳ ದಾಂಪತ್ಯ ಸುಖವು ಮಧುಮಯವಾಗಲಿ. ನಿಮ್ಮ ಉನ್ನತಿ ಪಥವು ನಿಷ್ಕಂಟಕವಾಗಲಿ, ಎಂದು ಹರಸಿ, ಅಲ್ಲೀದ ಹೊರಟು ಹೋದ.

ಮರು ದಿನ ಬೆಳಿಗ್ಗೆ ಡ್ಯೂಕನೂ, ರೆನ್‌ಹ್ಯಾಮನೂ ಕೂಡಿ ಕ್ಲಬ್ಬಿನ ಕಡೆಗೆ ಸಾಗಿದ್ದರು. ಅವರು ಕೆಲ ದಾರಿ ಸಾಗುವಷ್ಟರಲ್ಲಿ ಡ್ಯೂಕ ಆಫ್ ಸ್ಕ್ಯಾಚ್ಚ ಭವ್ಯವಾದುದೊಂದು ಕುದುರೆಯನ್ನೇರಿ ಎದುರಿನಿಂದ ಮಂದವಾಗಿ ಬರುತ್ತಿದ್ದ.

ಅಷ್ಟರಲ್ಲಿ ಸ್ಕ್ಯಾಚ್ಚನ ಬಳಿಗೆ ಬೇರೆ ಎರಡು ವ್ಯಕ್ತಿಗಳು ಬರಲು, ಆತ ತನ್ನ ಕುದುರೆಯನ್ನು ನಿಲ್ಲಿಸಿ ಅವರೊಡನೆ ಮಾತಾಡಹತ್ತಿದ. ಆ ತ್ರಿವರ್ಗರಲ್ಲಿ ಮಾತು ನಡೆದಿರಲಿಕ್ಕೆ ಡ್ಯೂಕನೂ ರೆನ್‌ಹ್ಯಾಮನೂ ಅಲ್ಲಿಗೆ ಹೋದರು. ಇವರನ್ನು ಕಂಡ ಕೂಡಲೆ ಡ್ಯೂಕ ಆಫ್ ಸ್ಕ್ಯಾಚ್ಚ ಇವರ ಕಡೆಗೊಮ್ಮೆ ಒಳ್ಳೇ ತಿರಸ್ಕಾರ ದೃಷ್ಟಿಯಿಂದ ನೋಡಿ, ಉರಿಮೊಗದಿಂದಲೇ ಅಲ್ಲಿಂದ ಹೊರಟುಹೋದ. ಆಗಿನ ಆತನ ಸ್ಥಿತಿ-ಗತಿಗಳನ್ನು ಕಂಡವರು ಡ್ಯೂಕ-ರೆನ್‌ಹ್ಯಾಮರಿಗೂ ಸ್ಕ್ಯಾಚ್ಚನಿಗೂ ಸ್ವಲ್ಪವೂ ಮೈತ್ರಿಯಿಲ್ಲದೆ, ಇವರಲ್ಲಿ ಅತ್ಯಂತ ದ್ವೇಷ ಭಾವವಿದೆಯೆಂದು ತರ್ಕಿಸಬಹುದಾಗಿತ್ತು. ಸ್ಕ್ಯಾಚ್ಚ ತಮ್ಮ ಕೂಡ ಸ್ವಲ್ಪವೂ ಮಾತನಾಡದೆ, ಹಾಗೆಯೇ ಹೊರಟು ಹೋದುದನ್ನು ಕಂಡು ಅವರೀರ್ವರಿಗೂ ಬಲು ಅಪಮಾನವೆನಿಸಿತು. ಕೇವಲ ಅಪರಿಚಿತ ವ್ಯಕ್ತಿಯಂತೆ ತಮ್ಮ ಬಳಿಯಿಂದ ಹೊರಟು ಹೋದ ಆ ಡ್ಯೂಕ ಆಫ್ ಸ್ಕ್ಯಾಚ್ಚನನ್ನು ಕಂಡು ಅವರೀರ್ವರಲ್ಲಿ ಕ್ರೋಧ-ಸಂತಾಪಗಳುಂಟಾದವು. ಆಗ ಡ್ಯೂಕ ರೆನ್‌ಹ್ಯಾಮನನ್ನು ಕುರಿತು: ಈ ಸ್ಕ್ಯಾಚ್ಚ ಇಂದು ಹೀಗೇಕೆ ನಡೆದ? ಈತನಿಗೆ ನಮ್ಮ ಗುರ್ತು ಹತ್ತಲಿಲ್ಲೇನು? ನಿನ್ನೆ ಬೆಳತನಕ ನನ್ನೊಡನೆ ಆಡಿ, ನಾನಾ ಬಗೆಯ ಸುಖ-ಸಲ್ಲಾಪಗಳಲ್ಲಿ ಕಾಲ ಕಳೆದ ಈತ ಇಂದು ಹೀಗೇಕೆ ಹೊರಟು ಹೋಗಿರಬಹುದು? ಎಡ್ವರ್ಡ್, ಈ ಬಗ್ಗೆ ನಿನ್ನ ಅಭಿಪ್ರಾಯವೇನು?

'ಡ್ಯೂಕಾ, ಮತ್ತೇನಿರಬೇಕು? ಈ ಜೂಜುಗಾರರ ಬಗೆಯೇ ಹೀಗೆ? ಇವರು ಏರಿದಾಗೊಂದು ತರಹ, ಇಳಿದಾಗೊಂದು ತರಹದ ವೃತ್ತಿಯವರು. ಜೂಜಿನಾಟದಿಂದ ಪ್ರಾಪ್ತವಾಗಿರುವ ಅಪಾರ ಸಂಪತ್ತಿಯ ದುರ್ಮದವೇ ಈ ಸ್ಕ್ಯಾಚ್ಚನಲ್ಲಿ ತುಂಬಿ ತುಳುಕುತ್ತಿದೆ.'

'ಛೇ-ಛೇ! ಸ್ಕ್ಯಾಚ್ಚ ಅಂಥವನಲ್ಲೆಂದು ನನ್ನ ಇದುವರೆಗಿನ ಅನುಭವದಿಂದ ಹೇಳಬಲ್ಲೆನಾದರೂ, ಇಂದು ಆತನು ಹೀಗೇಕೆ ವರ್ತಿಸಿದನೆಂಬದು ತಿಳಿಯದಾಗಿದೆ. ಇಂದಿನ ಆತನ ಈ ವರ್ತನದ ಕಾರಣವು ಮಾತ್ರ ಅತ್ಯಂತ ಗೂಢವಾಗಿದೆ. ಅದನ್ನು ಅನುಮಾನಿಸುವದು ನನಗಸಾಧ್ಯವಾಗಿದೆ.'

'ಬೆಂಕೀ ಹಚ್ಚಿತು ಆತನ ಆ ಕಾರಣಕ್ಕೆ! ಆತನ ಈ ಲಹರೀ ಸ್ವಭಾವಕ್ಕೆ ಕಾರಣವೇನಿರಬೇಕು? ನಾವಾದರೂ ಆತನ ಜಂಬವನ್ನಷ್ಟೇಕೆ ನಡೆಸಬೇಕು? 'ಶಠಂ ಪ್ರತಿ ಶಾಠ್ಯಂ' ಎನ್ನುವಂತೆ ಇನ್ನು ಮೇಲೆ ಅವನೊಡನೆ ನಾವೂ ಹಾಗೆಯೇ ನಡೆದರೆ ತೀರಿತು. ಡ್ಯೂಕ ಆಫ್ ಸ್ಕ್ಯಾಚ್ಚನಾದರೇನು,

ಮೇಲಿನಿಂದಿಳಿದು ಬಂದಿರುತ್ತಾನೋ? ಇಷ್ಟು ಅಸಭ್ಯಾಚರಣೆ ಇಂಥ ದೊಡ್ಡ ಮನುಷ್ಯನಿಗೆ ಶೋಭಿಸುವದೇ?'

ಹೀಗೆ ಆ ಉಭಯತರು ಸ್ಕಾಚ್ಚನ ಬಗ್ಗೆ ಚರ್ಚಿಸುತ್ತ ಕ್ಲಬ್ಬನ್ನು ಪ್ರವೇಶಿಸಿದರು. ಇವರು ಕ್ಲಬ್ಬಿನೊಳಗಿನ ವಾಚನಾಲಯವನ್ನು ಪ್ರವೇಶಿಸುತ್ತಲೇ ಅಲ್ಲಿದ್ದ ಒಬ್ಬ ಸನ್ಮಾನನೀಯ ಅರ್ಲ ಡ್ಯೂಕನನ್ನು ಕುರಿತು:— ಡ್ಯೂಕಾ, ನೀನು ಕುದುರೆಯ ಶರ್ಯತ್ತಿನಲ್ಲಿ ಜೂಜು ಕಟ್ಟಿಲ್ಲವೋ? ಇಂದು ಸ್ಕಾಚ್ಚರ ಆ ಶ್ವೇತಾಂಬರಿ ಕುದುರೆಗೆ ಜೂಜು ಕಟ್ಟಿದ ಜನರಿಗೆ ಒಳ್ಳೇ ಲಾಭವಾಗದಿರಲಿಕ್ಕಿಲ್ಲ, ಎಂದಂದ.

'ಅದೆಂತು? ನಿಮಗೆ ಅದು ಹೇಗೆ ತಿಳಿಯಿತು? ನಿಮ್ಮ ಈ ತರ್ಕಕ್ಕೆ ಆಧಾರವೇನು?' ಎಂದು ಡ್ಯೂಕನೂ ರೆನ್‌ಹ್ಯಾಮನೂ ಕೂಡಿ ತವಕದಿಂದ ಪ್ರಶ್ನೆ ಮಾಡಲು, ಆ ಅರ್ಲ ಅಲ್ಲಿಯೇ ಟೇಬಲ್ಲಿನ ಮೇಲಿದ್ದ ಒಂದು ದೈನಿಕ ಪತ್ರ ತೆರೆದು, ಅದರೊಳಗಿನದೊಂದು ಪ್ರಾಮುಖ್ಯ ಸಂಗತಿ ತೋರಿಸಿದ. ಕೂಡಲೆ ಅವರಿಬ್ಬರೂ ಅದನ್ನು ಏಕಸಮಯಾವಚ್ಛೇದದಿಂದ ಓದತೊಡಗಿದರು. ಆ ಸಂಗತಿಯೇನಂದರೆ:—

ಇಂದಿನ ಕುದುರೆಯ ಶರ್ಯತ್ತಿನಲ್ಲಿ

## ಶ್ವೇತಾಂಬರಿಗೇ ವಿಜಯ.

ಎಂಬ ದೊಡ್ಡ ಅಕ್ಷರಗಳ ಶಿರೋಲೇಖದ ಕೆಳಗೆ

'ನಮಗೆ ಖಾತ್ರಿಪೂರ್ವಕವಾಗಿ ತಿಳಿದಿರುವದೇನಂದರೆ, ಇಂದಿನ ಕುದುರೆಯ ಶರ್ಯತ್ತಿನಲ್ಲಿ ಡ್ಯೂಕ ಆಫ್ ಸ್ಕಾಚ್ಚರು ತಮ್ಮ ಸರ್ವಶ್ರೇಷ್ಠವಾದ 'ಶ್ವೇತಾಂಬರಿ' ಎಂಬ ಅಶ್ವವನ್ನು ಜೂಜಿಗಾಗಿ ನಿಲ್ಲಿಸುವವರಿದ್ದು, ಅದಕ್ಕೇ ಅವರು ತಮ್ಮ ಪಣ ಕಟ್ಟಿರುತ್ತಾರಾದ್ದರಿಂದ, ಅದೇ ಕುದುರೆಯು ವಿಜಯ ಹೊಂದಲಿರುವದು.' ಎಂಬ ಸಂಗತಿಯು ಸ್ಫುಟವಾಗಿ ಬರೆಯಲ್ಪಟ್ಟಿತ್ತು.

ಆ ಸಂಗತಿಯನ್ನೋದಿ ಡ್ಯೂಕ ಕ್ರೋಧಸಂತಪ್ತನಾಗಿ:— ಎಡ್ವರ್ಡ, ಈ ನಿಂದ್ಯ ಕೆಲಸ ನಿನ್ನದೇ ಆಗಿದೆ. ಇದನ್ನು ಪ್ರಕಟಿಸಿ, ನೀನು ಬಹು ಅನ್ಯಾಯ ಮಾಡಿರುತ್ತೀ, ಎಂದಂದ.

ಕೆಲ ಕ್ಷಣಗಳ ವರೆಗೆ ಸುಮ್ಮನಿದ್ದು, ರೇನ್‌ಹ್ಯಾಮನನ್ನುತ್ತಾನೆ:— ಡ್ಯೂಕಾ, ಇದರಲ್ಲಿ ನನ್ನ ತಪ್ಪೇನು? ನಿನ್ನ ಮನಸ್ಸಿನ ಇಂಗಿತವಾದರೂ ಏನ.?

'ಸಾಕು ಮಾಡು, ನಿನ್ನೀ ಚಾರ್ವಾಕತನವನ್ನು. ನಿನ್ನೆ ರಾತ್ರಿ ಹನ್ನೆರಡರ ನಂತರ ಈ ಸುದ್ದಿಯನ್ನು ನೀನು ಈ ಪತ್ರಿಕಾಕರ್ತನಿಗೆ ತಿಳಿಸಿದೆ. ಅಂತೆಯೇ ಅದು ಇಂದು ಬೆಳಗಾಗುವಷ್ಟರಲ್ಲಿ ಪ್ರಕಟವಾಗಿ ಬಿಟ್ಟಿದೆ. ಈ ಕಾರಣದಿಂದಲೇ ಸ್ಕಾಚ್ಚ ನಮ್ಮನ್ನು ಅಲ್ಲಿ ಹಾಗೆ ಅಪಮಾನಗೊಳಿಸಿರಬಹುದಾಗಿದೆ. ಆ ಶ್ವೇತಾಂಬರಿಯ ಸಂಗತಿಯು ನಮ್ಮ ಮೂವರ ಹೊರತು ಮತ್ತಾರಿಗೂ ಗೊತ್ತಿದ್ದಿಲ್ಲ; ಅಂದ ಬಳಿಕ ಇದನ್ನು ಪ್ರಕಟಿಸಿದವರಾರು?'

'ಡ್ಯೂಕಾ, ನಿನ್ನ ಮನೋಗತ ತಿಳಿದಂತಾಯಿತು; ಆದರೆ ಮಿತ್ರಾ, ನಾನು ಆ ಬಗೆಯ ಕೀಳು ಯೋಗ್ಯತೆಯವನೆಂದು ನಿನಗೆ ಅನಿಸಿದ್ದಾದರೂ ಹೇಗೆ? ಕೆಲ ಗಿನಿಗಳ ಲೋಭಕ್ಕಾಗಿ ನಾನಿಂಥ ನೀಚ ಕೆಲಸಕ್ಕೆ ಪ್ರವೃತ್ತನಾಗುವೆನೇ? ವಿಚಾರ ಮಾಡಿ ಮಾತನಾಡು' ಎಂದು ರೆನ್‌ಹ್ಯಾಮು ಸೌಮ್ಯವಾಗಿಯೇ ನುಡಿದ.

ರೆನ್ ಹ್ಯಾಮನ ಆ ನುಡಿಯು ಡ್ಯೂಕನ ಅಂತಃಕರಣಕ್ಕೆ ಚೆನ್ನಾಗಿ ನಟ್ಟಿತು. ಆದರಿಂದ ಆತ ಕ್ಷಣ ಕಾಲದ ವರೆಗೆ ಚಿಂತಾಮಗ್ನನಾದ. ಬಳಿಕ ಆತ ಪಶ್ಚಾತ್ತಾಪವಿದಗ್ಧ ಭಾವದಿಂದ:—ಮಿತ್ರಾ, ಎಡ್ವರ್ಡ್, ಈ ಕೃತಿಯ ಬಗ್ಗೆ ನನಗೆ ನಿನ್ನಲ್ಲಿ ಸಂದೇಹವುಂಟಾದದ್ದೇನೋ ನಿಜ; ಆದರೆ ವಿಚಾರ ಮಾಡುತ್ತಿರಲಿಕ್ಕೆ ನಿನ್ನಂತಹ ಸಹೃದಯ ಮಿತ್ರನ ಮೇಲೆ ಇಂಥ ಹೇಸಿ ಆರೋಪ ಹೊರಿಸುವದು ಯೋಗ್ಯವಲ್ಲೆಂದು ನನಗನಿಸಹತ್ತಿದೆ; ಆದರೆ ಮಿತ್ರಾ, ಸ್ಕಾಚ್ಚ ಈ ಶರ್ಯತ್ತಿನ ಬಗ್ಗೆ ಮಾತನಾಡಿದಾಗ ಅಲ್ಲಿ ನನ್ನ-ನಿನ್ನ ಹೊರತು ಬೇರೆಯವರಾರೂ ಇದ್ದಿಲ್ಲವಲ್ಲ?

'ತಮ್ಮಾ, ಡ್ಯೂಕಾ, ಹಾಗಿದ್ದ ಮೇಲೆ ನಾನೇ ಇದನ್ನು ಪ್ರಕಟಿಸಿರುವೆನೆಂದು ನೀನು ಅನುಮಾನಿಸುವದೇಕೆ? ನೀನು ಪ್ರಕಟಿಸಿರಲಿಕ್ಕಿಲ್ಲವೆಂದು ಆದಾರು ಹೇಳಬೇಕು? ಹೀಗಿದ್ದರೂ ನಾನು ನಿನ್ನ ಮೇಲೆ ಈ ಆರೋಪ ಹೊರಿಸಲಿಚ್ಛಿಸುವದಿಲ್ಲ. ಅಂತೂ ಏನಿದ್ದರೂ ಈ ಗುಪ್ತ ರಹಸ್ಯ ಪ್ರಕಟವಾದದ್ದೇನೋ ನಿಜ; ಈ ಬಗ್ಗೆ ಮುಂದೇನು ಮಾಡಬೇಕೆನ್ನುವೆ?"

ಹೀಗೆ ಅವರೀರ್ವರೂ ಆ ಕ್ಲಬ್ಬಿನಲ್ಲಿ ಒತ್ತಟ್ಟಿಗೆ ಕುಳಿತು ತಮ್ಮ ತಮ್ಮೊಳಗೆ ಮಾತನಾಡುತ್ತಿರಲು, ಒಬ್ಬ ಶಿಪಾಯಿಯು ಅವರೆಡೆಗೆ ಬಂದು: ಡ್ಯೂಕ ಆಫ್ ಸ್ಕಾಚ್ಚರು ಪಕ್ಕದ ಕೋಣೆಯಲ್ಲಿ ಕುಳಿತು ತಮ್ಮೀರ್ವರನ್ನು ಭೆಟ್ಟಿಯಾಗ ಬಯಸುತ್ತಾರೆ. ಕಾರಣ ತೀವ್ರ ಬರಬೇಕಾಗಿ ಪ್ರಾರ್ಥನೆ, ಎಂದಂದ.

ಬಳಿಕ ಅವರೀರ್ವರೂ ಅಲ್ಲಿಗೆ ಹೋದರು. ಇವರನ್ನು ಕಂಡು ಸ್ಕಾಚ್ಚ: ನಿಮ್ಮನ್ನಿಲ್ಲಿಗೆ ಯಾವ ಉದ್ದೇಶಕ್ಕಾಗಿ ಕರೆಸಿರುವೆನೆಂಬದು ನಿಮಗೆ ತಿಳಿಯಿತೆ? ಎಂದು ಪ್ರಶ್ನೆಮಾಡಲು,

'ತಿಳಿಯದೇನು ಮಾಡೀತು? ನಾವು ಆಗಲೆ ಆ ವೃತ್ತಪತ್ರಿಕೆಯೊಳಗಿನ ನಿಮ್ಮ ಶ್ವೇತಾಂಬರಿ ಅಶ್ವದ ಶರ್ಯತ್ತಿನ ಸಂಗತಿಯನ್ನೋದಿರುತ್ತೇವೆ' ಎಂದು ಡ್ಯೂಕನಂದ.

'ನಿನ್ನೆ ರಾತ್ರಿ ಆ ಸಂಗತಿಯನ್ನು ನಿಮ್ಮೆದುರಿಗೆ ಹೇಳಬೇಕಾದರೆ, ಆ ಗುಪ್ತ ರಹಸ್ಯವನ್ನು ಎಷ್ಟು ಗೌಪ್ಯವಿರಿಸಬೇಕೆಂಬದನ್ನು ನಾನು ನಿಮಗೆ ಹೇಳಿರಲಿಲ್ಲವೆ?'

'ಅಹುದು. ತಾವು ಹೇಳುವದೆಲ್ಲ ಸಂಪೂರ್ಣವಾಗಿ ಸ್ಮರಣದಲ್ಲಿದೆ. ನಾನಾಗಲಿ ಡ್ಯೂಕನಾಗಲಿ ನಿಮ್ಮ ಆ ಗೌಪ್ಯವನ್ನು ಪ್ರಕಟಿಸಿ, ವಿಶ್ವಾಸಘಾತ ಮಾಡಿರುವದಿಲ್ಲ' ಎಂದು ರೆನ್‌ಹ್ಯಾಮು ಸ್ವಾಭಾವಿಕವಾಗಿ ಹೇಳಿದ.

ಕೂಡಲೆ ಸ್ಕಾಚ್ಚ ಡ್ಯೂಕನ ಮುಖದ ಕಡೆಗೆ ನೋಡಿದ. ಆಗ ಆತ:— ಸ್ಕಾಚ್ಚರೇ, ನಾನು ನಿಮ್ಮೆದುರಿಗೆ ಆಣೆ ಮಾಡಿ ಹೇಳುವದೇನಂದರೆ, ನಿಮ್ಮ ಆ ಗೌಪ್ಯ ನನ್ನಿಂದ ಹೊರಬಿದ್ದಿಲ್ಲವೆಂದು. ಆ ಕುದುರೆಯ ಶರ್ಯತ್ತಿಗೂ ನನಗೂ ಕೊಂಚವೂ ಸಂಬಂಧವಿರುವದಿಲ್ಲ; ಅಲ್ಲದೆ ಆ ಬಗ್ಗೆ ನನ್ನಲ್ಲಿ ಹೆಚ್ಚಾಗಿ ತಿರಸ್ಕಾರವೇ ಇರತ್ತದೆಂಬದು ನಿಮಗೂ ಗೊತ್ತಿದೆ.

ಆಗ ಡ್ಯೂಕ ಆಫ್ ಸ್ಕಾಚ್ಚನೆನ್ನುತ್ತಾನೆ: ನಾನು ನಿಮ್ಮಿಬ್ಬರ ನುಡಿಗಳನ್ನೂ ನಿಜವೆಂದು ನಂಬುತ್ತೇನೆ. ಈ ಮೊದಲು ನಾನು ನಿಮ್ಮಿಬ್ಬರನ್ನೂ ದೋಷಿಗಳೆಂದು ತಿಳಿದಿದ್ದೆನು; ಆದರೆ ಈಗಿನ ನಿಮ್ಮಗಳ ಸರಲವಾದ ಉತ್ತರ ಕೇಳಿ ನಾನು ನಿಮ್ಮಲ್ಲಿ ಸಂಪೂರ್ಣ ವಿಶ್ವಾಸವುಳ್ಳವನಾಗಿರುತ್ತೇನೆ. ಇದುವರೆಗಿನ ನನ್ನ ಆಚರಣೆಯ ಬಗ್ಗೆ ನಾನು ನಿಮ್ಮಿಬ್ಬರಲ್ಲಿಯೂ ಕ್ಷಮೆ ಬೇಡುತ್ತೇನೆ.

'ಏನಾದರೂ ನಿಮ್ಮ ಅಶ್ವಶಾಲೆಯ ಆ ಗೌಪ್ಯ ನಮ್ಮ ಮೂವರ ಹೊರತು ಅನ್ಯರಾರಿಗೂ ತಿಳಿದಿರಲಿಲ್ಲ. ಹೀಗಿದ್ದರೂ ಅದು ಬಹಿರಂಗವಾಗಿ ಬಿಟ್ಟದೆ. ಅಂದಮೇಲೆ ನೀವು ಅದನ್ನು ಆ ಮೊದಲೇ ಮತ್ತೆ ಯಾರ ಮುಂದಾದರೂ ಹೇಳಿರಬೇಕು; ಹಾಗು ಅದನ್ನು ಕೇಳಿಕೊಂಡ ಆ ನಾಲ್ಕನೇ ವ್ಯಕ್ತಿ ಹೀಗೆ ಬಹಿರಂಗಪಡಿಸಬೇಕು' ಎಂದು ರೆನ್‌ಹ್ಯಾಮುನೆನ್ನಲು,

'ಛೇ-ಛೇ! ನಾನು ಮತ್ತಾರ ಮುಂದೆಯೂ ಆ ಗೌಪ್ಯವನ್ನು ಸುರಿರಲಿಲ್ಲ. ಆದ್ದರಿಂದ ಆ ಗುಪ್ತ ರಹಸ್ಯ ಬಹಿರಂಗವಾದದ್ದು ಬಹು ವಿಚಿತ್ರವಾಗಿರುತ್ತದೆ. ನಮ್ಮ ಪ್ರಿಯ ಮಿತ್ರರಾದ ಸುಪ್ರಸಿದ್ಧ ಪತ್ತೆದಾರ ರಾಬರ್ಟ ಬ್ಲೇಕರೇ ಈ ರಹಸ್ಯ ಭೇದದ ಕಾರಣ ತಿಳಿಯಲಿಕ್ಕೆ ಸಮರ್ಥರಾಗಿರುವರು.' ಎಂಬ ಸ್ಕ್ಯಾಚ್ಚರ ಅಭಿಪ್ರಾಯವನ್ನು ಕೇಳಿ, ರೇನ್‌ಹ್ಯಾಮ ಗಟ್ಟಿಗಟ್ಟಿಯಾಗಿ ನಗಹತ್ತಿದ. ಡ್ಯೂಕ ಮಾತ್ರ ಸಚಿಂತ ಮುದ್ರೆಯಿಂದ ಆಲೋಚಿಸುತ್ತ ಕುಳಿತಿದ್ದ.

ಇನ್ನು ಅವರೆಲ್ಲರೂ ಕ್ಲಬ್ಬಿನಿಂದ ಮನೆಗೆ ತೆರಳತಕ್ಕವರು; ಅಷ್ಟರಲ್ಲಿ ಸಮೀಪದಲ್ಲಿದ್ದ ಟೆಲಿಫೋನಿನ ಗಂಟೆ 'ಢಣಣಣಣಣ' ಎಂದು ಬಾರಿಸಲು, ಡ್ಯೂಕ ಯಂತ್ರದ ಬಳಿಗೆ ಹೋಗಿ ಶಬ್ದ ಕೇಳತಕ್ಕ ಕೊಳವೆಗಳನ್ನು ಎರಡೂ ಕಿವಿಯಲ್ಲಿಟ್ಟುಕೊಂಡು ಬಾಯನ್ನು ಮಾತಾಡುವ ಪ್ಲೇಟಿನ ಬಳಿಗೆ ಒಯ್ದು: ಹಲೋ, ನೀವು ಯಾರು? ಎಂದು ಕೇಳಿದ.

'ಹಲೋ, ನಾನು ಲಾರ್ಡ ಬೋರ್ಲ. ಡ್ಯೂಕ ಅಲ್ಲಿರುವನೇ? ಇದ್ದರೆ ಆತನನ್ನು ಅವಸರದ ಕೆಲಸಕ್ಕಾಗಿ ಇಲ್ಲಿಗೆ ಬೇಗನೆ ಕಳಿಸು' ಎಂಬ ಶಬ್ದಗಳು ಕೊಳವೆಯೊಳಗಿಂದ ಕೇಳಿಸಲು,

'ನಾನೇ ಡ್ಯೂಕ. ಈಗಲೆ ಬಂದೆ' ಎಂದೆಂದವನೇ, ಡ್ಯೂಕ ಅಲ್ಲಿಂದ ಹೊರಟು, ಹೊರಗಿದ್ದ ತನ್ನ ರೋಲ್‌ರಾಯಿಸ ಮೋಟರನ್ನೇರಿ ಮುಖ್ಯ ಮಂತ್ರಿಯ ಮನೆಗಭಿಮುಖವಾಗಿ ನಡೆದ.

ಡ್ಯೂಕ ಲಾರ್ಡ ಬೋರ್ಲನ ಮನೆಗೆ ಬಂದಾಗ, ಬೋರ್ಲನ ಆರ್ಡರ್ಲಿ ಬಾಗಿಲಲ್ಲಿ ನಿಂತು ಡ್ಯೂಕನ ಆಗಮನವನ್ನೇ ನಿರೀಕ್ಷಿಸುತ್ತಿದ್ದ. ಕೂಡಲೆ ಡ್ಯೂಕ ಆತನೊಡನೆ ಹೋಗಿ ಬೋರ್ಲನೆದುರಿಗೆ ನಿಂತುಕೊಂಡ. ಆಗ ಲಾರ್ಡ ಬೋರ್ಲನೆನ್ನುತ್ತಾನೆ:-ಡ್ಯೂಕಾ, ಇಗೋ, ಈ ತಂತಿಯನ್ನೋದಿ ನೋಡು, ಎಂದೆಂದು, ಆಗಲೆ ಬಂದಿದ್ದ ಒಂದು ಅರ್ಜಂಟ ತಂತಿಯನ್ನು ಆತನ ಕೈಗಿತ್ತ.

ಡ್ಯೂಕ ಅದನ್ನು ಚೆನ್ನಾಗಿ ಓದಿಕೊಂಡ. ಆ ತಂತಿಯ ಅಭಿಪ್ರಾಯವೇನಂದರೆ:-'ಬ್ರಿಟಿಶ ಗವರ್ನಮೆಂಟಿನವರು ಒಂದು ಇನಾಮುಗ್ರಾಮದೊಳಗಿನ ಕೆಲವು ಎಕರೆ ಭೂಮಿಯನ್ನು ರೇಲ್ವೇ ಲಾಯಿನಿಗಾಗಿ ಕೊಂಡುಕೊಳ್ಳತಕ್ಕವರಿದ್ದರು. ಹೀಗಿದ್ದು ಸರಕಾರದವರು ಕೊಂಡುಕೊಳ್ಳುವ ಮೊದಲೇ ಆ ಭೂಮಿಯನ್ನು ಬೇರೊಂದು ಬಿನ್ ಸರಕಾರೀ ಕಂಪನಿ ಕೊಂಡುಕೊಂಡು

ಬಿಟ್ಟಿದೆ.' ಆ ಸಂಗತಿ ಲಾರ್ಡ ಬೋರ್ಲ ಮತ್ತು ಡ್ಯೂಕ ವಿಲ್ಯಮ್ಸ ಇವರಿಬ್ಬರ ಹೊರತು ಅನ್ಯರಾರಿಗೂ ತಿಳಿದಿದ್ದಿಲ್ಲ.

ಕೂಡಲೆ ಡ್ಯೂಕ:-ಸರಕಾರಕ್ಕೆ ಆ ಭೂಮಿ ಅವಶ್ಯಕತೆಯೇ ಇರುವದರಿಂದ, ಅದನ್ನು ಹೇಗಾದರೂ ಮಾಡಿ ಕೊಂಡುಕೊಳ್ಳಲೇಬೇಕು; ಎಂದೆನ್ನಲು, ಲಾರ್ಡ ಬೋರ್ಲ ಆತನನ್ನು ಹೆಚ್ಚು ಮಾತಾಡಗೊಡದೆ:-ನಿನಗೆ ನನ್ನ ಮಾತಿನ ಹೊಯಿಲೇ ತಿಳಿಯಲಿಲ್ಲೆನ್ನಬೇಕಾಯಿತು. ಆ ದಿನ ಈ ಕೋಣೆಯಲ್ಲೇ ಆ ಭೂಮಿಯ ಮಾಲಿಕನಾದ ಸರ ಉಯಿಲ್ಯಂ ರಕ್ಕ ನನ್ನೊಡನೆ ಚರ್ಚಿಸುವಾಗ ನಾನು, ನೀನು, ಆತ ಈ ತ್ರಿವರ್ಗರ ಹೊರತು ಮತ್ತೆ ಯಾರೂ ಇರಲಿಲ್ಲ. ಹೀಗಿದ್ದು ನಮ್ಮಗಳ ಆ ಗುಪ್ತ ರಹಸ್ಯ ಪ್ರಕಟವಾಗಿದ್ದರಿಂದಲೇ ಆ ಬಿನ್ ಸರಕಾರೀ ಕಂಪನಿ ಇಷ್ಟರೊಳಗೆ ಆ ಭೂಮಿಯನ್ನು ಕೊಂಡುಕೊಂಡಿರುತ್ತದೆ.

ಮುಖ್ಯ ಮಂತ್ರಿಯ ಆ ಮಾತುಗಳನ್ನು ಕೇಳಿ ಡ್ಯೂಕನ ಸೊಂಡೆಯೊಣಗಿತು. ಆತ ಕ್ರುದ್ಧ ಸ್ವರದಿಂದ-ಲಾರ್ಡ ಸಾಹೇಬರೇ, ನಾನೇ ಈ ಗುಪ್ತ ರಹಸ್ಯ ಸ್ಫೋಟನಗೊಳಿಸಿನೆಂಬದು ನಿಮ್ಮ ಅಭಿಪ್ರಾಯವಲ್ಲವೆ?

ಬೋರ್ಲ ಅವನನ್ನು ತಡೆದು: ನಾನು ಹಾಗೆಂದು ಅನ್ನುವದಿಲ್ಲ; ಆದರೆ ನನ್ನ ಮನೆಯ ಗುಪ್ತ ರಹಸ್ಯಗಳು ಪ್ರಕಟವಾಗುತ್ತಿರುವವೇನೋ! ನಿಜ; ಆ ಭೂಮಿ ಹೋದರೂ ಅಷ್ಟೇ, ಇದ್ದರೂ ಅಷ್ಟೇ. ಆ ಬಗ್ಗೆ ನನಗೆ ಚಿಂತೆಯಿಲ್ಲ; ಆದರೆ ಈ ಪರಿ ನನ್ನ ಮನೆಯ ಗುಪ್ತ ರಹಸ್ಯಗಳ ಭೇದವಾಗಹತ್ತಿದರೆ, ಇದರಿಂದ ಭವಿಷ್ಯತ್ಕಾಲದಲ್ಲಿ ನನಗೂ ನಿನಗೂ ಈ ಬ್ರಿಟಿಶ ಸಾಮ್ರಾಜ್ಯಕ್ಕೂ ಒಳ್ಳೇ ಅನಿಷ್ಟವಾಗದಿರದು. ಆದ್ದರಿಂದ ನನ್ನ ಮನೆಯ ಈ ಗುಪ್ತ ರಹಸ್ಯವನ್ನು ಆದಾರು ಹೀಗೆ ಪ್ರಕಟಿಸುತ್ತಿರುವರೆಂಬದನ್ನು ಕೂಡಲೆ ಪತ್ತೆ ಹಚ್ಚಬೇಕು.

'ಆಹುದು; ನಿನ್ನೆ ರಾತ್ರಿ ಇಲ್ಲಿಯೇ ಕುಳಿತು ಡ್ಯೂಕ ಆಫ್ ಸ್ಕಾಚ್ಚ ಹೇಳಿದ ತನ್ನ ಅಶ್ವದ ಗುಪ್ತ ರಹಸ್ಯವೂ ಈ ದಿನ ಬೆಳಗಾಗುವಷ್ಟರಲ್ಲಿ ಪ್ರಕಟವಾಗಿ ಬಿಟ್ಟಿದೆ.'

'ಹಾಗಲ್ಲವೇ? ಅದು ಪ್ರಕಟವಾದ ಬಗೆ ಹೇಗೆ?'

ಕೂಡಲೆ ಡ್ಯೂಕ ಆ ಶ್ವೇಂತಾಂಬರಿ ಅಶ್ವದ ಗುಪ್ತ ರಹಸ್ಯವನ್ನೆಲ್ಲ ಚನ್ನಾಗಿ ವಿವರಿಸಿ ಹೇಳಿದ; ಹಾಗು ಈ ಗುಪ್ತ ರಹಸ್ಯಭೇದದ ಪತ್ತೆಗಾಗಿ

ಸ್ಕ್ಯಾಚ್ಚ ಪ್ರಸಿದ್ಧ ಪತ್ತೆದಾರ ಬ್ಲೇಕನನ್ನು ಯೋಜಿಸಬೇಕೆಂದು ಗೊತ್ತು ಮಾಡಿರುವದನ್ನೂ ತಿಳಿಸಿದ.

ಲಾರ್ಡ ಬೋರ್ಲ ಡ್ಯೂಕನ ನುಡಿಗಳನ್ನೆಲ್ಲ ಕೇಳಿಕೊಂಡು:-ಛೀ-ಛೀ! ಇಂಥ ಕ್ಷುಲ್ಲಕ ಕೆಲಸಕ್ಕಾಗಿ ಆ ಪ್ರಸಿದ್ಧ ಪತ್ತೆದಾರರನ್ನು ಯೋಜಿಸುವದೆಂದರೆ, ನೊಣ ಕೊಲ್ಲಲಿಕ್ಕೆ ಬಿಲ್ಲು-ಬಾಣಗಳನ್ನುಪಯೋಗಿಸಿದಂತೆ ನಗೆಗೇಡಿನ ಸಂಗತಿಯೇ ಸರಿ. ಆದರೂ ನೀನು ಆತನ ಸಲಹೆ ಪಡೆಯಬೇಕೆಂದು ಇಚ್ಛಿಸುತ್ತಿದ್ದರೆ, ಬ್ಲೇಕನನ್ನು ಬರಮಾಡಿಕೋ. ಹೇಗಾದರೂ ಮಾಡಿ ನನ್ನ ಮನೆಯ ಈ ಗುಪ್ತ ರಹಸ್ಯ ಸ್ಫೋಟವನ್ನು ಕೂಡಲೆ ನಿಲ್ಲಿಸಲೇಬೇಕು. ಇನ್ನು ಈ ಕೋಣೆಯ ಬಾಗಿಲು-ಕಿಡಿಕಿಗಳನ್ನು ಮುಚ್ಚಿಕೊಂಡೇ ಕೆಲಸಕ್ಕೆ ಕೂಡ್ರಲು ಮರೆಯಲಾಗದು. ಬಾಲ್ಕನ್ ಸರಕಾರದಿಂದ ಬಂದಿರುವ ಈ ಮಹತ್ವದ ಪತ್ರಕ್ಕೆ ಕೂಡಲೆ ಯೋಗ್ಯ ಉತ್ತರ ಕೊಡಬೇಕಾಗುತ್ತದೆ.



## ೪ನೇ ತೆರೆ—ಜೇಡನ ಬಲೆಯೊಳಗಿನ ನೊಣ.

ಡ್ಯೂಕ ಆಫ್ ಸ್ಕ್ಯಾಚ್ಚನ ಅಶ್ವಶಾಲೆಯ ಗುಪ್ತ ರಹಸ್ಯ ಭೇದದಿಂದ ಕೇವಲ ಆತನೇ ಕ್ರೋಧಸಂತಪ್ತನಾದನೆಂತಲ್ಲ; ಮಾರ್ಕ್ವಿಸ ಹ್ಯಾಮನ್ ಆರ್ಟನ್ನನಿಗೂ ಸಂತಾಪವುಂಟಾಯಿತು. ಅಂದು ಸಂಜೆಯ ಮುಂದೆ ಆತ ತನ್ನ ಖಾಸ ವಾಚನಾಲಯದಲ್ಲಿ ಒಬ್ಬನೇ ಕುಳಿತು ಒಂದು ವರ್ತಮಾನ ಪತ್ರವನ್ನೋದುತ್ತಿದ್ದ ಕೂಡಲೆ ಹಿಡಿಸಲಾರದಷ್ಟು ಸಿಟ್ಟಿನಿಂದ ಆತನ ಮುಖವು ಕೆಂಪಡರಿತು. ಒಮ್ಮೆಲೆ ಆತ ತನ್ನ ಬಾಯೊಳಗಿನ ಉದ್ದನ್ನ ಚಿರೂಟನ್ನು ತೆಗೆದು ಬಿಸುಟಿ, ತಡವರಿಸಿ ಎದ್ದು ನಿಂತ; ಹಾಗು ಬಲಕ್ಕೆ ಇದ್ದ ಒಂದು ಬಾಗಿಲನ್ನು ತೆರೆದು, ಮತ್ತೊಂದು ಕೋಣೆಯನ್ನು ಪ್ರವೇಶಿಸಿದ. ಆ ಎರಡನೇ ಕೋಣೆಗೆ ಬೇರೆ ಬಾಗಿಲು-ಕಿಟಕಿಗಳೊಂದೂ ಇರದ್ದರಿಂದ ಅದೊಂದು ಕಬ್ಬಿಣದ ಸಂದುಕದಂತಿತ್ತು. ಆರ್ಟನ್ನ ಆ ಕೋಣೆಯೊಳಗಿನದೊಂದು ಕಪಾಟನ್ನು ತೆರೆದು, ಆದರೊಳಗಿನದೊಂದು ಕೃತ್ರಿಮ ಮುಖವನ್ನು ತಕ್ಕೊಂಡು ತನ್ನ ಮೋರೆಯ ಮೇಲೆ ಧರಿಸಿಕೊಂಡ. ನಂತರ ಆ ಕಬ್ಬಿಣ ಪೆಟ್ಟಿಗೆಯಂತಹ ಕೋಣೆಯೊಳಗಿಂದ ಬೇರೊಂದು ಚಿಕ್ಕ ಕೋಣೆಯನ್ನು ಪ್ರವೇಶಿಸಿದ. ಆ ಚಿಕ್ಕ ಕೋಣೆಯ ಮಧ್ಯದಲ್ಲಿ ಒಂದು ಟೇಬಲ್ಲಿದ್ದು, ಅದರ

ಮೇಲೆ ಎಷ್ಟೋ ತಾರಾಯಂತ್ರದ ತಂತಿಗಳು ಸಲ್ಲಗ್ನಗೊಳಿಸಲ್ಪಟ್ಟಿದ್ದವು. ಆದರಿಂದ ಆ ಟೇಬಲ್ಲು ಯಾವದೊಂದು ದೊಡ್ಡ ತಾರ ಆಫೀಸಿನೊಳಗಿನ ಟೇಬಲ್ಲಿನಂತೆ ತೋರುತ್ತಿತ್ತು. ಪ್ರತಿಯೊಂದು ತಂತಿಯ ತುದಿಗೊಂದೊಂದರಂತೆ ಕಾಜಿನ ಗುಂಡಿಗಳಿದ್ದವು. ಹ್ಯಾಮನ್ ಆರ್ಟನ್ನ ಅವುಗಳಲ್ಲೊಂದು ಗುಂಡಿ ಒತ್ತಿ ಹಿಡಿದ. ಒಂದೆರಡು ಮಿನೀಟುಗಳಲ್ಲಿ ಆತನ ಎದುರಿಗಿನ ಗೋಡೆಯಲ್ಲಿದ್ದ ವಿದ್ಯುತ್ಘಂಟೆ ಬಾರಿಸಹತ್ತಿತು; ಹಾಗು ಆ ಸಪ್ಪಳ ಕಟ್ಟಾಗುವಷ್ಟರಲ್ಲಿ ಒಂದು ಬಗೆಯ ನೀಲೀ ವರ್ಣದ ಪ್ರಕಾಶ ಅಲ್ಲಿ ಬಿತ್ತು.

ಬಳಿಕ ಆರ್ಟನ್ನ ಮತ್ತೊಂದು ಕಾಜಿನ ಗುಂಡಿ ಒತ್ತಿದ. ಕ್ಷಣಾರ್ಧದಲ್ಲಿ ಆ ಚಿಕ್ಕ ಕೋಣೆಯ ಮಾಳಿಗೆಯಲ್ಲಿದ್ದ ಒಂದು ಗುಪ್ತ ದ್ವಾರ ತೆರೆಯಲ್ಪಟ್ಟಿತು; ಹಾಗು ನೂಲಿನ ಹಗ್ಗದಿಂದ ಮಾಡಿದ ಒಂದು ನಿಚ್ಚಣಿಕೆ ಕೆಳಗೆ ಬರಹತ್ತಿತು; ಮತ್ತು ಆ ನೂಲಿನ ಹಗ್ಗದ ಏಣಿಯಿಂದ ಒಬ್ಬ ನೀಲೀ ಬಣ್ಣದ ಪೋಷಾಕಿನ ಕುಳ್ಳ (ಗಿಡ್ಡ) ಮನುಷ್ಯ ನಿಶ್ಶಬ್ದದಿಂದ ಆ ಕೋಣೆಗಿಳಿದು ಬಂದ. ಹಾಗೆ ಇಳಿದು ಬಂದವ ತೀರ ಕ್ಷೀಣ ಶರೀರದವನಾಗಿದ್ದ. ಆತನ ನೇತ್ರಗಳು ಮಾತ್ರ ಗುಲಗಂಜಿಯಂತೆ ಕೆಂಪಗಾಗಿದ್ದವು. ಆತ ಆರ್ಟನ್ನನೆದುರಿಗೆ ಬಂದು ಭಯದಿಂದ ನಡುಗುತ್ತ ಅವನನ್ನೇ ಟಕಮಕವಾಗಿ ನೋಡುತ್ತ ನಿಂತುಕೊಂಡನು. ಕೂಡಲೆ ಆರ್ಟನ್ನ ಅವನಿಗೆ ಮಾತಾಡಲಿಕ್ಕೆ ಕೂಡ ಅವಕಾಶಕೊಡದಂತೆ ಆತನ ಕುತ್ತಿಗೆ ಹಿಚುಕಿ ಹಿಡಿದು, ತನ್ನ ಅಳವಿನೊಳಗೆ ಬಂದ ಇಲಿಯನ್ನು ತನ್ನ ಪಂಜರದಿಂದ ಹಿಡಿ ಹಿಡಿದು, ಅರೆಜೀವಗೊಳಿಸಿ ಬಿಸುಟೊಗೆದು, ಮತ್ತೆ ಮತ್ತೆ ಹಿಡಿಯುವ ಬೆಕ್ಕಿನಂತೆ, ಎರಡು-ಮೂರು ಸಾರೆ ನಾಲ್ಕು ನಾಲ್ಕು ಮೊಳ ದೂರ ಅತನನ್ನು ಬಿಸುಟಿದ. ಆತನಿಗೆ ತನ್ನ ಒಡೆಯನ ಈ ತರಹದ ಆಚರಣೆಯ ಅಭ್ಯಾಸವಿದ್ದುದರಿಂದ, ಆತ ನಿರ್ವಿಕಾರ ಮನಸ್ಸಿನಿಂದ ಮೆಲ್ಲಮೆಲ್ಲನೆ ಎದ್ದು:—ದಣಿಯರೇ, ಈಗಿನ ನನ್ನ ಅಪರಾಧವೇನೆಂಬದನ್ನು ತಿಳಿಸುವಿರಾ? ಎಂದಂದ.

ಆರ್ಟನ್ನ ಗರ್ಜಿಸುತ್ತ:—'ನನ್ನ ಅಪ್ಪಣೆಯನ್ನೇಕೆ ಅಮಾನ್ಯ ಮಾಡಿದಿಯೋ ಮೂರ್ಖಾ! ಡ್ಯೂಕನ ಕೂಡ ಲೇಡಿ ಎಲೀಸೆಯ ವಿವಾಹ ನಿಶ್ಚಿತವಾದ ಸಂಗತಿಯನ್ನು ನೀನು ಕೆಲ ಹಣಕ್ಕಾಗಿ ವರ್ತಮಾನಪತ್ರಗಾರರಿಗೇಕೆ ಮಾರಿಬಿಟ್ಟೆ? ಅದು ನನಗೆ ತಿಳಿದರೂ ನಾನು ಆ ಬಗ್ಗೆ ನಿನಗೆ ಏನೂ ಅನ್ನಲಿಲ್ಲ. ದುಡ್ಡಿನ ಲೋಭದಿಂದ ನೀನು ಹೀಗೆ ಮುಂದಿಯ ಗುಪ್ತರಹಸ್ಯ

ಗಳನ್ನು ಪ್ರಕಟಿಸ ಹತ್ತಿದರೆ, ನಿನ್ನನ್ನು ಹೇಗೆ ದಂಡಿಸುವೆನೆಂಬುದು ತಿಳಿಯಿತೇ? ಪತ್ರಿಕಾಕರ್ತರಿಂದ ನಿನಗಾಗುವ ನಾಲ್ಕಾರು ಗಿನಿಗಳ ಲಾಭಕ್ಕಾಗಿ ನೀರಿನಂತೆ ಇಷ್ಟೊಂದು ಹಣ ವ್ಯಯಮಾಡಿ ನಾನು ಇಷ್ಟು ಕಷ್ಟನಷ್ಟ ಸಹಿಸುತ್ತಿರುವೆನೇನು?' ಎಂದಂದು ಅವನು ಕ್ರೋಧಭರದಿಂದ ಹೋಗಿ ತನ್ನ ವಾಚನಾಲಯದೊಳಗಿನ ಆ ವೃತ್ತ ಪತ್ರವನ್ನು ತಂದು, ಅದರೊಳಗಿನ ಅಶ್ವದ ಶರ್ಯತ್ತಿನ ಆ ಸಂಗತಿಯನ್ನು ಅವನಿಗೆ ಓದಿ ತೋರಿಸಿ:—ಈ ಸಂಗತಿ ಈ ಪತ್ರದಲ್ಲಿ ಪ್ರಕಟವಾದುದಕ್ಕೆ ನೀನೇ ಕಾರಣ. ಇದು ನಿನ್ನ ದುಷ್ಕೃತ್ಯವೇ ಆಹುದು. ಹತಭಾಗ್ಯಾ, ರಾಸ್ಕೇಲ! ಎಂದಂಡ.

ಆ ಹತಭಾಗ್ಯನ ಹೆಸರು ಹ್ಯಾಮಲಿನ್ನನೆಂದು. ಆತ ಗೋಣನ್ನು ಅಲ್ಲಾಡಿಸುತ್ತ:—ಈ ಸಂಗತಿ ಇಷ್ಟು ಗೌಪ್ಯವಾಗಿರಬಹುದೆಂನು ನನಗನಿಸಿರಲಿಲ್ಲ.

'ನಿನಗೆ ಅದು ತಿಳಿಯುವ ಬಗೆ ಹೇಗೆ? ನೀನು ಮಹಾ ಮೂರ್ಖ. ನಿನ್ನ ಈ ಬಗೆಯ ಧನಲೋಭದ ಮೂಲಕ ನನ್ನದೆಷ್ಟು ಹಣ ವ್ಯರ್ಥವಾಗುತ್ತದೆಂಬದೂ, ಕಡೆಗೆ ನನ್ನ ಉದ್ದೇಶ ಸಫಲವಾಗುವದೋ-ಇಲ್ಲವೋ ಎಂಬದೂ ತಿಳಿಯಲಸಾಧ್ಯವಾಗಿದೆ. ಇಷ್ಟೇ ಅಲ್ಲ, ನಿನ್ನ ಈ ಮೂರ್ಖತನದ ಮೂಲಕ ನೀನು ಒಮ್ಮೆಲ್ಲೊಮ್ಮೆ ನನ್ನ ಗಂಟಲಿಗೆ ಗಾಣವನ್ನೇ ತರುವೆ. ನಿನ್ನಿಂದ ಇನ್ನು ಮೇಲೆ ನನ್ನ ಯಾವುದೊಂದು ಗುಪ್ತರಹಸ್ಯದ ಭೇದವಾದರೆ, ನಿನಗೆ ಯಾವ ದಂಡಣೆ ಪ್ರಾಪ್ತವಾಗುವದೆಂಬದು ಗೊತ್ತಿದೆಯೊ?' ಎಂದು ಹ್ಯಾಮನ್ ಆರ್ಟನ್ನ ಒಳ್ಳೇ ದರ್ಪದಿಂದ ಪ್ರಶ್ನೆ ಮಾಡಲು,

'ಅದು ನನಗೆ ಚೆನ್ನಾಗಿ ಗೊತ್ತಿರದಿದ್ದರೂ, ನನ್ನ ಶಿರಸ್ಸು ಧಡಕ್ಕೆ ಹೊಂದಿರಲಾರದೆಂದು ನನ್ನ ಖಾತ್ರಿಯಿದೆ' ಎಂದು ಹ್ಯಾಮ್ಲಿನ್ನನಂದ.

'ಛೇ-ಛೇ. ನಾನು ಹಾಗೆ ಒಮ್ಮೆಲೆ ನಿನ್ನ ಜೀವ ತಕ್ಕೊಳ್ಳುವದಿಲ್ಲ. ನಿನ್ನನ್ನು ದ್ವೀಪಾಂತರರಕ್ಕೆ ಕಳಿಸುವೆ. ಸಾಯುವ ವರೆಗೂ ನಿನಗೆ ಈ ದೇಶದ ದರ್ಶನ ಕೂಡ ಆಗಲಿಕ್ಕಿಲ್ಲ, ತಿಳಿಯಿತೇ? ಹೋಗು. ಈಗ ನಿನ್ನ ಬಳಿಯಲ್ಲಿ ಮತ್ತೇನೂ ಕೆಲಸವಿಲ್ಲ.'

ಹೀಗೆಂದು ಹೇಳಿ, ಆರ್ಟನ್ನ ಆ ಮೇಜಿನ ಮೇಲಿನ ಮತ್ತೊಂದು ಕಾಜಿನ ಗುಂಡಿ ಒತ್ತಿದ ಕೂಡಲೆ ಹಳದೀ ಬಣ್ಣದ ಪ್ರಕಾಶವುಂಟಾಯಿತು. ಆ ಕೂಡಲೆ ಗೋಡೆಯ ಬಳಿಗೆ ಹೋಗಿ ಅಲ್ಲಿಯದೊಂದು ಕಾಜಿನ ಗುಂಡಿ

ಒತ್ತಲು, 'ಕ್ರಿಂ' ಎಂಬ ಘನತರ ಶಬ್ದವಾಗಿ, ಆ ಕೋಣೆಯ ಮಾಳಿಗೆಯ ಬೇರೊಂದು ಭಾಗವೇ ಒತ್ತಟ್ಟಿಗೆ ಸರಿದು, ಅಲ್ಲಿಯೊಂದು ಗುಪ್ತದ್ವಾರ ಕಾಣಿಸತೊಡಗಿತು ಆ ಬಾಗಿಲದಿಂದ ಮತ್ತೊಬ್ಬ ಮನುಷ್ಯನಿಳಿದು ಬಂದು ಆರ್ಟಿನ್ನನೆದುರಿಗೆ ನಿಂತುಕೊಂಡ. ಆ ಮನುಷ್ಯನ ಹೆಸರು ಡಚ್ಚನೆಂದು. ಆತ ಆ ಗೋಡೆಯೊಳಗಿನ ಚಿಕ್ಕ ಕಪಾಟನಿಂದಲೇ ಹೊರಹೊರಟನೋ ಏನೋ ಎಂಬಂತೆ ತೋರಿತು. ಡಚ್ಚ ಜಾತಿಯಿಂದ ಜರ್ಮನ್ನ. ಕಳವು-ಕಾಕಿನ ಉದ್ಯೋಗದಲ್ಲಿ ಆತನು ನಿಪುಣ ಪದವಿಗೆ ಯೋಗ್ಯನಾದವ.

ಆತ ಆರ್ಟಿನ್ನನನ್ನು ಅಭಿವಂದಿಸುತ್ತ:— ಕಳ್ಳರರಸರ ಅಪ್ಪಣೆ ಯೇನಿದೆ? ಎಂದು ಕೇಳಿದ.

'ಡಚ್ಚಾ, ದೊಡ್ಡ ರಕಮಿನ ಯಾವ ಬೇಟೆಯೂ ಇನ್ನೂ ಹಸ್ತಗತ ವಾಗಿಲ್ಲವಲ್ಲ!'

ಡಚ್ಚ ಮುಗುಳುನಗೆ ನಕ್ಕು:—ಒಡೆಯರೇ, ನಾನೊಂದು ದೊಡ್ಡ ಬೇಟೆಯ ಸಂಧಾನದಲ್ಲಿರುತ್ತೇನೆ. ಅದು ನಮ್ಮ ಕಳ್ಳರರಸರಾದ ಹ್ಯಾಮನ್ ಆರ್ಟಿನ್ನರ ಆಲೋಚನೆಗೆ ಅಯೋಗ್ಯವಾದುದಲ್ಲ.'

ಅದನ್ನು ಕೇಳಿ ಸಂತೋಷಗೊಂಡ ಆರ್ಟಿನ್ನ: – ಹಾಗೆಯೋ! ಹಾಗಾ ದರೆ ಆ ಬೇಟೆ ಯಾವ ಪ್ರಕಾರದ್ದೆಂಬದನ್ನು ಬಿಚ್ಚಿ ಹೇಳಬಾರದೇ?

'ಅದು ಬಹು ಚೆನ್ನಾದ ಬೇಟೆಯಾಗಿರುತ್ತದೆ. ಇಂಥ ಬೇಟೆ ಎಷ್ಟೋ ದಿನ ಹೊಂಚು ಹಾಕಿ ಕುಳಿತರೂ ಸಿಗದಂತಹದು. ಬಲ್ಕಾನ ನಡುಗಡ್ಡೆ ಗಳಲ್ಲಿಯ ಒಬ್ಬ ಅರಸ ಒಂದು ಗುಪ್ತವಾದ ಶರ್ತಿನ ಮೇರೆಗೆ ಇಂಗ್ಲಂಡ ಮತ್ತು ಫ್ರಾನ್ಸ ದೇಶಗಳಲ್ಲಿ ಬಹು ದೊಡ್ಡ ರಕಮಿನ ಸಾಲತೆಗೆಯುವ ಉದ್ಯೋಗದಲ್ಲಿರುತ್ತಾನೆ. ಆ ಗುಪ್ತ ಶರ್ತುಗಳೇನೆಂಬದನ್ನು ತಿಳಿಯುಲಿಕ್ಕೆ ಯುರೋಪದೊಳಗಿನ ಹಲವು ರಾಷ್ಟ್ರಗಳ ಮುಖಂಡರು ಹತ್ತುಸಾವಿರಗಟ್ಲೆ ಪೌಂಡುಗಳನ್ನು ಖರ್ಚು ಮಾಡಲಿಕ್ಕೆ ಸಿದ್ಧರಾಗಿರುತ್ತಾರೆ; ಆದರೆ ಅವರಿಗೆ ಆ ಗುಪ್ತ ಕರಾರು ಮಾತ್ರ ತೋರಿಸಬೇಕು' ಎಂದು ಡಚ್ಚ ಹೇಳಲು,

ಇದು ಇಂಥ ದೊಡ್ಡ ಬೇಟೆಯ ಸಂಗತಿ ತಿಳಿದದ್ದರಿಂದ ಲೋಭ ಮೂಲಕ ಆ ಕಳ್ಳರರಸನ ದೃಷ್ಟಿವಿಚಲಿತವಾಯಿತು. ಕೂಡಲೆ ಆತ ಗಂಭೀರ ವಾಣಿಯಿಂದ:—ಡಚ್ಚಾ, ನಿನ್ನ ಈ ಸುದ್ದಿ ತಕ್ಕದ್ದಾಗಿದೆ. ಆ

ಮುಖಂಡರ ಕುತೂಹಲ ಪೂರ್ಣಪಡಿಸುವದು ಅದಾವ ದೊಡ್ಡ ಕೆಲಸವೆಂದು ತಿಳಿದಿರುವೆ?

'ಅದು ಹೇಗೆ ಶಕ್ಯವಾಗುವದು?'

'ಯಾವ ಉಪಾಯದಿಂದ ನಮ್ಮ ಬೇರೆ ಕಾರ್ಯಗಳೆಲ್ಲವೂ ಜರಗುತ್ತಿರುವವೋ, ಅದೇ ಉಪಾಯದಿಂದಲೇ ಈ ಕಾರ್ಯವೂ ಈಡೇರುವದು; ಅಲ್ಲದೆ ಹೊರಗಿನ ಅಲ್ಪ ಸ್ವಲ್ಪ ಸಹಾಯವನ್ನೂ ಪಡೆಯಬೇಕಾಗುವದು.'

'ಆ ಮುಖಂಡರಿಗೆ ಆ ಗುಪ್ತಕರಾರುಗಳನ್ನು ಕಿವಿಗೆ ಕೇಳುವಂತೆ ಹೇಳಿದ ಮಾತ್ರಕ್ಕೆ ಕೆಲಸ ಪೂರೈಸುವದಿಲ್ಲ. ಹತ್ತುಸಾವಿರ ಪೌಂಡುಗಳನ್ನು ಅವರೇನು ಸಹಜವಾಗಿ ಕೊಟ್ಟು ಬಿಡುವರೊ? ಆ ಗುಪ್ತ ಕರಾರ ಪತ್ರವನ್ನು ನಾವು ಅವರಿಗೆ ಪ್ರತ್ಯಕ್ಷವಾಗಿ ತೋರಿಸಿದರೆ ಮಾತ್ರ ನಮ್ಮ ಕೆಲಸವಾಗುವದು. ಆ ಬಗ್ಗೆ ಯಾವ ಉಪಾಯ ಯೋಜಿಸುವಿರಿ?'

'ಯೋಗ್ಯ ಉಪಾಯವೇ ಇದ್ದದ್ದಾದರೆ, ಅದನ್ನೂ ತಿಳಿಸುವೆ'

ಡಚ್ಚನು ಮತ್ತೆ ಏನೋ ಹೇಳತಕ್ಕವನಿದ್ದ; ಅಷ್ಟರಲ್ಲಿ 'ಫಟ್-ಫಟ್' ಎಂಬ ಶಬ್ದವಾಯಿತು. ಆ ಶಬ್ದ ಯಾವುದೊಂದು 'ಏರಗನ್ನಿ'ನ ಸಪ್ಪಳದಂತಿತ್ತು. ಆ ಶಬ್ದವಾದ ಕೆಲ ಕ್ಷಣದಲ್ಲಿಯೇ ಆ ಕೋಣೆಯ ಮಾಳಿಗೆಯ ಒಂದು ಕಡೆಯಿಂದ ಹಿತ್ತಾಳೆಯಿಂದ ನಿರ್ಮಿಸಲ್ಪಟ್ಟ ಒಂದು ಚಿಕ್ಕ ಕೊಳವೆ ಬಂದು ಆ ಕೋಣೆಯೊಳಗಿನ ಒಂದು ಮೂಲೆಯಲ್ಲಿ ಸಂರಕ್ಷಿಸಲ್ಪಟ್ಟಿದ್ದ ತಂತಿಯ ಸುರಳಿಯ ಮೇಲೆ ಬಿತ್ತು.

ಹ್ಯಾಮನ್ ಆರ್ಟನ್ನ ಆಗಲೆ ಎದ್ದು ಹೋಗಿ ಆ ಕೊಳವೆ ಎತ್ತಿಕೊಂಡನು. ಅದರ ಬಾಯಿಗೆ ಮಲಸುತ್ತಿನ ಮುಚ್ಚಳವಿತ್ತು. ಅದನ್ನು ೪-೬ ಸಾರೆ ತಿರುವಿದೊಡನೆ ಅದು ತೆರೆಯಿತು. ಅದರಲ್ಲಿ ದುಂಡಗೆ ಸುತ್ತಿ ಸೇರಿಸಿದ್ದ ಒಂದು ಕಾಗದ ಕಂಡಿತು. ಆರ್ಟನ್ನ ಅದನ್ನು ಜಗ್ಗಿ ತೆಗೆದ. ಅದು ಟೈಪ ರಾಯಿಟರಿನಲ್ಲಿ ಛಾಪಿಸಿದ ಕಾಗದ. ಆ ಕಳ್ಳರರಸ ಆ ಕಾಗದವನ್ನು ಬಿಚ್ಚಿ ಓದಹತ್ತಿದಂತೆ ಆತನ ಹುಬ್ಬುಗಳು ಗಂಟಿಕ್ಕತೊಡಗಿದವು; ಕಣ್ಣುಗಳು ಕೆಂಪಗಾದವು; ಆತ ಅಧೀರ ಭಾವದಿಂದ ಗುಣುಗುಟ್ಟಲಾರಂಭಿಸಿದ.

ಆಗ ಡಚ್ಚ:—ಕೆಟ್ಟ ಸುದ್ದಿಯಿದೆಯೇ? ಎನ್ನಲು,

ಆರ್ಟೆನ್ನ ಬಾಯಿಂದ ಏನೂ ಮಾತಾಡದೆ, ಆ ಕಾಗದ ಆತನ ಕೈಗಿತ್ತ.

ಈ ಮೊದಲು ಲಾರ್ಡ ಬೋರ್ಲ ಡ್ಯೂಕನೊಡನೆ ಮಾತಾಡಿದ 'ಗುಪ್ತ ರಹಸ್ಯ ಭೇದಕರನ್ನು ಪತ್ತೆ ಹಚ್ಚುವ ಕೆಲಸಕ್ಕಾಗಿ ಪತ್ತೆದಾರ ಬ್ಲೇಕನನ್ನು ನಿಯಮಿಸಬೇಕೆ'ಂಬ ಸಂಗತಿ ಆ ಪತ್ರದಲ್ಲಿ ಸವಿಸ್ತರವಾಗಿದ್ದಿತು.

ಆ ಕಾಗದ ಓದಿದ ಕೂಡಲೆ ಡಚ್ಚನ ಸೊಂಡೆಯೊಣಗಿತು; ಕಣ್ಣುಗಳಿಂದ ಕಿಡಿಗಳೇ ಉದುರುವಂತೆ ತೋರಹತ್ತಿತು. ಗಲ್ಲಿಗೇರಿಸುವ ಮನುಷ್ಯನಂತೆ ಆತನ ಅವಸ್ಥೆಯಾಯಿತು. ಆಗ ಆತ ಅಸ್ಫುಟ ಸ್ವರದಿಂದ:— ಕಡೆಗೆ ಆ ಮುದಿಗೂಗೆ ಈ ರಹಸ್ಯಭೇದದ ಪತ್ತೆಗಾಗಿ ಆ ಅತ್ಯಂತ ದುಷ್ಟ ಪತ್ತೆದಾರ ಬ್ಲೇಕನನ್ನು ನಿಯೋಜಿಸಲಿಕ್ಕೆ ಉದ್ಯುಕ್ತನಾದನೇ? ತೀಕ್ಷ್ಣ ಬುದ್ಧಿಯ ಆ ಪತ್ತೆದಾರನಿಗೆ ಅಸಾಧ್ಯವಾವುದೂ ಇಲ್ಲ. ಈ ಸಂಗತಿಯನ್ನೋದಿ ನನ್ನ ಕೈಕಾಲು ನಡುಗಹತ್ತಿದ್ದು, ಎದೆ ಹಾರತೊಡಗಿದೆ. ಆರ್ಟೆನ್ನರೇ, ಆ ಬ್ಲೇಕನೆದುರಿಗೆ ನಮ್ಮ ಯಾವ ಆಟವೂ ನಡೆಯಲಿಕ್ಕಿಲ್ಲಲ್ಲವೆ?

ಡಚ್ಚನ ಆ ಕಂಪಿತಭಾವವನ್ನು ಕಂಡು ಆರ್ಟೆನ್ನ ಗಟ್ಟಿಗಟ್ಟಿಯಾಗಿ ನಕ್ಕು, ಆತನ ಅಂಜಿಕೆ ಹೋಗಲಾಡಿಸಲಿಕ್ಕೆ ಪ್ರಯತ್ನಿಸಿದ. ಬಳಿಕ ವಿಸ್ಮಯ ವಿಸ್ಫೂರಿತ ನೇತ್ರಗಳಿಂದ ಆ ಪತ್ರವ ನೋದುತ್ತ:— ಈ ಸಾಮಾನ್ಯ ಇಂಗ್ಲಿಷ ಪತ್ತೆದಾರನ ಅಂಜಿಕೆಯಿಂದ ಯುರೋಪದಲ್ಲೆಲ್ಲ ಪ್ರಸಿದ್ಧಿ ಹೊಂದಿದ ಸುಚತುರನಾದ ಈ ಕಳ್ಳನ ಕೈಕಾಲುಗಳು ನಡುಗಹತ್ತಬೇಕೆ? ಇದೆಂಥ ನಾಚಿಕೆಗೇಡು? ಎಷ್ಟು ಆಶ್ಚರ್ಯದ ಸಂಗತಿಯಿದು? ಎನ್ನಲು,

ಡಚ್ಚ ಕ್ಷೀಣ ಸ್ವರದಿಂದ:— ನನ್ನ ಕೈಕಾಲುಗಳೇಕೆ ನಡುಗುವವೆಂದಿರಾ? ಆಗ ನಾನು ಆ ಟರ್ಕಿಯ ಕಳವಿನ ಪ್ರಕರಣದಲ್ಲಿ ಸಿಕ್ಕು ಅಲ್ಲಿಯ ಪೋಲೀಸರ ಕಣ್ಣಿಗೆ ಮಣ್ಣೆರೆಚಿದ್ದೆ, ಆದರೆ ಈ ಇಂಗ್ಲಿಷ ಪತ್ತೆದಾರನ ಉಪಟಳದ ಮೂಲಕ ನಾನು ಆ ಟರ್ಕೀ ದೇಶ ಬಿಟ್ಟು ದೇಶಾಂತರಕ್ಕೆ ಪಲಾಯನ ಹೇಳಿಸಬೇಕಾಯಿತು; ಆದರೂ ಆಗಿನ ಆ ಪ್ರಸಂಗದಲ್ಲಿ ಐದು ವರ್ಷಗಳ ವರೆಗೆ ಮಾತ್ರವಾದರೂ ಅಜ್ಞಾತವಾಸ ಭೋಗಿಸಬೇಕಾಯಿತು. ಟರ್ಕಿಯು ಬ್ಲೇಕನಿಗೆ ವಿದೇಶ. ಅಂಥಲ್ಲಿಯೇ ನಾನು ಅವನಿಗಷ್ಟು ಅಂಜಿ ಪಲಾಯನ ಹೇಳಿಸಿರಲು, ಇದಂತೂ ಆತನ ಸ್ವದೇಶ. ಮೇಲಾಗಿ ನಾನು ಈ ಲಂಡನ್ನ ಪಟ್ಟಣದಲ್ಲಿರುವದೆಂದರೆ, ಆತನ ಮುಷ್ಟಿಯಲ್ಲಿದ್ದಂತೆಯೇ ಸರಿ.

ಈ ಸಾರೆ ನಾನು ಅವನ ಕೈಗೆ ಸಿಕ್ಕರೆ, ಸಾಯುವವರೆಗೂ ನಾನು ಅಜ್ಞಾತ ವಾಸವನ್ನೇ ಭೋಗಿಸಬೇಕಾದೀತು.

'ಇನ್ನು ನೀನು ಆ ಉತಾವಳನಿಗಂಜುವ ಕಾರಣವಿಲ್ಲ. ನಾನು ಆತನನ್ನು ಚೆನ್ನಾಗಿ ಅವಮಾನಗೊಳಿಸಿ, ನಮ್ಮ ದಾರಿಯೊಳಗಿನ ಆ ಬ್ಲೇಕನ ಮುಳ್ಳನ್ನೇ ಕಿತ್ತೊಗೆಯುತ್ತೇನೆ. ಇನ್ನು ಆ ಬ್ಲೇಕನನ್ನು ಉದಾಸೀನ ಮಾಡುವಂತಿಲ್ಲ.'

ಅದನ್ನು ಕೇಳಿ ಡಚ್ಚ ಒಳ್ಳೇ ಹುರುಪಿನಿಂದ:—ಹಾಗಾದರೆ ನನ್ನ ಹುರುಪಿಗೆ ಮೇರೆಯೇ ಉಳಿಯಲಾರದು. ಆತನನ್ನು ನಾಶಗೊಳಿಸುವ ಕಾರ್ಯದಲ್ಲಿ ನಾನು ನಿಮಗೆ ಸಾಕಷ್ಟು ಸಹಾಯಕರ್ತನಾಗುತ್ತೇನೆ. ನಾವೆಲ್ಲರೂ ಕೂಡಿ ಆ ರಾಬರ್ಟ ಬ್ಲೇಕನ ಹೆಣಕೆಡವಿದೆವೆಂದರೆ ತೀರಿತು.

ಆರ್ಟನ್ನ ನಸುನಗುತ್ತ:— ಈ ಕಾಲಕ್ಕೆ ಬ್ಲೇಕ ಯಾವುದೊಂದು ಕಂಪನಿಯಲ್ಲಿ ದೊಡ್ಡ ರಕಮಿನ ಜೀವವಿಮೆ ಇಳಿಸಿದರೆ, ಆತನು ತನ್ನ ಪರಿವಾರದವರ ಮೇಲೆ ಬಹು ದೊಡ್ಡ ಉಪಕಾರ ಮಾಡಿದಂತಾಗುವದು!

ಹೀಗೆಂದು ಆ ಉಭಯತರು ಪರಸ್ಪರರ ಮಾತಿನಿಂದ ಪರಸ್ಪರರನ್ನು ಹುರಿದುಂಬಿಸುತ್ತಿರಲಿಕ್ಕೆ, ಎದುರಿಗಿನ ಮೇಜಿನ ಮೇಲಿನ ವಿದ್ಯುದ್ದೀಪ ಒಮ್ಮೆಲೆ ಬಹು ದೊಡ್ಡದಾಗಿ, ಆರಿ, ನಂತರ ಮತ್ತೆ ದೊಡ್ಡದಾಗಿ ಉರಿಯ ಹತ್ತಿತು. ಕೂಡಲೆ ಆರ್ಟನ್ನ ವ್ಯಗ್ರಚಿತ್ತನಾಗಿ, ಲಗುಬಗೆಯಿಂದ ಹೊರಗೆ ಹೋಗುತ್ತ:—'ನನ್ನ ಲಾಯಬ್ರರಿಯ ಬಾಗಿಲದ ಹೊರಗಿನ ಫರಸುಗಲ್ಲಿನ ಮೇಲೆ ಯಾರೋ ಕಾಲಿಟ್ಟಿರುತ್ತಾರೆ,' ಎಂದಂದವನೇ ಸಮೀಪದ ಒಂದು ಗುಪ್ತದ್ವಾರ ತೆರೆದು, ಕಬ್ಬಿಣಸಂದುಕದಂತಹ ಕೋಣೆಯನ್ನು ಸೇರಿ, ಅಲ್ಲಿಯ ಕಪಾಟಿನಲ್ಲಿ ತನ್ನ ಕೃತ್ರಿಮ ಮುಖವಾಡವನ್ನು ತೆಗೆದಿಟ್ಟು, ಅಲ್ಲಿಯದೊಂದು ದೊಡ್ಡ ಹೊತ್ತಿಗೆಯನ್ನು ಕೈಯಲ್ಲಿ ಹಿಡಕೊಂಡು, ಯಾವ ಜಾಲವನ್ನೂ ಅರಿಯದ ಒಳ್ಳೇ ಸಭ್ಯಮನುಷ್ಯನಂತೆ ಬಂದು ಲಾಯಬ್ರರಿಯೊಳಗಿನ ತನ್ನ ಆಸನವನ್ನು ಮಂಡಿಸಿದನು. ಅದೇ ಕಾಲಕ್ಕೆ ಆತನ ದ್ವಾರರಕ್ಷಕ ಆ ವಾಚನಾಲಯವನ್ನು ಹೊಕ್ಕು ನಮ್ರಭಾವದಿಂದ:—ಮಹಸ್ವೀಯರೇ, ಒಬ್ಬ ಲೇಡಿ ತಮ್ಮ ದರ್ಶನಕ್ಕಾಗಿ ಹೊರಗೆ ಕಾದಿರುತ್ತಾಳೆ. ನಿಮ್ಮ ಹೆಸರೇನೆಂದು ನಾನು ಅವಳನ್ನು ವಿಚಾರಿಸಲು, ಅವಳು ಅದನ್ನು ಹೇಳಲೊಲ್ಲಳು.

ತಮ್ಮೊಡೆಯಲ್ಲಿ ಅವಳದೇನೋ ಮಹತ್ವದ ಕೆಲಸವಿದೆಯಂತೆ. ಅವಳ ಮುಖಮಂಡಲ ಜಾಳಿಗೆಯ ಬುರುಕೆಯಿಂದ ಸಂಪೂರ್ಣವಾಗಿ ಮುಚ್ಚಲ್ಪಟ್ಟಿದ್ದರಿಂದ ಅದು ಸ್ಪಷ್ಟವಾಗಿ ಕಾಣಿಸುವದಿಲ್ಲ; ಆದರೂ ಆ ಲೇಡಿ ಸನ್ಮಾನ್ಯ ಮನೆತನದ ಕುಮಾರಿಯೆಂಬಂತೆ ತೋರುತ್ತಿದೆ, ಎಂದು ಹೇಳಿದ.

ಆರ್ಟನ್ನ ಕ್ಷಣಕಾಲವೇ ವಿಚಾರಮಗ್ನನಾಗಿ, ನಂತರ ಅನ್ನುತ್ತಾನೆ:- ಆಕೆಯನ್ನು ಒಳಗೆ ಕಳಿಸಿಕೊಡು.

ಮುಂದೆ ೨-೩ ನಿಮಿಷಗಳಲ್ಲಿ ಒಬ್ಬ ರಮಣಿ ಆ ಕೋಣೆಯನ್ನು ಪ್ರವೇಶಿಸಿದಳು. ಇಷ್ಟಾಗುವಷ್ಟರಲ್ಲಿ ಆ ಪ್ರಸಿದ್ಧ ಜರ್ಮನ್ ಕಳ್ಳನಾದ ಡಚ್ಚನು ಎತ್ತೋ ಮಾಯವಾಗಿ ಬಿಟ್ಟಿದ್ದನು.

ರಮಣಿಯು ಪ್ರವೇಶಿಸಿದ ಕೂಡಲೆ ಆರ್ಟನ್ನ ಎದ್ದು ನಿಂತು ಆಕೆಯನ್ನು ಒಂದು ಸುಂದರವಾದ ಖುರ್ಚಿಯ ಮೇಲೆ ಕೂಡ್ರಿಸಿ, ತಾನೂ ಕುಳಿತ; ಆದರೆ ತಾನು ಕೂಡ್ರುವಾಗ ತನ್ನ ಮುಖದ ಮೇಲೆ ಅಲ್ಲಿಯ ದೀಪದ ಕಿರಣಗಳು ಬೀಳುವಂತೆ ಕೂಡ್ರಲಿಕ್ಕೆ ಮರೆಯಲಿಲ್ಲ. ಆ ಸ್ತ್ರೀ ಕುಳಿತುಕೊಂಡ ಮೇಲೆ ಆರ್ಟನ್ನ ಒಳ್ಳೇ ನಮ್ರತೆಯಿಂದ ಅವಳನ್ನುದ್ದೇಶಿಸಿ:— ನನ್ನಿಂದ ತಮಗೇನಾಗಬೇಕೆಂಬುದನ್ನು ದಯವಿಟ್ಟು ತಿಳಿಸುವಿರಾ? ಎಂದಂದ. ಆ ರಮಣಿ ಆತನಿಗೆ ತೀರ ಅಪರಿಚಿತಳಾಗಿರಲಿಲ್ಲ. ಅವಳನ್ನು ಆತ ಈ ಮೊದಲೆಷ್ಟೋ ಸಾರೆ ನೋಡಿದ್ದ.

ಕೂಡಲೆ ಆ ರಮಣಿ ತನ್ನ ಮೋರೆಯ ಮೇಲಿನ ಬುರುಕೆ ಸರಿಸಿದಳು. ಆಕೆ ಅಪೂರ್ವ ಸುಂದರಿ; ಆದರೆ ಆಗ ಮಾತ್ರ ಅವಳ ಮುಖದ ಮೇಲೆ ಉದ್ವೇಗದ ಕಳೆ ಒಡೆದು ಕಾಣಿಸುತ್ತಿತ್ತು. ಅದನ್ನು ಕಂಡು ಆರ್ಟನ್ನ ವಿಸ್ಮಯದಿಂದ:— ಮಿಸ್ ಭಾಯೋಲಾ ಕುಮಾರಿಯವರೇ! ತಾವು ಈ ದರಿದ್ರನ ಮನೆಗೆ ಹೀಗೆ ಆಕಸ್ಮಿಕವಾಗಿ ಬಂದದ್ದು ಅತ್ಯಾಶ್ಚರ್ಯಕರ! ಇದಕ್ಕಾಗಿ ನನಗೆ ಎಷ್ಟು ಆನಂದವಾಗಿದೆಯೆಂಬದನ್ನು ತಿಳಿಸುವ ಶಕ್ತಿ ನನ್ನ ವಾಣಿಯಲ್ಲಿರುವದೇ ಇಲ್ಲ, ಎಂದಂದ.

ಭಾಯೋಲೆ ಅನ್ನುತ್ತಾಳೆ:— ಮಹಾಶಯರೇ, ನಾನೀಗ ಬಹು ಸಂಕಟಕ್ಕೀಡಾಗಿರುತ್ತೇನೆ. ತಮ್ಮ ಸಹಾಯ ಬೇಡುವದಕ್ಕೆಂದು ಇಲ್ಲಿಗೆ ಬಂದಿರುತ್ತೇನೆ.

ಆಗ ಆರ್ಟನ್ನ ಬಾಯಿಂದ ಏನೊಂದು ಹೇಳದಿದ್ದರೂ, ಆ ಕುಮಾರಿಯ ಕಡೆಗೆ ಪ್ರಶ್ನಸೂಚಕ ದೃಷ್ಟಿಯಿಂದ ನೋಡತೊಡಗಿದ.

ಆಗ ಆಕೆ ಮತ್ತೆ:—ಅಮೇರಿಕನ್ ದಂಡಿನ ಕ್ಯಾಪ್ಟನ್ನನಾದ ಉಯಿನ್‌ಕಾರ ತಮ್ಮ ಮಿತ್ರನಲ್ಲವೆ?

'ಅಹುದು,ಅದೊಂದು ವಿಚಿತ್ರ ವ್ಯಕ್ತಿ! ಆತನಂಥ ದೊಡ್ಡ ಮನುಷ್ಯರು ದುರ್ಲಭರೇ ಸರಿ.'

'ನನ್ನ ಮತವು ಇದಕ್ಕೆ ತೀರ ವಿಪರೀತವಾಗಿದೆ. ಆತ ಬಹು ಕೀಳು ಮನುಷ್ಯ. ಅವನಂಥ ಕಳ್ಳ-ಜೂಜುಗಾರ-ಠಕ್ಕರು ಸಿಕ್ಕುವದೇ ಅಪರೂಪ. ಆ ನರಾಧಮನೇ ನನ್ನನ್ನು ತಮ್ಮೆಡೆಗೆ ಕಳಿಸಿರುತ್ತಾನೆ.'

ಆರ್ಟನ್ನ ವಿಸ್ಮಯಚಕಿತನಂತೆ ನಟಿಸಿ:—ಏನು, ಇದೇನೆನ್ನುವಿರಿ? ಆತನ ಬಗ್ಗೆ ತಮ್ಮ ಭಾವನೆ ಇಷ್ಟು ಶೋಚನೀಯವಾಗಿದೆಯೆಂಬದು ಬಹು ಕ್ಷೋಭಕರ ಸಂಗತಿಯಾಗಿದೆ.

ಭಾಯೋಲೆ ಕ್ರೋಧಕಂಪಿತ ಧ್ವನಿಯಿಂದ:-ಆ ಮೋಸಗಾರ ನನ್ನನ್ನು ಮೋಸಗೊಳಿಸಿ, ನನ್ನೊಡನೆ ಇಸ್ಪೇಟಿನಾಟವಾಡಿ, ನನ್ನಿಂದ ಪಣಕಟ್ಟಿಸಿದ. ಆತನ ಆ ದುರಭಿಪ್ರಾಯ ನನಗೆ ಮೊದಲು ತಿಳಿಯಲಿಲ್ಲ. ಆತ ನನ್ನನ್ನು ಠಕ್ಕಿಸಿ, ನನ್ನಿಂದ ಎರಡುಸಾವಿರ ಪೌಂಡುಗಳಿಗಾಗಿ ಪ್ರಾಮಿಶರಿ ನೋಟು ಬರೆಯಿಸಿಕೊಂಡ. ಈಗ 'ಆ ಹಣ ಕೂಡಲೆ ಕೊಡು; ಇಲ್ಲದಿದ್ದರೆ ನಾನು ದಾವೆ ದಾಖಲ್ಮಾಡುತ್ತೇನೆನ್ನುತ್ತಾನೆ.

'ಆತನ ಮಾತಿಗೆ ನೀವಿಷ್ಟೇಕೆ ಅಂಜಿದಿರಿ? ಜೂಜು-ಪಣಗಳ ಸಂಬಂಧದ ದಾವೆಗಳನ್ನು ಕೋರ್ಟಿನವರು ದಾಖಲ್ಮಾಡಿಕೊಳ್ಳುವದಿಲ್ಲೆಂಬದು ನಿಮಗೆ ಗೊತ್ತಿಲ್ಲವೆ?'

'ಆ ದಾವೆ ನಡೆಯದಿದ್ದರೂ ಸಮಾಜದಲ್ಲಿ ಆ ಬಗ್ಗೆ ಚರ್ಚೆಗಂತೂ ಪ್ರಾರಂಭವಾಗುವದಷ್ಟೆ? ನಾನು ಪಣ ಕಟ್ಟಿ ಸಾಲಗಾರಳಾಗಿರುವೆನೆಂಬ ಸಂಗತಿ ಯಾರಿಗೂ ತಿಳಿಯಬಾರದೆಂದು ನನ್ನಿಚ್ಛೆ. ನನ್ನಂಥವಳಿಗೆ ಅದು ಬಹು ಅಗೌರವದ ಹಾಗು ಮಾನಹಾನಿಯ ಸಂಗತಿಯಾಗಿದೆ. ಈ ಸಂಗತಿ ಪ್ರಕಟವಾದರೆ, ನಾನು ಸಮಾಜಕ್ಕೆ ಮೋರೆ ಕೂಡ ತೋರುವಂತಿಲ್ಲ. ಅದರಿಂದ ನನ್ನ ಹೆಸರಿಗೆ ಕಲಂಕ ಹತ್ತುವದು. ನಾನು ನನ್ನ ಸೋದರಮಾವನಿಂದ ಪರಿಪೋಷಿತಳಾಗುವವಳು. ಅವನಿಗೆ ಈ ಸಂಗತಿ ತಿಳಿದರೆ, ಆತ

ನನ್ನ ಮೋರೆ ಕೂಡ ನೋಡಲಾರ.' ಹೀಗೆಂದು ನುಡಿಯುವಾಗ ಭಾಯೋಲಿಯ ಕಮಲಸದೃಶ ನೇತ್ರಗಳು ಅಶ್ರುಬಿಂದುಗಳಿಂದ ತುಂಬಿದವು.

ಕಳ್ಳರರಸನಾದ ಹ್ಯಾಮನ್ ಆರ್ಟನ್ನ ಸಹಾನುಭೂತಿಯು ದನಿಯಿಂದ:-ಕುಮಾರಿಯವರೇ, ತಾವು ತಮ್ಮ ಮನಸ್ಸಿನ ಕ್ಷೋಭವನ್ನು ಶಾಂತಗೊಳಿಸಿರಿ. ಹಣಕ್ಕಾಗಿಯೇ ಉಯಿನ್‌ಕಾರ ತಮ್ಮನ್ನು ನನ್ನಲ್ಲಿಗೆ ಕಳಿಸಿರುತ್ತಾನೆ. ಇತ್ತೀಚೆಗೆ ಆತ ಹಣ-ಕಾಸಿನ ಪೇಚಿನಲ್ಲಿರುತ್ತಾನೆಂಬುದು ನನಗೆ ಗೊತ್ತಿದೆ. ಈಗ ನನ್ನಿಂದೇನಾಗಬೇಕೆಂಬದನ್ನು ಹೇಳಿರಿ ಈಗಿಂದೀಗಲೆ ಎರಡು ಸಾವಿರ ಪೌಂಡಿನ ಚೆಕ್ಕನ್ನು ನಾನು ನಿಮಗೆ ಕೊಟ್ಟರೆ ನಿಮ್ಮ ಕೆಲಸವಾಗುವದೆ? ಎಂದಂದ ಆರ್ಟನ್ನನ ಕೋಮಲ ಮಧುರ ಸ್ವರದ ನುಡಿಗಳನ್ನು ಕೇಳಿ ಹಾಗು ಆಗಿನ ಆತನ ಮುಖಭಾವವನ್ನು ಕಂಡು ನಿಃಸ್ವಾರ್ಥ-ಪರೋಪಕಾರ ಸಾಧನೆಗಳೇ ಈ ಮಹಾ ಪುರುಷನ ಜೀವನದ ಇತಿಕರ್ತವ್ಯಗಳೆಂದು ತೋರುವಂತಿತ್ತು.

ಭಾಯೋಲಿ:—'ತಾವು ನನ್ನನ್ನು ಈ ವಿಪತ್ತಿನಿಂದ ಪಾರು ಮಾಡಿರಿ.'

ಬಳಿಕ ಆರ್ಟನ್ನ ಕೆಲ ಕಾಲದ ವರೆಗೆ ಚಿಂತಿಸಿ:-ಈ ಹಣ ಸ್ವಲ್ಪವಲ್ಲ; ನಾನು ತಮ್ಮ ಕಲ್ಯಾಣ ಚಿಂತನೆಗಾಗಿ ಸಾಧ್ಯವಾದಷ್ಟು ಬೇಗನೆ ಕೊಡುವೆನು. ಆದರೆ-ಆದರೆ-ಸಂಶಯವಿಷ್ಟೇ, ನೀವು ಬರೀ ಉಯಿನ್‌ಕಾರನಲ್ಲಷ್ಟೇ ಸಾಲ ತೆಗೆದಿರ ಪಿರೋ ಅಥವಾ ಮತ್ತೆ ಯಾರಲ್ಲಾದರೂ ತಮ್ಮ ಸಾಲವಿದೆಯೊ? ತಾವು ನನ್ನ ಬಳಿಯಲ್ಲಿ ಕೊಂಚವೂ ಮರೆಮಾಜದೆ ತಿಳಿಸಬೇಕು.

ಅಂಜುತ್ತಂಜುತ್ತ ಭಾಯೋಲಿ:-ಅಹುದು; ಮತ್ತೊಬ್ಬ ದೊಡ್ಡ ಮನುಷ್ಯರಲ್ಲಿಯೂ ನಾನು ಸಾವಿರೆರಡು ಸಾವಿರ ಪೌಂಡುಗಳ ಸಾಲ ತೆಗೆದಿರುತ್ತೇನೆ; ಆದರೆ ಅವರು ನಮ್ಮ ಋಣಾನುಬಂಧಿಗಳು. ಅವರ ಸಾಲವನ್ನು ನಾನು ಸಾವಕಾಶ ಕೊಟ್ಟರೂ ನಡೆಯುವದು, ಎಂದೆನ್ನಲು,

ಆರ್ಟನ್ನ ಒಳ್ಳೇ ಗಂಭೀರ ವಾಣಿಯಿಂದ:-ಉಯಿನ್‌ಕಾರ ತನ್ನ ಸಾಲದ ಸಲುವಾಗಿ ನಿಮ್ಮನ್ನು ಅಂಜಿಸಿದನೆಂದು ನೀವು ಆತನ ಸಾಲ ತೀರಿಸಲಿಕ್ಕೆ ತತ್ಪರರಾಗಿರುತ್ತೀರಿ. ನಾನು ಆತನ ಸಾಲವನ್ನಷ್ಟು ತೀರಿಸಿಬಿಟ್ಟರೆ, ನಿಮ್ಮ ವಿಷಯಕವಾಗಿ ಸಮಾಜದಲ್ಲುಂಟಾಗಬಹುದಾದ ಗೊಂದಲ ಆಗಲಿಕ್ಕಿಲ್ಲೆಂದು ನೀವು ತಿಳಿದಿರುತ್ತೀರಿ; ಆದರೆ ಆ ನಿಮ್ಮ ಬೇರೊಬ್ಬ ಧನಿಕ 'ಭಾಯೋಲಿ ನನ್ನ

ಸಾಲ ಕೊಡಲಿಲ್ಲೆಂದೂ, ಆಕೆ ನನ್ನನ್ನು ವಂಚಿಸಿದಳೆಂದೂ' ಒದರುತ್ತ ಹೋದ ಬಾಗ, ಸಮಾಜದೊಳಗೆ ನಿಮ್ಮ ಅಪಖ್ಯಾತಿಯಾಗುವದುಳಿಯುವದೇ?

'ನಾನು ಆತನನ್ನು ವಂಚಿಸಿದೆನೇ?'

ಆರ್ಟನ್ನ ದೃಢಸ್ವರದಿಂದ:--'ಅಹುದು; ಖಂಡಿತವಾಗಿಯೂ ನೀವು ಆತನ ಸಾಲ ಮುಳುಗಿಸುವಿರಿ. ಯಾರಿಗೆ ಪಣ-ಜೂಜುಗಳನ್ನು ಕಟ್ಟುವ ರೂಢಿ ಯಿದೆಯೋ ಹಾಗು ಯಾರಲ್ಲಿ ಕೊಂಚವೂ ಹಣವಿಲ್ಲವೋ, ಅವರು ಮುಂದಿಯ ಸಾಲ ಮುಳುಗಿಸದೆ ಮತ್ತೇನು ಮಾಡುವರು? ಇಂಥವರಿಗೆ ವಂಚಕರೆನ್ನದೆ, ಮತ್ತೇನೆನ್ನಬೇಕು? ನಿಮಗೆ ಜೂಜಿನ ಚಟ ವಿಶೇಷವಾಗಿರುವದರಿಂದ ನಿಮ್ಮಲ್ಲಿ ಒಂದು ಕಾಸು ಕೂಡ ಇರದಿದ್ದರೂ ನೀವು ದಿನಾಲು ಎಷ್ಟೋ ಪೌಂಡುಗಳ ಜೂಜನ್ನಾಡುವಿರಿ; ಅದಲ್ಲದೆ ಹಣದ ಯಾಚನೆಗಾಗಿ ಒಬ್ಬ ಅಪರಿ ಚಿತ ವಿದೇಶೀಯ ಯುವಕನ ಬಳಿಗೆ ಇಂಥ ರಾತ್ರಿಯ ಸಮಯದಲ್ಲಿ ಬರು ತ್ತಿರುವಿರಿ. ಮನೆತನಸ್ತ ಹೆಂಗಸರಿಗೆ ಇದಕ್ಕಿಂತಲೂ ಹೆಚ್ಚಿನ ಅಧಃಪತನವಾವ ದಿರುವದು? ಉಯಿನ್‌ಕಾರ ನಿಮಗೆ ಕೋರ್ಟು-ಕಚೇರಿಗಳ ಅಂಜಿಕೆ ತೋರಿ ದ್ದರೆ ಹಾಗು ಸಮಾಜದಲ್ಲಿ ನಿಮ್ಮ ಬಗ್ಗೆ ಅಪಕೀರ್ತಿ ಹರಡುವೆನೆಂದು ಅಂದಿ ದ್ದರೆ ಆತ ಅದರಂತೆ ಖಂಡಿತವಾಗಿಯೂ ಮಾಡುವವನೇ. ಆತನಲ್ಲಿ ದಯಾ-ದಾಕ್ಷಿಣ್ಯಗಳಿರುವದಿಲ್ಲ.'

ಆರ್ಟನ್ನನ ಆ ಮಾತುಗಳನ್ನು ಕೇಳಿ ಭಾಯೋಲೆ ದುಃಖ, ಲಜ್ಜೆ, ಅವ ಮಾನಗಳಿಂದ ಯುಕ್ತಳಾಗಿ ಭೋರೆಂದು ಅತ್ತಳು. ಅದನ್ನು ಕಂಡು ಆರ್ಟನ್ನ ನೆನ್ನುತ್ತಾನೆ:-ಭಾಯೋಲಾಕುಮಾರೀ, ಇನ್ನು ಹೀಗೆ ಅತ್ತರೆ ಆಗುವದೇನು? ನಿಮ್ಮ ಸ್ಥಿತಿ ಹೀಗಿದ್ದರೂ ನಾನು ನಿಮಗೆ ಹಣ ಕೊಡಲಾರೆನೆಂದು ಅಂದಿಲ್ಲ. ನಾನು ಕೇವಲ ಬಂಧುಭಾವದಿಂದ ನಿಮಗೆ ನಾಲ್ಕು ಸದುಪದೇಶದ ಮಾತು ಗಳನ್ನು ಹೇಳಿರುವೆನಿಷ್ಟೆ.

ಭಾಯೋಲೆ ಕಣ್ಣುಗಳನ್ನೊರಿಸಿಕೊಳ್ಳುತ್ತ:-ತಮ್ಮ ಈ ಸದ ಪದೇಶ ವನ್ನು ನಾನೆಂದೂ ಮರೆಯಲಾರೆ. ತಾವು ನನಗೀಗ ಎರಡು ಸಾವಿರ ಪೌಂಡು ಗಳ ಚೆಕ್ಕನ್ನಷ್ಟು ದಯಪಾಲಿಸಿ, ನನ್ನ ಮಾನ-ಸಂಭ್ರಮಗಳನ್ನುಳಿಸಿರಿ.

'ಆ ಬಗ್ಗೆ ನನ್ನ ಅಡ್ಡಿಯೇನಿದೆ? ಆದರೆ ತಾವು ತಮ್ಮಿಂದ ಶಕ್ಯವಾದಷ್ಟು ರೀತಿಯಿಂದ ನನಗೆ ಸಹಾಯ ಮಾಡುತ್ತಿದ್ದರೆ ಮಾತ್ರ ನಾನು ತಮಗೆ ಹಣ ಕೊಡಲಿಕ್ಕೆ ಸಿದ್ಧನಿರುತ್ತೇನೆ.'

ಭಾಯೋಲೆ ಅಧೀರಭಾವದಿಂದ:-ಸಹಾಯರ್ನೇ! ಈ ಕಠಿಣ ಪ್ರಸಂಗ ದಿಂದ ನೀವು ನನ್ನನ್ನು ಉದ್ಧಾರ ಮಾಡಿದರೆ ನಾನು ನಿಮಗೆ ಚಿರಕಾಲ ಕೃತಜ್ಞಳಾಗಿರುತ್ತೇನೆ; ಅಲ್ಲದೆ ನೀವು ನನಗೆ ಏನು ಮಾಡ ಹೇಳುವಿರೋ ನಾನದನ್ನು ಶಕ್ಯವಾದಷ್ಟು ಮಾಡಲಿಕ್ಕೆ ತಪ್ಪಲಿಕ್ಕಿಲ್ಲ.

'ನಿಮಗಸಾಧ್ಯವಾದ ಯಾವ ಕೆಲಸ ಮಾಡಲಿಕ್ಕೂ ನಾನು ನಿಮ್ಮನ್ನು ಒತ್ತಾಯಪಡಿಸಲಾರೆ. ಈ ಲಂಡನ್ನಿನ ಉಚ್ಚ ದರ್ಜೆಯ ಸಮಾಜದಲ್ಲಿ ತಮ್ಮ ಪ್ರತಿಷ್ಠೆ ಹೆಚ್ಚಾಗಿರುತ್ತದೆ. ತಮ್ಮ ಆ ಹೆಚ್ಚಿನ ಪ್ರತಿಷ್ಠೆಯನ್ನಷ್ಟು ನನಗೆ ಅನು ಕೂಲ ಮಾಡಿ ಕೊಟ್ಟರೆ, ನನ್ನ ಕೆಲಸ ಸಹಜವಾಗುವದು. ನಿಮ್ಮ ಬಂಧು ಬಾಂಧವರ ಮನೆಯೊಳಗಿನ ನನಗೆ ಬೇಕಾಗಿರುವ ಕೆಲ ಗುಪ್ತ ರಹಸ್ಯಗಳನ್ನು ನೀವು ನನಗೆ ತಿಳಿಸಿದರೆ ಸಾಕು; ನಿಮಗಿದು ಅಸಾಧ್ಯವಾದ ಮಾತಲ್ಲ.'

ಭಾಯೋಲೆ ಭಯವಿಹ್ವಲಳಾಗಿ ಅನ್ನುತ್ತಾಳೆ:-ತಾವು ನನ್ನ ಮುಖಾಂ ತರ ನನ್ನ ಎಲ್ಲ ಸಭ್ಯ ಬಂಧು-ಬಾಂಧವರ ಮೇಲೆ ಪತ್ತೇದಾರಿಕೆ ನಡೆಸುವಿರೇನು?

ಆರ್ಟೆನ್ನ ಪ್ರಶಾಂತ ಭಾವದಿಂದ:-ಇದಕ್ಕೆ ನೀವು ಪತ್ತೇದಾರಿಯೆಂದು ಒಂದು ವೇಳೆ ಅಂದುಕೊಂಡರೂ ಆದರಿಂದ ನನಗೆ ಕೆಡಕೆನಿಸುವದಿಲ್ಲ. ಲಾರ್ಡ ಬೋರ್ಲರ ಮಗಳೊಡನೆ ತಮ್ಮ ಮೈತ್ರಿ ವಿಶೇಷವಾಗಿರುತ್ತದೆಂದು ನನ್ನ ಭಾವನೆ.

'ಅಹುದು. ಎಲೀಸೆ ನನ್ನ ಪ್ರಿಯ ಸಖಿ. ಪ್ರಾಣ ಹೋದರೂ ನಾನು ಅವಳ ಸಂಬಂಧದ ಗುಪ್ತ ರಹಸ್ಯಸ್ಫೋಟನಗೊಳಿಸಲಾರೆ....'

ಆರ್ಟೆನ್ನ ಅವಳನ್ನು ಹೆಚ್ಚು ಮಾತಾಡಗೊಡದೆ:—ಎಲೀಸೆಯೊಡನೆ ನಿನ್ನ ಸಖ್ಯ ಎಷ್ಟರಮಟ್ಟಿಗಿರುತ್ತದೆಂಬದನ್ನು ನಾನು ಪರೀಕ್ಷಿಸಿಯೇ ತೀರು ವೆನು; ಮತ್ತು ನಾನು ನಿನಗೆ ಏನೇನು ಮಾಡ ಹೇಳುವೆನೋ ನೀನು ಅದ ರಂತೆ ಮಾಡಲೇ ಬೇಕು.

ಭಾಯೋಲೆ ತಟ್ಟನೆ ಎದ್ದು ನಿಂತು ಗೋಣನ್ನಲ್ಲಾಡಿಸುತ್ತ:—ನನ್ನ ಬುದ್ಧಿಮಾಂದ್ಯದ ಮೂಲಕ ನನ್ನ ಉನ್ನತ ಶಿರಸ್ಸು ಧೂಲಿಯಲ್ಲಿ ಬಿದ್ದು ಹೊರ ಳಾಡಹತ್ತಿದೆ; ಆದರೂ ನಾನು ನನ್ನ ಪ್ರಿಯ ಸಖಿಯೊಡನೆ ವಿಶ್ವಾಸ ಘಾತ ಮಾಡುವಷ್ಟು ನನ್ನ ಅಧಃಪತನವಿನ್ನೂ ಆಗಿರುವದಿಲ್ಲ. ಛೀ! ನಾನೆಂದಿಗೂ ಯಾವ ಕಾರಣದಿಂದಲೂ ಎಲೀಸೆಯ ವಿಶ್ವಾಸಘಾತ ಮಾಡಲಾರೆ.

ಭಾಯೋಲೆಯ ಆ ದಂಭಯುಕ್ತ ನುಡಿಗಳನ್ನು ಕೇಳಿ, ಹ್ಯಾಮನ್ ಆರ್ಟೆನ್ನ ಸಿಟ್ಟುಬೆಂಕಿಯಾದ; ಆದರೂ ಆತ ತನ್ನ ಮನೋಭಾವವನ್ನು

ವ್ಯಕ್ತಪಡಿಸದೆ, ಗಟ್ಟಿಯಾಗಿ ಅನ್ನುತ್ತಾನೆ:-'ಭಲೆ! ಭಲೆ!! ತಾವು ಹೀಗೆಯೇ ತಮ್ಮ ಗೌರವವನ್ನು ಅಖಂಡವಾಗಿ ಕಾದುಕೊಳ್ಳಿರಿ' ಎಂದಂದ. ಬಳಿಕ ಆತ ತನ್ನ ಸೇವಕನನ್ನು ಕೂಗಿ:-ಸಿಪಾಯಿ, ಈ ಹೆಣ್ಣುಮಗಳಿಗೆ ಹೊರಗೆ ಹೋಗ ಲಿಕ್ಕೆ ದಾರಿ ದೋರು. ಎಂದು ಆಜ್ಞೆ ಮಾಡಿದ.

ಛಾಯೋಲೆ ಆವರಣದಿಂದ ಮುಖಮಂಡಲವನ್ನು ಮುಚ್ಚಿಕೊಂಡು ಆರ್ಟನ್ನನ ಮನೆಯಿಂದ ಹೊರಟು ಹೋಗಲು, ಆರ್ಟನ್ನ ಟೆಲಿಫೋನ ಯಂತ್ರದ ಬಳಿಗೆ ಬಂದು ಉಯಿನ್‌ಕಾರನನ್ನು ಕರೆದ. ಆತ ಬಂದೆನೆಂದು ಎದುರ ದನಿಗೊಡಲು, ಆರ್ಟನ್ನ ಹೇಳುತ್ತಾನೆ:-'ನೀನು ಕಳಿಸಿದ ಸ್ತ್ರೀ ಬಂದಿ ದ್ದಳು. ಆಕೆಯ ಗರ್ವವಿನ್ನೂ ಅಡಗಿಲ್ಲ. ನಾನು ಅವಳ ಗರ್ವಭಂಗವಾಗುವ ವ್ಯವಸ್ಥೆ ಬೇಗನೆ ಮಾಡುವೆ. ನೀನು ನಿನ್ನ ಹಣ ವಸೂಲಿಗಾಗಿ ಅವಳಿಗೆ ಆಗಾಗ್ಗೆ ತಗಾದೆ ಕೊಡು; ಒಳ್ಳೇ ಅಂಜಿಕೆ ದೋರು. ಕಡೆಗೆ ಆಕೆ ನಿನ್ನ ಕೈಕಾಲು ಬೀಳ ಬರುವಳು. ನಾವು ಅವಳನ್ನು ನಮ್ಮ ಕೈವಶ ಮಾಡಿಕೊಳ್ಳಲೇಬೇಕು.'

ಮರು ದಿನ ಛಾಯೋಲೆ ಮತ್ತೆ ಆರ್ಟನ್ನನನ್ನು ಕಾಣಲಿಕ್ಕೆ ಬಂದಳು; ಮತ್ತು ನಿಮ್ಮ ಅಪ್ಪಣೆಯಂತೆ ವರ್ತಿಸುವೆನೆಂದು ಪ್ರತಿಜ್ಞಾಬದ್ಧಳಾಗಿ, ಅವ ನಿಂದ ತನಗೆ ಬೇಕಾಗಿದ್ದ ರಕಮಿನ ಚೆಕ್ಕು ಪಡೆಕೊಂಡು ಹೋದಳು.



## ೫ನೇ ತೆರೆ—ಅನುಮಾನವೂ ಸಿದ್ಧಾಂತವೂ.

ರಾಬರ್ಟ ಬ್ಲೇಕ ಬೆಳಗಿನ ಉಪಾಹಾರಕ್ಕೆ ಕುಳಿತಾಗ ಅಂದಿನ ದೈನಿಕ ಪತ್ರಗಳ ಕಡೆಗೆ ನೋಡುತ್ತಿದ್ದ. ಆಗ ಆತ ಒಮ್ಮೆಲೆ ತನ್ನ ಶಿಷ್ಯನಾದ ಸ್ಮಿತ್ಥನ ಕಡೆಗೆ ಹೊರಳಿ:-ಸ್ಮಿತ್ಥಾ, ಡಾಪ್ಪನಿಂಗ ಸ್ಟ್ರೀಟಿನೊಳಗಿನ ಲಾರ್ಡ ಜೋರ್ಲರ ಮನೆಯಿಂದ ನನಗೆ ಬೇಗನೆ ಕರೆ ಬರಲಾಗದೆ

ಸ್ಮಿತ್ಥನು ವಿಸ್ಮಯ ಚಕಿತ ನೇತ್ರಗಳಿಂದ ಆತನ ಮುಖದ ಕಡೆಗೆ ನೋಡುತ್ತ:-ಗುರುಗಳೇ, ನೀವನ್ನುವದಾದರೂ ಏನು? ತಮ್ಮ ಈ ಬಗೆಯ ಅನುಮಾನಕ್ಕೆ ಅಂಥ ಆಧಾರವಾದರೂ ಏನಿದೆ?

ಸ್ಮಿತ್ಥನ ಈ ಪ್ರಶ್ನೆಗೆ ಬ್ಲೇಕ ಉತ್ತರ ಹೇಳತೊಡಗಿದ್ದ. ಇಷ್ಟರಲ್ಲಿ ಬ್ಲೇಕನ ಹೆಂಡತಿ ಆ ಮನೆಯನ್ನು ಪ್ರವೇಶಿಸಿ, ಬ್ಲೇಕನ ಕೈಗೊಂದು ಪ್ಲಾಜಿ

ಟಿಂಗ ಕಾರ್ಡ ಕೊಟ್ಟು:-ಈ ವ್ಯಕ್ತಿ ಹೊರಗಿನ ಪಡಸಾಲೆಯಲ್ಲಿ ತಮ್ಮ ಭೆಟ್ಟಿಗಾಗಿ ಕಾಯ್ದಿರುತ್ತಾನೆ, ಎಂದು ಹೇಳಿದಳು.

ಬ್ಲೇಕ ಆ ಕಾರ್ಡಿನ ಮೇಲಿನ ಹೆಸರನ್ನೋದಿದ:-'ಡ್ಯೂಕವುಯಿಲ್ಯಮ್ಮ ಎಂ. ಸಿ.' ಎಂದು ಅದರಲ್ಲಿ ಮುದ್ರಿಸಲ್ಪಟ್ಟಿತ್ತು. ಬಳಿಕ ಬ್ಲೇಕ ಸ್ಮಿತ್ಥನ ಮುಖದ ಕಡೆಗೆ ನೋಡಿ ನಗುತ್ತ:-ನೋಡು-ನೋಡೋ, ಮೋಡವಿಲ್ಲದೆ ಮಳೆಗರೆದಂತಾಯಿತು! ನನ್ನ ದೈವವಾಣಿ ಕೂಡಲೆ ದಿಟವಾದಂತಾಯಿತಲ್ಲವೆ? ಡ್ಯೂಕ ವುಯಿಲ್ಯಮ್ಮ ಲಾರ್ಡ ಬೋರ್ಲರ ಪ್ರಾಯವ್ಹೇಟ ಸೆಕ್ರೆಟರಿಯೆಂಬದನ್ನರಿಯೆಯಾ?

ಸ್ಮಿತ್ಥ:-ಹಾಗಲ್ಲವೆ? ಹಾಗಾದರೆ ಗುರುಗಳೇ, ತಾವಿನ್ನು ಪ್ರಸಿದ್ಧ ರಮಲಜ್ಞರಾದಿರೆನ್ನಬೇಕಾಯಿತು!

ಬ್ಲೇಕ ಸ್ಮಿತ್ಥನ ಮಾತಿನ ಕಡೆಗೆ ಕಿವಿಗೊಡದೆ, ಡ್ಯೂಕನನ್ನು ಒಳಗೆ ಕರೆಯೆಂದು ತನ್ನ ಹೆಂಡತಿಗೆ ಹೇಳಿದ.

ಬಳಿಕ ಬ್ಲೇಕ ಆ ವೃತ್ತಪತ್ರ ತೆಗೆದಿಟ್ಟು, ಕಾಫಿ-ತಿಂಡಿಗಳನ್ನು ತೀರಿಸಿದ. ನಂತರ ಆತ ಲಗುಬಗೆಯಿಂದ ತನ್ನ ಆಫೀಸ ರೂಮಿಗೆ ಹೋಗಿ, ಡ್ಯೂಕ ವುಯಿಲ್ಯಮ್ಮನ ಮಾರ್ಗ ನಿರೀಕ್ಷಿಸುತ್ತ ಕುಳಿತ ಪರಕ್ಷಣದಲ್ಲಿಯೇ ಡ್ಯೂಕ ಅಲ್ಲಿಗೆ ಬಂದ. ಕೂಡಲೆ ಬ್ಲೇಕ ಬಾಗಿಲವರೆಗೆ ಎದ್ದು ಹೋಗಿ ಎದುರ್ಗೊಂಡು, ಅವನನ್ನು ಸನ್ಮಾನಪೂರ್ವಕವಾಗಿ ಬರಮಾಡಿಕೊಂಡ; ಹಾಗು ಒಂದು ಬಹು ಮೂಲ್ಯವಾದ ಖುರ್ಚಿಯ ಮೇಲೆ ಆತನನ್ನು ಕೂರಿಸಿದ. ಡ್ಯೂಕನಿಗೂ ಬ್ಲೇಕನಿಗೂ ಬಹು ದಿನಗಳಿಂದ ಋಣಾನುಬಂಧುತ್ವವಿದ್ದಿತು. ಬ್ಲೇಕ ಪ್ರವೀಣ ಪತ್ತೆದಾರ; ಆದರೆ ಡ್ಯೂಕ ನವತರುಣ ಅಮಲ್ದಾರ ಮಾತ್ರ; ಆದರೂ ಬ್ಲೇಕ ಅವನನ್ನು ಹೆಚ್ಚಾಗಿ ಪ್ರೀತಿಸುತ್ತಿದ್ದ. ಡ್ಯೂಕನಾದರೂ ಬ್ಲೇಕನನ್ನು ತನ್ನ ಹಿರಿಯ ಅಣ್ಣನಂತೆ ಭಾವಿಸುತ್ತಿದ್ದ. ಇರಲಿ.

ಡ್ಯೂಕನು ಆಸನಾಧಿಷ್ಠಿತನಾಗಿ, ತಾನು ಬಂದ ಕಾರಣ ಹೇಳುವ ಮೊದಲೇ ಬ್ಲೇಕ ಅನ್ನುತ್ತಾನೆ:-ಡ್ಯೂಕರೇ, ನಾನು ಮುಖ್ಯ ಪ್ರಧಾನರ ಕಡೆಯ ಕರೆಯನ್ನು ನಿರೀಕ್ಷಿಸುತ್ತ ಕೂಡ್ರಲಿಕ್ಕೂ ತಮ್ಮ ವ್ಹಿಜಿಟಿಂಗ ಕಾರ್ಡು ನನ್ನ ಹಸ್ತಗತವಾಗಲಿಕ್ಕೂ ಗಂಟೇ ಬಿದ್ದಿತು.

ವಿಸ್ಮಯಚಕಿತನಾದ ಡ್ಯೂಕ:-ನೀವು ಅನ್ನುವದಾದರೂ ಏನು? ನಾವು ನಿಮ್ಮ ಸಹಾಯ ಯಾಚನೆಗಾಗಿ ಬರುವೆವೆಂಬದನ್ನು ತಿಳಿದದ್ದಾದರೂ ಹೇಗೆ?

ಬ್ಲೇಕ ನಸು ನಕ್ಕು:-ಇಷ್ಟು ವರ್ಷಗಳನ್ನು ಮಾನವ ಚರಿತ್ರಾವಲೋಕನದಲ್ಲಿಯೇ ಕಳೆದ ನನಗೆ, ಇಷ್ಟೂ ತಿಳಿಯಕೂಡದೇನು? ನೀವು ಯಾವದೊಂದು ಸಂಗತಿಯನ್ನು ಯಥಾ ನಿಯಮದಂತೆ ಬಹಿರಂಗ ಪಡಿಸುವ ಮೊದಲೇ ಅದು ಯಾವಾಗ ತಟ್ಟನೆ ವೃತ್ತಪತ್ರಗಳ ಮುಖಾಂತರ ಪ್ರಸಿದ್ಧಿ ಹೊಂದುವದೋ, ಆಗ ಅದು ಯಾವದೊಂದು ಬಗೆಯ ಗುಪ್ತರಹಸ್ಯಸ್ಫೋಟನದ ಉದ್ದೇಶವಾಗಿದೆಯೆಂದೇ ತಿಳಿಯಬೇಕಾಗುತ್ತದೆ. ಸರಕಾರ-ದರಬಾರಗಳ ಮಾನ-ಸಂಭ್ರಮಗಳನ್ನು ಚೆನ್ನಾಗಿ ಕಾಯ್ದುಕೊಳ್ಳುವದಕ್ಕಾಗಿ ಆ ಸುದ್ದಿಗಳು ಹಾಗೆ ತಟ್ಟನೆ ಹೊರಬೀಳದಂತೆ ನೀವು ಅವುಗಳ ಛಿದ್ರಗಳನ್ನೆಲ್ಲ ಮುಚ್ಚಲೆತ್ನಿಸುವದೇ ಸ್ವಾಭಾವಿಕವಾಗಿದೆ.'

'ವೃತ್ತಪತ್ರಗಳನ್ನೋದುವಾಗಲೇ ನೀವು ಇಷ್ಟು ಸೂಕ್ಷ್ಮವಾಗಿ ಆಲೋಚಿಸಿದುದು ವಿಸ್ಮಯಕರವಾಗಿದೆ.'

'ವೃತ್ತಪತ್ರಗಳಲ್ಲಿಯ ಪ್ರತಿಯೊಂದು ವಿಷಯವನ್ನು ತಿಳಿಯುವದು ನನ್ನ ಅತ್ಯವಶ್ಯದ ಕರ್ತವ್ಯ; ಮತ್ತು ಅವುಗಳ ವಾಚನದಿಂದ ನನ್ನ ಮನಸ್ಸಿನ ಮೇಲೆ ಒಳ್ಳೇ ಪರಿಣಾಮವೂ ಆಗುತ್ತದೆ. ಅದಿರಲಿ. ಈಗ ನೀವು ಯಾವ ಕೆಲಸಕ್ಕಾಗಿ ಬಂದಿರುತ್ತೀರಿ? ನಿಮ್ಮ ಮನೋಗತವನ್ನು ನಾನು ಅನುಮಾನದಿಂದ ಹೇಳಲಾರೆ.'

ಡ್ಯೂಕ ಬ್ಲೇಕನಿಗೆ ಯಾವ ಸಂಗತಿಯನ್ನು ತಿಳಿಸಬಂದಿದ್ದನೋ ಅದು ನಮ್ಮ ವಾಚಕವರ್ಗಕ್ಕೆ ಅಜ್ಞಾತವಾಗಿಲ್ಲ. ಲಾರ್ಡ ಬೋರ್ಲರ ಗುಪ್ತಗೃಹದೊಳಗಿನ ಯಾವ ಸಂಗತಿಗಳು ಇದು ವರೆಗೆ ಪರಿಸ್ಫೋಟವಾಗಿದ್ದವೋ ಡ್ಯೂಕ ಅವನ್ನೆಲ್ಲ ಒಂದೊಂದಾಗಿ ಬ್ಲೇಕನಿಗೆ ತಿಳಿಸಿದ; ಹಾಗು 'ಈ ಎಲ್ಲ ಗುಪ್ತ ರಹಸ್ಯಗಳು ಪ್ರಕಟವಾಗಿದ್ದರೂ ಅಷ್ಟೊಂದು ಅಭ್ಯಂತರವಿರಲಿಲ್ಲ; ಅವುಗಳ ಬಗ್ಗೆ ಉದಾಸೀನ ಮಾಡಿದ್ದರೂ ನಡೆಯುವಂತಿತ್ತು; ಆದರೆ ಇದೇ ಬಗೆಯಾಗಿ ಅಲ್ಲಿಯ ಗುಪ್ತರಹಸ್ಯಗಳೆಲ್ಲ ಪ್ರಕಟವಾಗಹತ್ತಿದರೆ, ಬ್ರಿಟಿಶ ರಾಜ್ಯಕ್ಕೆ ಬೇಗನೆ ದಾರುಣವಾದ ಗಂಡಾಂತರವುಂಟಾಗಬಹುದೆಂಬದನ್ನು ಹೇಳಲವಶ್ಯವಿಲ್ಲ. ಅದಕ್ಕೆಂದೇ ಈಗ ನಾನು ನಿಮ್ಮಲ್ಲಿಗೆ ಬಂದು, ಆ ಗುಪ್ತರಹಸ್ಯಭೇದದ ಗುಟ್ಟು ತಿಳಿಯಬೇಕೆಂದು ನಿಮ್ಮನ್ನು ಕುರಿತು ಬಿನ್ನಯಿಸುತ್ತೇನೆ', ಎಂದಂದ.

'ನೀವು ಬಂದದ್ದು ಬಹು ಚನ್ನಾಯಿತು. ಈ ಉಪಸರ್ಗವು ಸಾಮಾನ್ಯವಾದುದಲ್ಲ; ಇದು ಸಾಂಘಾತಿಕ-ಸಂಸರ್ಗವಾಗಿರುತ್ತದೆ. ಈ ಗುಪ್ತರಹಸ್ಯ

ಭೇದದ ಕಾರ್ಯದಲ್ಲಿ ಯಾವನೊಬ್ಬ ಸರಕಾರೀ ನೌಕರನೂ ಸಹಾಯಕನಾಗಿರುವ ಸಂಭವವಿದೆ. ನಿಮ್ಮ ವಿವಾಹದ ರಹಸ್ಯಸ್ಫೋಟನದ ವಿಷಯವನ್ನೇ ತಕ್ಕೊಂಡರೂ ನೀವು ಲಾರ್ಡ ಬೋರ್ಲರ ಮಗಳನ್ನು ಪ್ರೀತಿಸುತ್ತಿರುವಿರೆಂಬದು ಜಗಜ್ಜಾಹೀರಾಗಿದ್ದಿತು; ಆದರೆ ಲೇಡೀ ಎಲೀಸೆ ನಿಮ್ಮನ್ನು ಬೇಗನೆ ಲಗ್ನವಾಗಲಿರುವಳೆಂಬ ಸುದ್ದಿಯನ್ನು ಶಾಸ್ತ್ರೋಕ್ತ ವಾಗ್ದಾನಕ್ಕಿಂತ ಮೊದಲೇ ವೃತ್ತಪತ್ರಗಳಲ್ಲಿ ಪ್ರಸಿದ್ಧಿಸಿರುವವನು ಒಳ್ಳೇ ನಿಷ್ಣಾತ ಗೃಹಭೇದಿಯೇ ಆಗಿರಲಿಕ್ಕೆಬೇಕು. ನಿಮ್ಮಿರ್ವರ ಸಂಭಾಷಣವನ್ನು ಯಾವನಾದರೂ ಮರೆಗೆ ನಿಂತು ಕೇಳಿಕೊಂಡು ಹಾಗೆ ವೃತ್ತಪತ್ರಗಳಲ್ಲಿ ಪ್ರಸಿದ್ಧಸಿರಬಹುದೆಂದು ತಿಳಕೊಂಡು ನೀವು ಸುಮ್ಮನಾಗಿರುತ್ತೀರಿ; ಆದರೆ ಅಂದು ನೀವು ಲಗ್ನದ ಬಗ್ಗೆ ಮಾತನಾಡುವ ಮೊದಲು ಕ್ಯಾಪ್ಟನ್ ರೇನ್‌ಹ್ಯಾಮ ಮತ್ತು ಮಾರ್ಕ್ವಿಸ ಆರ್ಟನ್ನ ಇವರೀರ್ವರ ಹೊರತು ಮತ್ತಾರೂ ಅಲ್ಲಿದ್ದಿಲ್ಲ. ಅವರೇ ಮರೆಗೆ ನಿಂತು ಕೇಳಿಕೊಂಡು ಅದನ್ನು ವೃತ್ತಪತ್ರಗಳಲ್ಲಿ ಪ್ರಕಟಿಸಿರಬಹುದೇ ಹೊರತು, ಅನ್ಯರ ಕೆಲಸ ಆದಾಗಿರುವದಿಲ್ಲ.'

'ಅದು ಹೇಗೆಯೇ ಇರಲಿ. ಬ್ಲೇಕರೇ, ನನ್ನ ಪಾಡು ನನಗಾಗಿ ಹೋಗಿದೆ! ಲಾರ್ಡ ಬೋರ್ಲರ ಸಂಬಂಧದ ಹಲವು ಗುಪ್ತರಹಸ್ಯಗಳು ನನಗೆ ಅವಗತವಾಗಿರುವದು ಸ್ವಾಭಾವಿಕ. ಅವು ನನ್ನ ಹೊರತು ಅನ್ಯರಾರಿಗೂ ತಿಳಿಯುವದಶಕ್ಯ. ಹೀಗಿರಲು, ಅಂಥ ಯಾವುದೊಂದು ಗುಪ್ತ ರಹಸ್ಯ ದೈವದುರ್ವಿಪಾಕದಿಂದ ಪ್ರಕಟವಾದರೆ, ಅದರ ದೋಷವೆಲ್ಲ ನನ್ನ ತಲೆಯ ಮೇಲೆಯೇ ಹೊರುವದು. ಅದರಿಂದ ನನ್ನ ಸರ್ವಸ್ವವೂ ನಾಶವಾಗದಿರದು!'

ರಾಬರ್ಟ ಬ್ಲೇಕ ಡ್ಯೂಕನ ಕಡೆಗೆ ಉತ್ಕಂಠತೆಯಿಂದ ನೋಡುತ್ತ ಸಹಾನುಭೂತಿಪೂರ್ವಕವಾಗಿ ಅನ್ನುತ್ತಾನೆ:-ಇಲ್ಲ; ಡ್ಯೂಕರೇ, ನಿಮ್ಮ ನಾಶದ ಆಶಂಕೆಯು ಕೊಂಚವೂ ಉಂಟಾದೀತೆಂದು ನನಗೆ ಅಂತಃಕರಣಪೂರ್ವಕವಾಗಿ ಎನಿಸುವದಿಲ್ಲ. ನಿಮ್ಮ ಸಂಬಂಧದಲ್ಲಿ ಲಾರ್ಡ ಬೋರ್ಲರ ಮನಸ್ಸು ಎಷ್ಟು ತೃಪ್ತಿಕರವಾಗಿರುವದೆಂಬದು ಅವರ ನಡವಳಿಕೆಯಿಂದಲೇ ವ್ಯಕ್ತವಾಗುತ್ತದೆ. ನೀವು ಅವರ ಸಂಪೂರ್ಣ ವಿಶ್ವಾಸಕ್ಕೆ ಪಾತ್ರರಾಗಿರದಿದ್ದರೆ, ಅವರು ತಮ್ಮ ಪ್ರಾಣಾಧಿಕ್ಯಳಾದ ಕನ್ಯೆಯನ್ನು ನಿಮಗರ್ಪಿಸಲಿಕ್ಕೆ ಎಂದೂ ಸಮ್ಮತಿಸುತ್ತಿರಲಿಲ್ಲ. ಯಾವುದೊಂದು ಅಜ್ಞಾತ ಕಾರಣದಿಂದ ಅವರ ಮನೆಯ ಗುಪ್ತರಹಸ್ಯ

ಗಳ ಭೇದವಾಗುತ್ತಿದ್ದರೂ, ನಿಮ್ಮಲ್ಲಿಯ ಅವರ ವಿಶ್ವಾಸ ಕಡಿಮೆಯಾದೀತೆಂಬದು ನಂಬತಕ್ಕ ಮಾತಾಗಿಲ್ಲ.

'ಬೋರ್ಲರು ನನ್ನನ್ನು ತಮ್ಮ ಹೊಟ್ಟೆಯ ಮಗನಂತೆ ಪ್ರೀತಿಸುತ್ತಿರುವರು; ಮತ್ತು ಮಗನಿಗಿಂತಲೂ ನನ್ನಲ್ಲಿ ಹೆಚ್ಚು ವಿಶ್ವಾಸವಿಡುತ್ತಿರುತ್ತಾರೆಂಬದನ್ನು ಒಪ್ಪಲೇಬೇಕು; ಆದರೆ ಬ್ಲೇಕರೇ, ಮಾನವನ ಮನಸ್ಸೇ ಅದು. ಒಂದು ವೇಳೆ ಯಾವುದೊಂದು ಕಾರಣದಿಂದ ನಾನು ಅವರ ವಿಶ್ವಾಸಕ್ಕೆ ಅಪಾತ್ರನಾದುದಾದರೆ, ಯಾವನೊಬ್ಬ ಸಾಮಾನ್ಯ ಪ್ರಾಯವ್ಹೇಟ ಸೆಕ್ರೆಟರಿಗಿಂತಲೂ ನನ್ನ ಅವಸ್ಥೆ ತೀರ ಶೋಚನೀಯವಾಗದಿರದು. ನನ್ನ-ಅವರ ನಡುವೆ ಕೇವಲ ಚಾಕರ-ಯಜಮಾನ ಈ ಬಗೆಯ ಸಂಬಂಧವಿದ್ದಿದ್ದರೆ ನಾನು ಇಷ್ಟೊಂದು ಚಿಂತಿಸುವ ಕಾರಣವಿರಲಿಲ್ಲ'

'ಡ್ಯೂಕರೇ, ಅನಾಗತ ವಿಪತ್ತಿನ ಅನುಮಾನದಿಂದ ನೀವಿಷ್ಟು ವ್ಯಾಕುಲರಾಗುವದು ತಕ್ಕದ್ದಲ್ಲ. ಹೇಗೆಯೋ ಆಗಲಿ, ನಿಮ್ಮ ವಿವಾಹ ಬೇಗನೆ ಆಗುವದೆಂಬ ಸಂಗತಿ ಪ್ರಕಟಗೊಳಿಸಿರುವರಾರೆಂಬದನ್ನು ತಿಳಿದಿರೇನು?'

'ಇಲ್ಲ; ಅದು ಗೊತ್ತಾಗಿಲ್ಲ. ಮೊನ್ನೆಯ ದಿನ ನಾನು 'ಡೇಲೀ ಟೈಮ್ಸ' ಪತ್ರದ ಕಚೇರಿಗೆ ಸಂಪಾದಕರ ಭೆಟ್ಟಿಗಾಗಿ ಹೋಗಿದ್ದೆ. ಸುದ್ದಿಗಾರನ ಹೆಸರು ಹೇಳುವದು ಶಿಷ್ಟಾಚಾರಕ್ಕೆ ವಿರುದ್ಧವಾದ್ದರಿಂದ ನಾವು ಆತನ ಹೆಸರು ತಿಳಿಸಲಾರೆವೆಂದು ಹೇಳಿದರು. ಹಾಗಾದರೆ ಅನುಮತಿ ಪಡೆಯದೆ ಮನೆತನಸ್ಥರ ಮನೆಯ ಗುಪ್ತ ಸಂಗತಿಗಳನ್ನು ಪ್ರಕಟಿಸುವದು ಶಿಷ್ಟ ಸಮ್ಮತವೇನೆಂದು ನಾನು ಕೇಳಲು, ಆತ ತೆಪ್ಪಗಾದನೇ ವಿನಃ ಸುದ್ದಿಗಾರನ ಹೆಸರು ಹೇಳಲಿಲ್ಲ. ಎಷ್ಟೋ ಜನ ವೃತ್ತಪತ್ರಕಾರರಿಗೆ ದೊಡ್ಡ ದೊಡ್ಡ ಜನರ ಬೆಂಬಲವಿರುವದರಿಂದಲೇ ಅವರು ಹೀಗೆ ಸ್ವೈರವಾಗಿ ವರ್ತಿಸುತ್ತಿರುತ್ತಾರೆಂದು ಕೇಳಿಕೆಯಿದೆ. ಅದು ಏನೇ ಇರಲಿ, ನಾನು ಆ ವೃತ್ತಪತ್ರಕಾರನಿಗೆ ಪೋಲೀಸ ಕೋರ್ಟಿನ ಅಂಜಿಕೆ ದೋರಿ, ನಿನ್ನ ಮುಗ್ಗಲು ಮುರಿಯುವೆನೆಂದು ಹೇಳಿದ ಮೇಲೆ, ಆತ ಆ ಸುದ್ದಿಗಾರನ ಸಾಂಕೇತಿಕ ನಾಮವಾದ 'ಜೋನ್ಸ' ಎಂದು ಹೇಳಿದ.'

ಡ್ಯೂಕನ ಸಂಗತಿಯನ್ನು ಕೇಳಿ ಬ್ಲೇಕನ ಕಣ್ಣುಗಳು ಒಮ್ಮೆಲೆ ಕೆಂಪಡರಿದವು. 'ಜೋನ್ಸ'ನೆಂಬುವವನಾರೆಂಬದನ್ನು ಆತ ತಿಳಿದ. ಆಗ ಆತ:- 'ಅದೇ ನಾಮಧಾರಿಯ ಮತ್ತೆ ಯಾವ ಯಾವ ಸಂಗತಿಗಳು ಆ ಡೇಲೀ ಟೈಮ್ಸಿನಲ್ಲಿ ಪ್ರಕಟವಾಗಿರುವವೆಂಬದನ್ನು ಕೇಳಿದಿರಾ?'

‘ಇಲ್ಲ. ಅದು ಅವಶ್ಯಕವೆಂದೆನಿಸದ್ದರಿಂದ ನಾನದನ್ನು ಕೇಳಲಿಲ್ಲ.’

‘ಇನ್ನು ಆ ಚರ್ಚೆಯಿಂದ ಪ್ರಯೋಜನವಿಲ್ಲ. ಹೇಗಾದರೂ ಮಾಡಿ ನಾನು ಆ ನೀಚನನ್ನು ಪತ್ತೆ ಹಚ್ಚಿಯೇ ತೀರುವೆ. ಎಲ್ಲ ವೃತ್ತ ಪತ್ರಗಳಲ್ಲಿಯ ಆ ತರದ ಸಂವಾದ ದಾಯಕ ಆ ‘ಜೋನ್ಸ’ ನಾವು ಧಾರಿಯೇ ಆಗಿರಬೇಕು.’

‘ನಾನು ಆ ಸಂಪಾದಕ ಮಹಾಶಯನನ್ನು ಇನ್ನೊಮ್ಮೆ ಹೋಗಿ ಕಾಣಲೇನು?’

‘ಬೇಡ-ಬೇಡ. ಆ ಡೇಲೀ ಟೈಮ್ಸಿನ ಪತ್ರಕರ್ತ ನನಗೆ ಚನ್ನಾಗಿ ಪರಿಚಿತ. ನಾನೇ ಆತನ ಸಮಾಚಾರ ತೆಗೆದುಕೊಳ್ಳುತ್ತೇನೆ. ಡ್ಯೂಕರೇ, ಲಾರ್ಡ ಬೋರ್ಲರ ಮನೆಯ ನೌಕರ-ಚಾಕರರು ಎಷ್ಟರ ಮಟ್ಟಿಗೆ ವಿಶ್ವಾಸಾರ್ಹರಾಗಿರುತ್ತಾರೆ? ಅವರಲ್ಲಾರಾದರೂ ಹೊಸಬರಾಗಿರುವರೇ?’

‘ಕಳೆದ ಹತ್ತುವರ್ಷಗಳಲ್ಲಿ ಅವರ ಮನೆಯಲ್ಲಿ ಯಾವ ಹೊಸ ನೌಕರನನ್ನೂ ನಿಯಮಿಸಿಕೊಂಡಿರುವದಿಲ್ಲ. ತಮ್ಮ ಮನೆಯ ಎಲ್ಲ ನೌಕರ-ಚಾಕರರಲ್ಲಿ ಲಾರ್ಡ ಬೋರ್ಲರು ಬಹು ನಂಬಿಗೆಯನ್ನಿಟ್ಟಿರುತ್ತಾರೆ. ಆದ್ದರಿಂದ ಆ ನೌಕರರ ಬೆನ್ನು ಹತ್ತಿ ಪ್ರಯೋಜನವಿಲ್ಲ; ನಿಮ್ಮ ವೇಳೆ ಮಾತ್ರ ವ್ಯರ್ಥವಾದೀತು.’

ಅದಕ್ಕೆ ಬ್ಲೇಕ ಅನ್ನುತ್ತಾನೆ:—‘ಡ್ಯೂಕರೇ, ಅದೂ ಒಂದು ಪತ್ತೆದಾರನ ಕರ್ತವ್ಯವೇ ಆಗಿದೆ. ಆ ಬಗ್ಗೆ ಮನಸರಿ ಮಾಡಿ ಬಿಡುವಂತಿಲ್ಲ. ಆ ಕೆಲಸದ ಬಗ್ಗೆ ನೀವಾವ ತೊಂದರೆಯನ್ನೂ ವಹಿಸಬೇಕಾದುದಿಲ್ಲ. ನಾಳೆಯ ರಾತ್ರಿಯಲ್ಲಿ ಲಾರ್ಡ ಬೋರ್ಲರ ಮನೆಯಲ್ಲಿ ನಾಚು-ರಂಗಿನ(ಬಾಲ್ ಆಟದ) ಕಾರ್ಯಕ್ರಮವಿದೆಯಂತೆ. ಆ ಬಗ್ಗೆ ಲೇಡೀ ಎಲೀಸೆ ನನಗೆ ಹೇಗೂ ನಿಮಂತ್ರಣ ಕಳಿಸಿರುವಳು. ಅದರಿಂದ ನಾನು ಅಲ್ಲಿಗೆ ಹೋಗಲೇಬೇಕಾಗಿದೆ. ನಾನು ಹೇಗೂ ಬಾಲಿನ ಕುಣಿತದಲ್ಲಿ ಭಾಗ ತಕ್ಕೊಳ್ಳಲಾರೆ; ಆದರೆ ನಾನು ಹಲವರನ್ನು ಅಲ್ಲಿ ಕುಣಿಯ ಹಚ್ಚುವೆನು. ಅದು ಏನೇ ಇರಲಿ. ಡ್ಯೂಕರೇ, ನೀವು ನನ್ನನ್ನು ಕಾಣ ಬಂದ ಸಂಗತಿಯನ್ನು ಮತ್ತಾರ ಮುಂದಾದರೂ ತಿಳಿಸುವಿರಾ?’

‘ಲಾರ್ಡ ಬೋರ್ಲರ ಹೊರತು ಮತ್ತಾರಿಗೂ ಈ ವರ್ತಮಾನ ತಿಳಿದಿಲ್ಲ.’

ಇಷ್ಟರಲ್ಲಿ ಬ್ಲೇಕನ ಹೆಂಡತಿ ಅಲ್ಲಿಗೆ ಬಂದು ಒಂದು ಚೀಟಿಯನ್ನು ರಾಬರ್ಟ ಬ್ಲೇಕನ ಕೈಗಿತ್ತು:—ಈ ಚೀಟಿಯನ್ನು ಒಬ್ಬ ಪೋರ ತಂದಿರುತ್ತಾನೆ, ಎಂದಂದಳು.

ಕೂಡಲೆ ಬ್ಲೇಕ ಅದನ್ನೋದಿ ನೋಡಿದ. ಪತ್ರ ಓದುವವರೆಗೆ ಬ್ಲೇಕನ ಹೆಂಡತಿ ಅಲ್ಲಿಯೇ ನಿಂತುಕೊಂಡಳು. ಕೂಡಲೆ ಬ್ಲೇಕ ಆಕೆಯನ್ನುದ್ದೇಶಿಸಿ:—ಆ ಹುಡುಗನನ್ನು ಒಳಗೆ ಕರೆಕೊಂಡು ಬಾ, ಎಂದು ಆಜ್ಞೆಮಾಡಿದ.

ಆಕೆ ಹೊರಟು ಹೋಗುತ್ತಲೆ ಬ್ಲೇಕ ಡ್ಯೂಕನನ್ನು ಕುರಿತು:—'ನೀವು ನನ್ನಲ್ಲಿಗೆ ಬರುವ ಸಂಗತಿಯನ್ನು ಲಾರ್ಡ ಬೋರ್ಲರ ಹೊರತು ಬೇರೆಯುವರಾರ ಮುಂದಾದರೂ ತಿಳಿಸಿದ್ದರ ಸ್ಮರಣವಿದೆಯೋ?' ಎಂದು ಮತ್ತೆ ಕೇಳಲು,

ಡ್ಯೂಕ ದೃಢಸ್ವರದಿಂದ:— ಈ ಸಂಗತಿಯನ್ನು ನಾನು ಯಾರ ಮುಂದೂ ಉಸುರಿಲ್ಲ; ಆದರೆ ತಮ್ಮ ಪ್ರಶ್ನೆಯಿಂದ ತಾವು ನನ್ನ ಮಾತನ್ನು ನಂಬುವದಿಲ್ಲೆಂಬಂತೆ ತೋರುತ್ತದೆ. ಇದು ಆಶ್ಚರ್ಯಕರವಲ್ಲದೆ ಮತ್ತೇನು?

'ನಾನು ಯಾಕೆ ನಂಬುವದಿಲ್ಲೆಂಬದು ಈ ಪತ್ರವಾಚನದಿಂದ ನಿಮಗೆ ತಿಳಿಯದಿರದು.' ಹೀಗೆಂದು, ಬ್ಲೇಕನು ಆ ಚೀಟಿಯನ್ನು ಡ್ಯೂಕನ ಕೈಗಿತ್ತ.

ಆ ಪತ್ರದಲ್ಲಿ,

'ಎಲೈ ಪತ್ತೇದಾರನ ಮರಿಯೇ! ನಿನಗೆ ನಿನ್ನ ಜೀವನದ ಬಗ್ಗೆ ಸ್ವಲ್ಪಾದರೂ ಆಶೆಯಿದ್ದರೆ, ನೀನು ನಿನ್ನ ಪತ್ತೆದಾರಿಕೆಯ ಕಸಬನ್ನು ಒಮ್ಮೆಲೆ ಬಿಟ್ಟುಗೊಡು. ಇಂದು ಬೆಳಿಗ್ಗೆ ಲಾರ್ಡ ಬೋರ್ಲರ ಪ್ರಾಯಃವ್ಹೇಟ ಸೆಕ್ರೆಟರಿಯಾದ ಡ್ಯೂಕ ವಿಲ್ಯಮ್ಸ ನಿನ್ನಲ್ಲಿಗೆ ಯಾವ ವಿಷಯಕ್ಕಾಗಿ ಬಂದು ನಿನ್ನ ಸಹಾಯ ಪ್ರಾರ್ಥಿಸುವನೋ, ಆ ಬಗ್ಗೆ ನೀನು ಸಂಪೂರ್ಣವಾಗಿ ನಿರ್ಲಿಪ್ತನಾಗಿರು; ಅದರಲ್ಲಿ ನೀನು ಸರ್ವಥಾ ಕೈಹಾಕಬೇಡ. ನನ್ನ ನಿಷೇಧಾಜ್ಞೆಯನ್ನು ಅಮಾನ್ಯ ಮಾಡಿದುದಾದರೆ, ನೀನು ಕೂಡಲೆ ಪತ್ತೆದಾರಿಕೆಯ ಸುಳಿವಿಲ್ಲದಂತಹ ಆಗಮ್ಯ ಸ್ಥಾನವನ್ನು ಸೇರಬೇಕಾದೀತು! ರಾಬರ್ಟ ಬ್ಲೇಕ, ಎಚ್ಚರ! ಬಹು ಎಚ್ಚರ!!'

ಡ್ಯೂಕ ಆ ಪತ್ರವನ್ನೋದಿ ಸ್ತಂಭಿತನಾಗಿ ಕುಳಿತ. ಕೆಲ ಕಾಲದ ನಂತರ ಹತಾಶನಾಗಿ:—'ಎಂಥ ಭಯಾನಕವಿದು! ಇದೇನು ಭೂತ-ಪಿಶಾಚಿಗಳ ವ್ಯಾಪಾರವೋ? ಲಾರ್ಡ ಜೋರ್ಲರು ತಮ್ಮ ಗುಪ್ತ ಮಂತ್ರಣಾಲಯದಲ್ಲಿ ಈ ಬಗ್ಗೆ ನನ್ನೊಡನೆ ಒಳ್ಳೇ ಗೌಪ್ಯವಾಗಿ ಹೇಳಿದರು. ಅಲ್ಲಿ ಬೇರೆಯಾರೂ ಇರಲಿಲ್ಲ; ಇಷ್ಟೇ ಅಲ್ಲ, ಎಲ್ಲಿಯಾದರೂ ಅಡಗಿ ನಿಂತು ನಮ್ಮ ಸಂಭಾಷಣ ಕೇಳಿಕೊಂಡಿರುವ ಸಂಭವವೂ ಇಲ್ಲ. ಅಂದ ಮೇಲೆ ಇದಕ್ಕೇನೆನಬೇಕೋ ತಿಳಿಯದಾಗಿದೆ!' ಎಂದಂದ.

ಅಷ್ಟರಲ್ಲಿ ಬ್ಲೇಕನ ಹೆಂಡತಿ ಒಬ್ಬ ಹುಡುಗನೊಡನೆ ಅಲ್ಲಿಗೆ ಬಂದಳು. ಬ್ಲೇಕನು ಆ ಹುಡುಗನನ್ನು ಒಳ್ಳೇ ತೀಕ್ಷ್ಣ ದೃಷ್ಟಿಯಿಂದ ಅವಲೋಕಿಸುತ್ತ:—'ತಮ್ಮಾ, ನೀನು ಎಲ್ಲಿಂದ ಬಂದೆ?' ಒಂದು ಪ್ರಶ್ನೆ ಮಾಡಲು,

'ದೊಡ್ಡ ಪೇಟೆಯಿಂದ. ನಾನು ಪತ್ರವಾಹಕನ ಹೋರೆ ಮಾಡುತ್ತಿರುತ್ತೇನೆ' ಎಂದು ಹೇಳಿದ.

'ನೀನು ಈ ಪತ್ರವನ್ನು ಯಾರಿಂದ ಪಡೆದೆ? ಆವರ ಮೋರೆಯ ಗುರತು ಹೇಳು ನೋಡುವಾ.'

'ಒಡೆಯರೇ, ಪತ್ರ ಕೊಟ್ಟವರು ಗಂಡಸಲ್ಲ; ಒಬ್ಬ ಚಿಕ್ಕವಯುಸ್ಸಿನ ಹುಡುಗಿ. ನನ್ನ ಮೈಬಣ್ಣದಂತೆ ಅವಳ ಕೂದಲುಗಳ ಬಣ್ಣವಾಗಿತ್ತು.'

'ನೀನು ಅವಳನ್ನು ಮತ್ತೆ ಕಂಡರೆ ಗುರತಿಸ ಬಲ್ಲೆಯಾ?'

'ಚನ್ನಾಗಿ ಗುರತಿಸುವೆನು. ನಾನು ಅವಳನ್ನೆಷ್ಟೋ ಸಾರೆ ನೋಡಿದ್ದೇನೆ. ಆವಳು ಆಚೆಯ ಚಿಕ್ಕ ಪೇಟೆಯಲ್ಲಿರುತ್ತಾಳೆಂದು ತಿಳಿಯ ಬರುತ್ತದೆ'

ಇದೇ ಕಾಲಕ್ಕೆ ಸ್ಮಿತ್ಥ ಬ್ಲೇಕನ ಟಿಪು ಎಂಬ ಹೆಸರಿನ ದೊಡ್ಡ ಜಾತಿಯ ನಾಯಿಯೊಡನೆ ಅಲ್ಲಿಗೆ ಬಂದ. ಆ ನಾಯಿಯ ಅರಕ್ತವರ್ಣದ ಕಣ್ಣುಗಳನ್ನೂ ಅತ್ಯಂತ ಕ್ರೂರವಾದ ಮುಖಮುದ್ರೆಯನ್ನೂ ಕಂಡು, ಆ ಆಗಂತುಕ ಬಾಲಕ ಅಳಲಾರಂಭಿಸಿದ; ಆದರೆ ಆ ನಾಯಿ ಆ ಹುಡುಗನ ಹತ್ತರ ಕೂಡ ಹೋಗದೆ, ಡ್ಯೂಕನ ಬಳಿಗೆ ಬಂದಿತು; ಮತ್ತು ತನ್ನ ಉದ್ದನ್ನ ಗೋಣನ್ನು ಡ್ಯೂಕನ ಹೆಗಲಮೇಲಿಟ್ಟಿತು! ಅದನ್ನು ಕಂಡು ಬ್ಲೇಕ:— 'ಒಬ್ಬ ಮನುಷ್ಯನಿಗೆ ಇನ್ನೊಬ್ಬ ಮನುಷ್ಯನ ಸ್ವಭಾವಪರಿಚಯವಾಗುವದು ದುಸ್ತರವಾಗಿರುತ್ತದೆ; ಆದರೆ ನನ್ನ ಟಿಪು ಮಾತ್ರ ಮನುಷ್ಯರ ಸ್ವಭಾವ

ನನ್ನು ಒಮ್ಮೆಲೆ ಕಂಡು ಹಿಡಿಯುತ್ತದೆ' ಹೀಗೆಂದು ಹೇಳಿ, ಸ್ಮಿತ್ಥ ನನ್ನು ಕುರಿತು:—'ಸ್ಮಿತ್ಥ, ಈ ಹುಡುಗನನ್ನು ನನ್ನ ಆಫೀಸಿನಲ್ಲಿ ಬಿಟ್ಟು ಬಾ. ನಿನ್ನೊಡನೆ ಕೆಲ ಮಾತುಗಳನ್ನಾಡುವದಿದೆ' ಎಂದನು.

ಸ್ಮಿತ್ಥ ಆ ಹುಡುಗನೊಡನೆ ಅಲ್ಲಿಂದ ಹೊರಟು ಹೋಗಲು, ಡ್ಯೂಕ ಬ್ಲೇಕನನ್ನುದ್ದೇಶಿಸಿ:—'ಬ್ಲೇಕರೇ, ಈಗ ನನಗೊಂದು ಅನುಮಾನ ಸೂಚಿತ ವಾಗುತ್ತದೆ. ನಾನು ಇಲ್ಲಿಗೆ ಬರುವಾಗ ನನ್ನನ್ನು ನೋಡಿದ ಯಾವ ನೊಬ್ಬ ಇಲ್ಲಿಯ ವರೆಗೂ ನನ್ನನ್ನನುಸರಿಸಿ ಬಂದಿರಬಹುದಾಗಿದೆ.'

'ಇದು ನನಗೆ ಸಂಭವವಾಗಿ ತೋರುವದಿಲ್ಲ. ಅಷ್ಟು ದೂರದ ಮನುಷ್ಯ ಇಲ್ಲಿಯವರೆಗೆ ನಿಮ್ಮನ್ನನುಸರಣ ಮಾಡಲಾರ; ಅಲ್ಲದೆ ನಿಮ್ಮ ಮನೆಯಿಂದ ಹೊರಡುವ ಪೂರ್ವದಲ್ಲಿಯೇ ಈ ಪತ್ರ ಆ ಪತ್ರವಾಹಕ ಪೋರನ ಹಸ್ತಗತವಾಗಿದೆಯೆಂಬ ವಿಷಯಕ್ಕೆ ಸಂದೇಹವಿಲ್ಲ ನನ್ನ ಅನು ಮಾನವೇನಂದರೆ, ಅವರು ಯಾವ ಬಗೆಯಿಂದ ನಿಮ್ಮ ಮಿಕ್ಕ ಗುಪ್ತ ರಹಸ್ಯ ಗಳನ್ನು ತಿಳಿದಿರುವರೋ, ಅದೇ ಬಗೆಯಿಂದ ಇದನ್ನೂ ತಿಳಿದಿರಲಿಕ್ಕೆ ಸಾಕು.'

ಡ್ಯೂಕ ಅನ್ನುತ್ತಾನೆ:—'ನನಗದು ಅಸಂಭವವಾಗ ತೋರುತ್ತದೆ.'

'ಸಂಭವ-ಅಸಂಭವ ಇವುಗಳು ಅಪೇಕ್ಷಿತ ಶಬ್ದಗಳು ಮಾತ್ರ. ಯಾವದು ಒಬ್ಬನಿಗೆ ಸಂಭವವಾಗಿ ತೋರುವದೋ, ಅದು ಇನ್ನೊಬ್ಬನಿಗೆ ಅಸಂಭವವಾಗಿ ತೋರುತ್ತದೆ. ಒಂದು ವರ್ಷದ ಮುಂಚೆ ಯಾವುದು ಅಸಂಭವವಾಗಿತ್ತೋ, ವೈಜ್ಞಾನಿಕರ ತೈಲಬುದ್ಧಿಯ ಮೂಲಕ ಅದು ಇಂದು ಸಂಭವವಾಗಿ ತೋರುತ್ತದೆ. ಪೂರ್ವಕಾಲದ ದಸ್ಯು-ರಾಕ್ಷಸರುಗಳಿಗೆ ಕೂಡ ಯಾವ ಕಾರ್ಯವು ಕೇವಲ ಅಸಂಭವವಾಗಿತ್ತೋ, ಅದನ್ನು ಈಗಿನ ನಮ್ಮ ವೈಜ್ಞಾನಿಕ ದಸ್ಯುಗಳು ತಮ್ಮ ವಿಜ್ಞಾನದ ಸಹಾಯದಿಂದ ಸಂಪೂರ್ಣ ಸಂಭವವನ್ನಾಗಿ ಮಾಡಿಟ್ಟಿರುತ್ತಾರೆ!'

ಇಷ್ಟರಲ್ಲಿ ಸ್ಮಿತ್ಥ ಆ ಪತ್ರವಾಹಕ ಪೋರನನ್ನು ಬ್ಲೇಕನ ಕಚೇರಿ ಯಲ್ಲಿರಿಸಿ ಬ್ಲೇಕನ ಬಳಿಗೆ ಬರಲು, ಬ್ಲೇಕ ಆತನನ್ನುದ್ದೇಶಿಸಿ:—ಸ್ಮಿತ್ಥಾ, ನೀನು ಈಗಲೆ ಆ ದೊಡ್ಡಪೇಟೆಗೆ ಹೋಗು. ಆ ಪೋರ ಯಾವ ಹುಡು ಗಿಯ ಬಳಿಯಿಂದ ಈ ಚೀಟಿ ಪಡೆದಿರುವೆನೆಂದು ಹೇಳುವನೋ, ಅವಳನ್ನು ಹುಡುಕಿ ಪತ್ತೆ ಹಚ್ಚಲಿಕ್ಕೆ ಆತನಿಗೆ ಹೇಳು. ಆ ಹುಡುಗಿಯ ಪತ್ತೆ ಹತ್ತಿ

ದರೆ, ಈ ಚೀಟಿಯನ್ನು ನಿನಗೆ ಕೊಟ್ಟವರಾರೆಂದು ಆಕೆಗೆ ಕೇಳು; ಹಾಗು ಆಕೆಯ ಮುಖಾಂತರವಾಗಿ ಪತ್ರ ಕೊಟ್ಟವನ ಮುಖಭಾವವನ್ನು ತಿಳಿಕೊಂಡು ಬಾ.

ಸ್ಮಿತ್ಥ ಹೊರಟು ಹೋದ ಬಳಿಕ ಬ್ಲೇಕ ಡ್ಯಾಕನಿಗೆ ಹೀಗೆ ಹೇಳುತ್ತಾನೆ:—ನಮ್ಮ ಸ್ಮಿತ್ಥನು ಕೃತಕಾರ್ಯನಾದರೆ, ಅವಳು ಯಾರ ಗುಪ್ತ ಚಾರಳೆಂಬದು ತಿಳಿಯದಿರದು.

'ಆ ಹುಡುಗೆಯ ದುುಖಾಂತರವಾಗಿ ತಿಳಿದ ಮುಖಚರ್ಯೆಯಿಂದ ಆ ವ್ಯಕ್ತಿಯನ್ನು ತಿಳಿಯುವದು ಸುಲಭ ಸಾಧ್ಯ ಕೆಲಸವಲ್ಲ. ಆದರಿಂದ ನಿಮ್ಮ ಕೆಲಸ ಈಡೇರೀತೆಂದು ನನಗನಿಸುವದಿಲ್ಲ.'

ಹೀಗೆ ಎಷ್ಟೋ ವೇಳೆ ಅವರೀರ್ವರಲ್ಲಿ ಮಾತು-ಕತೆಗಳಾದ ಮೇಲೆ ಡ್ಯಾಕ ಬ್ಲೇಕನ ಅಪ್ಪಣೆ ಪಡೆದು ಹೊರಟು ಹೋದ. ಅಂದೇ ಅಪರಾಹ್ಣ ಕಾಲದಲ್ಲಿ ಸ್ಮಿತ್ಥ ದೊಡ್ಡ ಪೇಟೆಯಿಂದ ಹಿಂದಿರುಗಿ ಬಂದು:—'ಆ ಹುಡುಗಿಯ ಪತ್ತೆ ಹತ್ತಿತು; ಆದರೆ ಆಕೆಯನ್ನು ಯಾವ ವ್ಯಕ್ತಿ ಆ ಪತ್ರದೊಡನೆ ಆ ಪತ್ರವಾಹಕರ ಸ್ಟ್ಯಾಂಡಿಗೆ ಕಳಿಸಿದ್ದನೋ ಆತನ ಆಕಾರ-ಮುಖಚರ್ಯೆಗಳನ್ನು ಆ ಬಾಲಿಕೆ ಹೇಗೆ ವರ್ಣಿಸಿದಳೋ, ಆದರ ಮೇಲಿಂದ ಆ ಮನುಷ್ಯನ ಪತ್ತೆಹಚ್ಚುವದು ಕಠಿಣವಾಗಿದೆ. ಎತ್ತರವಾದವನು. ಬಹಳ ದಪ್ಪವೂ ಅಲ್ಲ,-ಬಹಳ ಕೃಶನೂ ಅಲ್ಲದ ಪೈಲವಾನನಂಥ ಮೈಕಟ್ಟಿನವನು, ಕತ್ತರಿಸಿ ಕ್ರಾಪು ಬಿಡಿಸಿದ ಕರಿಯ ಕೂದಲಿನವನು, ಹಂಡೆಯಂಥ ಅಗಲಾದ ಮುಖದವನು: ಬೋಳ ಮೀಸೆಯವನು. ಇಂಥ ಮನುಷ್ಯರನ್ನು ನಾವು ದಿನಾಲು ನೂರುಗಟ್ಟಲೆ ನೋಡುತ್ತಿರುವದಿಲ್ಲವೆ?' ಎಂದಂದ.

ಬ್ಲೇಕ ಸ್ಮಿತ್ಥನ ನುಡಿಯನ್ನು ಕೇಳಿ ಹತಾಶನಾಗಲಿಲ್ಲ; ಆತನ ಉತ್ಸಾಹವೂ ಭಂಗವಾಗಲಿಲ್ಲ. ವೃತ್ತಪತ್ರಗಳ ಕಚೇರಿಗೆ ಹೋದರೆ, ಈ ಮುಖಚರ್ಯೆಯ ಮನುಷ್ಯನ ಪತ್ತೆ ಸಹಜವಾಗಿ ಹತ್ತಬಹುದೆಂದು ತಿಳಿದ.



## ೫ನೇ ತೆರೆ. ಘೋರ ಸಂಕಟ!

ಲಾರ್ಡ ಬೋರ್ಲರ ಪ್ರಾಸಾದದೊಳಗಿನ ಸುಸಜ್ಜಿತವಾದ ಬಾಲ್ ರೂಮಿನ ಪ್ರಖ್ಯಾತಿ ಲಂಡನ ನಿವಾಸಿಗಳಿಗೆ ಚೆನ್ನಾಗಿ ಅವಗತವಿತ್ತು. ಡ್ಯೂಕ ಬ್ಲೇಕನಿಗೆ ಯಾವ ದಿನ ಭೇಟಿಯಾಗಿದ್ದನೋ, ಅದರ ಮರು ದಿನ ರಾತ್ರಿಯಲ್ಲೇ ಬೋರ್ಲರ ಮನೆಯಲ್ಲಿ ಬಾಲಿನ ಕಾರ್ಯಕ್ರಮವಿತ್ತು. ಬಾಲಿನ ಅಂಥ ಕುಣಿತ ಲಂಡನ್ನಿನಲ್ಲಿ ಯಾರಲ್ಲಿಯೂ ಎಂದೂ ಆಗಿರಲಾರದು. ರಾಜನೀತಿ, ಯುದ್ಧವಿದ್ಯೆ, ಶಿಲ್ಪವಿದ್ಯೆ, ವಿಜ್ಞಾನ, ದರ್ಶನ, ಸಾಹಿತ್ಯ ಮೊದಲಾದ ಸಕಲ ವಿದ್ಯೆಗಳಲ್ಲಿಯ ಪ್ರಮುಖರಿಗೂ ಅಂದಿನ ಬೋರ್ಲರ ಮನೆಯ ಆ ಬಾಲಿನ ಕುಣಿತಕ್ಕೆ ನಿಮಂತ್ರಣವಿತ್ತು. ಇದಲ್ಲದೆ ದೇಶ-ವಿದೇಶಗಳಲ್ಲಿಯ ರಾಜದೂತರೂ ಉಚ್ಚಪದವಿಯ ರಾಜ್ಯಾಧಿಕಾರಿಗಳೂ ತಂತಮ್ಮ ಯೋಗ್ಯತೆಗೆ ತಕ್ಕ ವಸ್ತ್ರ-ಭೂಷಣಗಳಿಂದ ಸಜ್ಜಾಗಿ ಆ ಬಾಲಿಗೆ ಬಂದಿದ್ದರು. ರಾಬರ್ಟ ಬ್ಲೇಕ ಪ್ರಖ್ಯಾತ ಪತ್ರಿದಾರನೆಂದು ಆ ಬಾಲಿಗೆ ನಿಮಂತ್ರಿತನಾಗಿದ್ದ. ಬೇರೆ ಜನರಂತೆ ಆತನ ಉಡುಪು-ತೊಡಪು ವಿಶೇಷ ಬಗೆಯವಾಗಿರಲಿಲ್ಲ. ಆತ ಸಭ್ಯ ಗೃಹಸ್ಥರಂತೆ ಸಾದಾ ಪೋಷಾಕಿನಿಂದಲೇ ಅಲ್ಲಿಗೆ ಬಂದಿದ್ದ. ಅಲ್ಲಿಗೆ ಬಂದವರ ದೃಷ್ಟಿಯು ತನ್ನಲ್ಲಿ ನಡಬಾರದೆಂದೇ ಆತನ ಇಚ್ಛೆಯಾಗಿತ್ತು. ಕೆಲಕೆಲವು ಗೃಹಸ್ಥರು ಆತನಿಗೆ ಭೇಟ್ಟಿಯಾಗಿ, ಆತನೊಡನೆ ಹಲಕೆಲವು ಮಾತಾಡಿ ಹೋದರು. ಬ್ಲೇಕ ಸ್ವೇಚ್ಛೆಯಿಂದ ಯಾರೊಡನೆಯೂ ಹೆಚ್ಚಾಗಿ ಮಾತಾಡುವ ಗೊಂದಲಕ್ಕೆ ಹೋಗಲಿಲ್ಲ; ಆದರೆ ಆತ ಲಾರ್ಡ ಬೋರ್ಲರ ಮನೆಯ ಕರ್ಮಚಾರಿಗಳನ್ನು ಮಾತ್ರ ತಾನಾಗಿ ಭೇಟಿಯಾಗಿ, ಅವರಿಗೆ ನಾನಾ ಬಗೆಯ ಪ್ರಶ್ನೆ ಮಾಡುತ್ತಿದ್ದ. ಅಂದಿನ ಆ ಬಾಲಿನ ರಂಗಿನಲ್ಲಿ ಬ್ಲೇಕ ಲೇಡೀ ಎಲೀಸೆಯ ಪ್ರಿಯ ಸಖಿಯಾದ ಭಾಯೋಲೆಯನ್ನೂ ಆವಳ ಪ್ರಿಯಕರನಾದ ಕ್ಯಾಪ್ಟನ್ ರೆನ್‌ಹ್ಯಾಮನನ್ನೂ ಕಂಡು, ಅವರೊಡನೆ ಎಷ್ಟೋ ಹೊತ್ತಿನ ವರೆಗೆ ಮಾತಾಡಿದ. ಆವರೊಡನೆ ಕೆಲ ಮಾತುಗಳನ್ನಾಡುವಷ್ಟರಲ್ಲಿಯೇ ಅವರೀರ್ವರ ಮನಸ್ಸು ಅದಾವ ಕಾರಣದಿಂದಲೋ ಬಹು ಚಂಚಲವಾಗಿತ್ತೆಂಬದು ಬ್ಲೇಕನಿಗೆ ತಿಳಿಯಿತು. ಕ್ಯಾಪ್ಟನ್ ರೆನ್‌ಹ್ಯಾಮ್ ಎಡ್ವರ್ಡ ಭಾಯೋಲೆಯ ಪ್ರಣಯಿಯೆಂಬದು ಆ ಬಾಲಿಗೆ ಬಂದವರಲ್ಲಿಯ ಬಹು ಜನರಿಗೆ

ಗೊತ್ತಿತ್ತು. ರೆನ್‌ಹ್ಯಾಮು ಧನಿಕನಾಗಿದ್ದರೆ ಭಾಯೋಲೆ ಇಷ್ಟೊತ್ತಿಗೆ ಆತ ನನ್ನು ಲಗ್ನವಾಗಿಯೇ ಬಿಡುತ್ತಿದ್ದಳು. ಆದರೆ ರೆನ್‌ಹ್ಯಾಮುನಲ್ಲಿ ಅಷ್ಟೊಂದು ಜಿಗುಟಿರದ್ದರಿಂದಲೇ ಅವರೀರ್ವರ ಲಗ್ನವಿನ್ನೂ ಆಗಿರಲಿಲ್ಲ. ಅವರೀರ್ವರ ಮನೋಚಾಂಚಲ್ಯದ ಸುಳಿವು ಹಿಡಿದ ಬ್ಲೇಕ ಇವರಲ್ಲಿ ಯಾವ ಬಗೆಯಿಂದಲೋ ಮನಸ್ತಾಪವುಂಟಾಗಿರಬೇಕೆಂದು ತರ್ಕಿಸಿದ. ರಾಬರ್ಟ ಬ್ಲೇಕನಂತಹ ಮನಸ್ತತ್ವ ಕೋವಿದನ ಕಣ್ಣಿಗೆ ವಣ್ಣೆರೆಚುವುದು ಸಾಮಾನ್ಯ ಕೆಲಸವಾಗಿರಲಿಲ್ಲ. ಬ್ಲೇಕ ಅವರೀರ್ವರೊಡನೆ ನಾಲ್ಕಾರು ಮಾತನಾಡಲು, ಪ್ರೇಮ ಕಲಹವು ಅವರ ಚಿತ್ತಚಾಂಚಲ್ಯಕ್ಕೆ ಮುಖ್ಯ ಕಾರಣವಲ್ಲೆಂಬದು ಅವನಿಗೆ ತಟ್ಟನೆ ತಿಳಿಯಿತು.

ಬಳಿಕ ಬ್ಲೇಕ ಅವರೀರ್ವರ ಮೇಲೂ ತನ್ನ ನಜರಿಟ್ಟ. ಅಷ್ಟರಲ್ಲಿ ಬಹು ದೀರ್ಘ ಕಾಯದ ಪೈಲವಾನನಂಥ ಬಲಿಷ್ಠ ಪುರುಷನೊಬ್ಬ ಅವರ ಬಳಿಗೆ ಬಂದ. ಕೂಡಲೆ ಭಾಯೋಲೆಯ ಮುಖವು ವಿವರ್ಣವಾಯಿತು! ಆ ಆಗಂತುಕ ಭಾಯೋಲೆಯನ್ನು ಕಂಡು ಮುಗುಳ್ನಗೆಯಿಂದ ತನ್ನ ಬಲಗೈಯನ್ನು ಆವಳೆದುರಿಗೆ ಚಾಚಿದ. ಬಳಿಕ ಆತ ಕ್ಯಾಪ್ಟನ್ ರೆನ್‌ಹ್ಯಾಮುನನ್ನು ಅಭಿವಂದಿಸಿ, ಭಾಯೋಲೆಯೊಡನೆ ಮಾತಾಡುತ್ತಾಡುತ್ತ ಸಮೀಪದಲ್ಲಿಯ ಒಂದು ವಿಶ್ರಾಮ ವಾಟಿಕೆಯಲ್ಲಿ ಪ್ರವೇಶಿಸಿದ. ಕ್ಯಾಪ್ಟನ್ ರೆನ್‌ಹ್ಯಾಮು ಬೇಖೂಬನಂತೆ ಕ್ಷಣಕಾಲದವರೆಗೆ ಅಲ್ಲಿಯೇ ನಿಂತು ಅವರ ಕಡೆಗೆ ನೋಡಿ, ಬಳಿಕ ವಿಷಣ್ಣವದನದಿಂದ ಬೇರೆ ಕಡೆಗೆ ಹೊರಟು ಹೋದ!

ಅಷ್ಟರಲ್ಲಿ ಡ್ಯೂಕ ವಿಲ್ಯಮ್ಸ್ ಅಡ್ಡಾಡುತ್ತಡ್ಡಾಡುತ್ತ ಬ್ಲೇಕನ ಬಳಿಗೆ ಬಂದ. ಆಗ ಬ್ಲೇಕ ಮೆಲ್ಲನೆ ಡ್ಯೂಕನಿಗೆ ಕೇಳುತ್ತಾನೆ:--- ಭಾಯೋಲೆಯನ್ನು ಕರೆಕೊಂಡು ಆ ವಿಶ್ರಾಮವಾಟಿಕೆಯನ್ನು ಪ್ರವೇಶಿಸಿದ ಆ ಪೈಲವಾನಸದೃಶನಾರು?

ಡ್ಯೂಕ:—ಆತ ಪ್ರಖ್ಯಾತ ನವಕೋಟಿ ನಾರಾಯಣನಾದ ಹ್ಯಾಮುನ್ ಆರ್ಟನ್ನ. ಆತ ಲಾರ್ಡ ಬೋರ್ಲರಿಗೆ ಪರಮಾಪ್ತ.

‘ಅಲ್ಲವೇ! ಅವನ ಹೆಸರು ಆರ್ಟನ್ನನೆಂದಲ್ಲವೆ? ಆತನ ಹೆಸರು ನನಗೆ ಚೆನ್ನಾಗಿ ಪರಿಚಿತವಾಗಿದೆ.’

ಡ್ಯೂಕ ಅಲ್ಲಿಂದ ಹೊರಟು ಹೋಗುತ್ತಲೆ ಬ್ಲೇಕ ತನ್ನ ಮನಸ್ಸಿನಲ್ಲಿಯೇ:— ಎಲ್ಲಿ ನೋಡಿದಲ್ಲಿ ಐಶ್ವರ್ಯವಂತರು, ರೂಪಯೌವನ

ಯುತತು; ಮತ್ತು ಕೇವಲ ದರಿದ್ರರು ಈ ಮೂರು ಬಗೆಯ ಜನರೇ-ಜನರು! ಎಂದಂದುಕೊಂಡ.

ಆ ವಿಶ್ರಾಮವಾಟಿಕೆ ನೀಲೀ ಬಣ್ಣದ ಗಿಡ-ಬಳ್ಳಿಗಳಿಂದಲೂ ಕೃತ್ರಿಮ ಕಾರಂಜಿಗಳಿಂದಲೂ ಸುಸಜ್ಜಿತವಾಗಿತ್ತು. ಅಲ್ಲಿ ಅಗಲೆ ಅರಳುತ್ತಿರುವ ಸೌಗಂಧಿಕ ಹೂಗಳ ಸೌರಭವು ನಾಲ್ಕೂಕಡೆಗೆ ಪಸರಿಸಿತ್ತು. ವಿದ್ಯುತ್ಪ್ರಕಾಶ ಪೂರ್ಣಚಂದ್ರಮನ ಸ್ನಿಗ್ಧ ಕಿರಣಗಳನ್ನು ಕೂಡ ಮರೆಸುವಂತಿತ್ತು. ಅಂಥ ಆ ರಮಣೀಯವಾದ ಕುಂಜವನದಲ್ಲಿ ಒತ್ತಟ್ಟಿಗಿದ್ದ ಬೆಂಚಿನ ಮೇಲೆ ಛಾಯೋಲೆಯೂ ಆರ್ಟಿನ್ನನೂ ಕುಳಿತರು.

ಅವರು ಕುಳಿತ ಸ್ಥಳ ತೀರ ಏಕಾಂತದ್ದಾಗಿತ್ತು. ಸಮೀಪದಲ್ಲಾರೂ ಸುಳಿದಾಡುತ್ತಿರಲಿಲ್ಲ. ಆ ಆಸನದ ಮೇಲೆ ಕುಳಿತೊಡನೆಯೇ ಆರ್ಟಿನ್ನನ ಸಭ್ಯತೆಯೂ ಸರಳತೆಯೂ ಒಮ್ಮೆಲೆ ಮಾಯವಾದವು! ಇದುವರೆಗೆ ಪ್ರಫುಲ್ಲವಾಗಿದ್ದ ಆತನ ಮೊಗದಾವರೆ ಒಮ್ಮೆಲೆ ಕಪ್ಪಿಟ್ಟಿತು; ಮತ್ತು ಆತನ ಕೋಮಲ ದೃಷ್ಟಿ ಅರೆ ಕ್ಷಣದಲ್ಲಿಯೇ ಕಾಠಿಣ್ಯವನ್ನು ಧರಿಸಿತು .ಆರ್ಟಿನ್ನ ಹಿಂಸ್ರಪಶುಗಳಂತೆ ನಿರ್ಮಮ ದೃಷ್ಟಿಯಿಂದ ಛಾಯೋಲೆಯ ಮುಖದ ಕಡೆಗೆ ನೋಡಿ,ನೀರಸ ದನಿಯಿಂದ:—ತರುಣೀ, ಇದುವರೆಗೆ ನೀನು ಯಾವ ಯಾವ ವೃತ್ತಾಂತ ಸಂಗ್ರಹಿಸಿರುವೆಯೆಂಬದನ್ನು ಹೇಳು, ಎಂದಂದ.

ಛಾಯೋಲೆ ಆತನ ಬಿರಿ ನೋಟವನ್ನು ಸಹಿಸಲಾರದೆ, ಅವನತ ಮುಖದಿಂದಲೇ 'ತಾವನ್ನುವದೇ ತಿಳಿಯಲಿಲ್ಲ'

'ತಿಳಿಯಲಶಕ್ಯವಾಯಿತೇ? ನಾನು ನಿನ್ನಂಥ ಕೈಲಾಗದವಳನ್ನು ಮರೆಯುವವನಲ್ಲ. ನಿನ್ನ ಮಾನರಕ್ಷಣೆಗಾಗಿ ನಿಃಸ್ವಾರ್ಥಬುದ್ಧಿಯಿಂದ ನಾನು ನಿನಗೆ ಅಷ್ಟೊಂದು ಹಣ ಕೊಟ್ಟಿರುವದಿಲ್ಲೆಂಬ ಸಂಗತಿಯಾದರೂ ನಿನ್ನ ಸ್ಮರಣದಲ್ಲಿದೆಯೇ?' ಹೀಗೆಂದು ನುಡಿಯುವಾಗ ಆರ್ಟಿನ್ನ ಛಾಯೋಲೆಯ ಮುಂಗೈಯನ್ನು ಒತ್ತಿಹಿಡಿದ. ಆ ಒತ್ತುವಿಕೆಯಿಂದ ಛಾಯೋಲೆಯ ಮುಖ ಕಕ್ಕಾವಿಕ್ಕಿಯಾಗಿಬಿಟ್ಟಿತು!

ಛಾಯೋಲೆ ಕಸುವಿನಿಂದ ತನ್ನ ಕೈಬಿಡಿಸಿಕೊಂಡು:—'ನೀಚ ಮನುಷ್ಯಾ, ನೀನು ಪಶುವಿನಂತೆ ಆಚರಿಸುತ್ತಿರುವೆ; ನಿನ್ನೀ ಕೃತಿಯು ಪಶುವಿಗಿಂತಲೂ ಹೀನವಾದದ್ದು!'

'ಆಗಬಹುದು; ನಿನ್ನಲ್ಲಿ ಪಶುವಿನಂತೆ ಆಚರಿಸಿದರೂ, ನೀನು ಲಜ್ಜೆಯಿಂದ ಸಮಾಜದಲ್ಲಿ ಮುಖವೆತ್ತಲಾರೆಯೆಂಬದನ್ನು ತಿಳಿದೇ ನಾನು ಹೀಗೆ ಆಚರಿಸುತ್ತಿದ್ದೇನೆ. ನೀನು ಹೆಚ್ಚು ಮಾತಾಡಿದರೆ ನಿನ್ನಹುಳುಕನ್ನೆಲ್ಲ ಹೊರಗೆಡವಿ ಬಿಟ್ಟೇನು. ನಿನ್ನ ದೈವ ಚೆನ್ನಾಗಿದೆಯೆಂದೇ ನನಗಾ ಬುದ್ಧಿಯಿನ್ನೂ ಉಂಟಾಗಿಲ್ಲ. ಇಲ್ಲಿ ನಾನು ಅಪಮಾನಗೊಳಿಸಿದರೆ, ನಿನ್ನನ್ನುರಕ್ಷಣೆ ಮಾಡುವವರಾದೂ ಇಲ್ಲಿರುವದಿಲ್ಲ.'

ಆಗ ಛಾಯೋಲಿ ಕ್ರೋಧದಿಂದಲೂ, ಅಪಮಾನದಿಂದಲೂ ನಡುಗಹತ್ತಿದಳು. ಕಡೆಗೆ ಆವಳು ತನ್ನ ದುರವಸ್ಥೆಯನ್ನು ನೆನೆದುಕೊಂಡು:-'ನೀನು ಏನು ಮಾಡಬೇಕೆಂದಿರುತ್ತೀ? ಹೇಳು.'

'ಲೇಡೀ ಎಲೀಸೆ ಕಟ್ಟ ಕಡೆಗೆ ಏನೆಂದು ಹೇಳಿದಳು?'

'ಡ್ಯೂಕನ ಕೂಡ ವಿವಾಹವಾದ ಮೇಲೆ ಆತನೊಡನೆ ಪ್ರೇಮಾಲಾಪಗಳಲ್ಲಿ ಕಾಲ ಕಳೆಯುವವಳೇ ಹೊರತು ಬೇರೆ ಯಾವ ವಿಷಯುಕ್ಕೂ ಅವಳು ಮನಸ್ಸು ಮಾಡುವದಿಲ್ಲ.'

'ಯುವಕ-ಯುವತಿಯರ ಅಸಾರವಾದ ಪ್ರೇಮಕಥೆ ಕೇಳುತ್ತ ನನ್ನ ಅಮೂಲ್ಯ ಸಮಯ ವ್ಯರ್ಥಗೊಳಿಸುವ ಆಗ್ರಹ ನನ್ನಲ್ಲಿಲ್ಲ. ಈಗ ನಾನು ಹೇಳುತ್ತೇನೆನೆಂಬದನ್ನು ಮನಸ್ಸಗೊಟ್ಟು ಕೇಳು. ಬರುವ ವಾರದಲ್ಲಿ ಫ್ರಾನ್ಸ ದೇಶದ ಮುಖ್ಯ ಮಂತ್ರಿ ಲಂಡನ್ನ ಪಟ್ಟಣಕ್ಕೆ ಬರುವನು. ಅವನಿಗೆ ವಾಸಕ್ಕೆಲ್ಲಿ ಏರ್ಪಡಿಸಿರುವರು, ಆತ ಇಲ್ಲಿ ಎಷ್ಟು ದಿನಗಳವರೆಗಿರುವ? ಮುಂತಾದ ಸಂಗತಿಗಳನ್ನು ತಿಳಿದು ನನಗೆ ತಿಳಿಸು.'

ಲಜ್ಜೆ, ಕ್ರೋಧ, ಅಪಮಾನಗಳಿಂದ ಆವರಿಸಲ್ಪಟ್ಟ ಛಾಯೋಲಿ ಅವನತ ಮುಖದಿಂದಲೇ ಕುಳಿತುಬಿಟ್ಟಳು. ಹೂ-ಇಲ್ಲ ಮುಂತಾದುದಾವುದನ್ನೂ ಒಡನುಡಿಯಲಿಲ್ಲ.

ಆರ್ಟಿನ್ನ ಕ್ಷಣಕಾಲದ ವರೆಗೆ ಆಕೆಯ ಮುಖವನ್ನು ದಿಟ್ಟಿಸಿ ನೋಡಿ, ನಂತರ:-ಕ್ಯಾಪ್ಟನ್ ರೆನ್‌ಹ್ಯಾಮ ಯಾವ ತಾರೀಖಿನ ದಿವಸ ಇಂಗ್ಲಂಡದಿಂದ ಪೂರ್ವದಿಕ್ಕಿನ ಸಂಚಾರಕ್ಕೆ ಹೊರಡುವ?

'ಬರುವ ವಾರದಲ್ಲೇ ಆತ ಹೊರಡುವವನಿದ್ದಾನೆ.'

ರಾಜರ ವಾರ್ತಾವಾಹಕರ ಪ್ರಯಾಣದ ವಾರ್ತೆ ಅತ್ಯಂತ ಗೌಪ್ಯವಾದದ್ದೆಂಬದು ಛಾಯೋಲೆಗೆ ಗೊತ್ತಿತ್ತು. ಯಾರ ಮುಂದೂ ತಿಳಿಸಲಿಕ್ಕೆ

ಲ್ಲೆಂಬ ಭರವಸೆಯಿಂದಲೇ ರೆನ್‌ಹ್ಯಾಮು ಆವಳಿಗೆ ಆದನ್ನು ಹೇಳಿದ್ದ. ತನ್ನ ಬಾಯಿಂದ ಆ ಶಬ್ದಗಳು ಹೊರಬಿದ್ದು ಹೋದ ಕೂಡಲೆ, ಭಾಯೋಲೆಗೆ ಪರಮ ದುಃಖವೆನಿಸಿತು. ಆದರಿಂದ ಆಕೆ ಆಗ ಆರ್ಟೆನ್ನನಿಗೆ ಹೇಳುತ್ತಾಳೆ:- ನೀನು ಇದನ್ನೇಕೆ ಕೇಳಿದೆ? ನೀನು ನನ್ನ ಮುಖಾಂತರ ಕ್ಯಾಪ್ಟನ್ ರೆನ್‌ಹ್ಯಾಮ್ ಮತ್ತು ಲೇಡಿ ಎಲೀಸೆಯರ ಮೇಲೆ ಪತ್ತೆದಾರಿ ನಡೆಯಿಸಬೇಕೆಂದಿರುತ್ತೀಯಾ?

ಆರ್ಟೆನ್ನ ದೃಢ ಸ್ವರದಿಂದ: ಖಂಡಿತವಾಗಿಯೂ ನಾನು ಹಾಗೆಯೇ ಮಾಡಬೇಕೆಂದಿರುತ್ತೇನೆ. ನಾನು ಯಾವ ಕಾರಣದಿಂದ ನಿನಗೆ ಅಷ್ಟೊಂದು ಹಣ ಕೊಟ್ಟಿರುತ್ತೇನೆಂಬದನ್ನು ಮರೆತೆಯಾ? ನಿನಗೆ ಪತ್ತೆದಾರಿಕೆಯ ಫೀ ಯೆಂದೇ ಆದನ್ನು ಕೊಟ್ಟಿರುವೆ. ಫೀ ಪಡೆದ ಮೇಲೆ ಯೋಗ್ಯ ಕೆಲಸ ಮಾಡಬೇಡವೇ? ಕ್ಯಾಪ್ಟನ್ ರೆನ್‌ಹ್ಯಾಮು ಯಾವ ತಾರೀಖಿನ ದಿವಸ, ಯಾವ ರೈಲ ಮಾರ್ಗದಿಂದ, ಎಷ್ಟರ ಗಾಡಿಗೆ ಹೊರಡುತ್ತಾನೆಂಬದು ನನಗೆ ತಿಳಿಯಲೇ ಬೇಕಾಗಿದೆ.

ಒಬ್ಬ ವಿಕಟಾಕಾರದ ರಾಕ್ಷಸ ತನ್ನನ್ನು ನುಂಗುವ ಸಲುವಾಗಿ ಕರಾಳ ವದನದಿಂದ ತನ್ನೆದುರಿಗೆ ಕುಳಿತಿರುವನೆಂದೇ ಭಾಯೋಲೆಗೆನಿಸಿತು. ಆದರಿಂದ ಆಕೆ ಭಯದಿಂದ ನಡಗುತ್ತ, ಕಂಪಿತ ದನಿಯಿಂದ:-ನಾನು ಆದನ್ನೆಲ್ಲ ತಿಳಿಸಲಾರೆ.

'ಆದೇಕೆ ತಿಳಿಸಲಾರೆ?'

'ಆ ಗುಪ್ತಸಂಗತಿಗಳನ್ನೆಲ್ಲ ನಿನಗೆ ತಿಳಿಸಿದರೆ ಅದರಿಂದ ಆತನಿಗೆ ಅನಿಷ್ಟವಾಗದಿರದು. ನಾನು ಆತನನ್ನು ಪ್ರೀತಿಸುತ್ತೇನೆ. ಏತರಿಂದ ನಮ್ಮಗಳ ಪ್ರಣಯಕ್ಕೆ ಬಾಧೆ ಬರಲಿರುವದೋ, ಆ ಬಗೆಯ ಕೆಲಸ ನಾನೆಂದೂ ಮಾಡಲಾರೆ'

ಆ ಸಂಗತಿ ಕೇಳಿ ಆ ನರಾಧಮ ಆರ್ಟೆನ್ನನ ನೇತ್ರಗಳು ಆನಂದಭರದಿಂದ ಸ್ಫುರಣ ಹೊಂದಿದವು; ಆದರೆ ವಿಪದಗ್ರಸ್ತಳೂ ವಿಚಲಿತ ಮನಸ್ಕಳೂ ಆಗಿದ್ದ ಭಾಯೋಲೆ ಮಾತ್ರ ಅತ್ತಕಡೆಗೆ ಲಕ್ಷ್ಯಗೊಡಲಿಲ್ಲ. ಬಳಿಕ ಆರ್ಟೆನ್ನ: ಆ ಬಡ ರೇನ್‌ಹ್ಯಾಮು ನಿನ್ನ ಪ್ರಣಯ ಪಾಶದಲ್ಲಿ ಸಿಲುಕಿರುವನೇ? ನಿಮ್ಮಿಬ್ಬರ ವಿವಾಹ ನಿಶ್ಚಿತವಾಗಿದೆಯೇ?'

ಭಾಯೋಲೆ ಅಸಮ್ಮತಿಸೂಚಕವಾದ ಗೋಣು ಅಲ್ಲಾಡಿಸಿ:-ಇಲ್ಲ,ಆತನ ಆರ್ಥಿಕ ಸ್ಥಿತಿ ಚೆನ್ನಾಗಿಲ್ಲ; ನನ್ನ ಸ್ಥಿತಿಯೂ ಅಷ್ಟೊಂದು ಸಮಾಧಾನಕರವಾ

ಇಲ್ಲ. ನನ್ನ ಮಾವ ದಯಾರ್ದ್ರ ದೃಷ್ಟಿಯಿಂದ ನನ್ನ ಸಂರಕ್ಷಣೆಯ ಭಾರ ವಹಿಸಿರುವ. ಆತನ ಆಶ್ರಯವಿಲ್ಲದಿದ್ದರೆ ನನ್ನ ಗತಿಯೇನಾಗುತ್ತಿತ್ತೋ ಆದಾರು ಹೇಳಬೇಕು? ಲಾರ್ಡ ಬೋರ್ಲರ ಭಾಗಿನೇಯಳೆಂದೇ ನಾನೀ ಉಚ್ಚ ಸಮಾಜದಲ್ಲಿ ಬೆರೆತಿರುವೆ.

ಅದನ್ನು ಕೇಳಿ ಆ ಮಾರ್ಕ್ವಿಸ ಕಳ್ಳ:-ಯಾವ ದರಿದ್ರನೂ ನಿನ್ನ ಪ್ರೇಮಕ್ಕೆ ಯೋಗ್ಯನಲ್ಲ: ಬಡವನ ಗುಡಿಸಿಲಲ್ಲಿ ವಾಸಿಸಲಿಕ್ಕೆಂದು ದೇವರು ನಿನ್ನನ್ನು ಹುಟ್ಟಿಸಿರುವದಿಲ್ಲ.

'ಕ್ಯಾಪ್ಟನ್ ರೆನ್‌ಹ್ಯಾಮು ಚಿರಕಾಲವೂ ದರಿದ್ರನಾಗಿರಲಾರ. ಆತನ ದೈವ ತೆರೆದ ಕೂಡಲೆ ಆತ ನನ್ನನ್ನು ಲಗ್ನವಾಗುವ; ತತ್ಪೂರ್ವದಲ್ಲಿ ಮಾತ್ರ ಲಗ್ನವಾಗಲಾರ'

ಆರ್ಟನ್ನ ಆದನ್ನೆಲ್ಲ ಮೊದಲೇ ತಿಳಿದಿದ್ದವನಂತೆ ಗೋಣು ಅಲ್ಲಾಡಿಸಿ: ಸರಿ-ಸರಿ. ನನಗೆ ಅದೆಲ್ಲ ತಿಳಿಯಿತು. ಅಂತೆಯೇ ರೆನ್‌ಹ್ಯಾಮು ಇಂದು ಇಷ್ಟು ಕಂಗೆಟ್ಟವನಂತೆ ಕಂಡ. ಲೋಕದಲ್ಲಿ ದುರಾಕಾಂಕ್ಷಿಗಳಾದ ಬಡವರ ಕಷ್ಟಗಳಿಗೆ ಮೇರೆಯೇ ಇಲ್ಲ.

'ನಾನು ಯಾರನ್ನು ಪ್ರೀತಿಸುವೆನೋ, ಯಾವನು ಒಂದಾನೊಂದು ದಿನ ನನ್ನ ಪತಿಯಾಗುವನೋ, ಆತನಲ್ಲಿ ಪತ್ತೆದಾರಿಕೆ ಮಾಡುವದು ನನಗೆ ಹೇಗೆ ಅಸಂಭವವಾಗಿದೆಯೆಂಬದನ್ನು ತೋರಿಸುವದಕ್ಕಾಗಿಯೇ ನಾನು ನಿನಗೆ ನನ್ನೀ ಗೌಪ್ಯ ಸಂಗತಿಗಳನ್ನೆಲ್ಲ ನಿವೇದಿಸಿದೆ. ಕ್ಯಾಪ್ಟನ್ ರೆನ್‌ಹ್ಯಾಮು ದರಿದ್ರನಿರಬಹುದು; ಆದರೆ ಅದಕ್ಕಾಗಿ ಆತ ದುಃಖಿತನಾಗಿರಲಾರ. ಆತನ ಇಂದಿನ ಮನೋಚಾಂಚಲ್ಯಕ್ಕೆ ಬೇರೆಯೇ ಕಾರಣವಿರುತ್ತದೆ. ಆತ ತನ್ನೊಬ್ಬ ಮಿತ್ರನ ಸಾಲ ತೀರಿಸಲಿಕ್ಕೆ ಬದ್ಧಕಂಕಣನಾಗಿರುವ. ನಾಳೆ ಬೆಳಿಗ್ಗೆ ಹತ್ತು ಗಂಟೆಯೊಳಗಾಗಿ ಆ ಸಾಲ ತೀರಲೇಬೇಕಾಗಿದೆ. ಆ ಸಾಲ ಅಷ್ಟೊಂದು ಭಾರಿಯಾದದ್ದೂ ಅಲ್ಲ; ಕೇವಲ ಇನ್ನೂರೇ ಪೌಂಡು; ಆದರೆ ಸದ್ಯಕ್ಕೆ ಅಷ್ಟೂ ಅವನಿಗೆ ದೊರೆಯದಾಗಿವೆ.'

ಆರ್ಟನ್ನ ಸೊಟ್ಟ ಸೊಟ್ಟ ಮೋರೆ ಮಾಡಿ ಅಣಕಿಸುವಂತೆ ನಗುತ್ತ:-ತಾನು ಕೇವಲ ದರಿದ್ರನಾಗಿರಲು, ಮಂದಿಯ ಋಣ ತೀರಿಸುವ ಹವ್ಯಾಸಕ್ಕೇಕೆ ಆತ ಹೋಗಬೇಕು? ತಾನೇ ಮಹಾ ಸಾಲಗಾರನಾಗಿರಲು, ಮಂದಿಯ ಸಾಲ ತೀರಿಸುವ ಹವ್ಯಾಸಕ್ಕೇಕೆ ಹೋಗಬೇಕು? ಇದು ಬಹು ನಾಚಿಕೆಗೇಡ

ಲ್ಲವೆ? ಆತ ನಿನ್ನ ಪ್ರೇಮ-ಪಾತ್ರ. ನೀನು ಒಂದಿಷ್ಟು ಬಿಗಿ ಹಿಡಿದರೆ, ಆತನ ಸಕಲ ಗೌಪ್ಯಗಳನ್ನೂ ತಿಳಿಯಬಲ್ಲೆ. ನಾನು ಏನನ್ನು ತಿಳಿಯಬೇಕೆಂದಿರುವೆನೋ, ನೀನು ಅದನ್ನು ತಿಳಿದು ಬೇಗನೆ ನನಗೆ ಹೇಳು.

ಛಾಯೋಲೆ ಅಲ್ಲಿಂದ ಎದ್ದು ನಿಂತು ದೃಢಸ್ವರದಿಂದ:-ಇನ್ನು ನನ್ನ ಬಾಯಿಂದ ಆತನ ಸಂಬಂಧದ ಒಂದು ಅಕ್ಕರವೂ ಹೊರ ಬೀಳಲಿಕ್ಕಿಲ್ಲ.

'ಹಾಗೆಯೇ ಆಗಲಿ; ನಿನ್ನಿಚ್ಛೆ! ಆದರೂ ನನ್ನದೊಂದು ಮಾತು ಕೇಳಿಕೋ. ಈ ಪತ್ರವನ್ನು ಇದರ ವಿಳಾಸದಾರರಿಗಾದರೂ ಮುಟ್ಟಿಸಬಲ್ಲೆಯಾ?' ಹೀಗೆಂದು ಹೇಳಿ, ಆರ್ಟನ್ನ ಒಂದು ಬಾಯಿ ಮುಚ್ಚಿದ ಲಕ್ಕೋಟೆಯನ್ನು ಛಾಯೋಲೆಯ ಎದುರಿಗೆ ಹಿಡಿದ. ಆ ಪತ್ರದ ಮೇಲಿನ ವಿಳಾಸದಾರರ ಹೆಸರು ಹಾಗು ವಿಳಾಸ ಓದಿ ಛಾಯೋಲೆಯ ಎದೆ ಧಸ್ಸೆಂದಿತು. ಆ ಲಕ್ಕೋಟೆಯ ಮೇಲೆ—

'ದಿ ರಾಯಿಟ ಆನರೇಬಲ್, ದಿ ಅರ್ಲ ಆಫ್ ಕಾರ್ಸಷ್ಟೇಯ
(ಲಾರ್ಡ ಬೋರ್ಲ) ಇವರಿಗೆ—
ಕಾರ್ಸಷ್ಟೇಯ ಚೌಕ, ಡಾರ್ವಿನ್‌ನಗರ'

ಹೀಗೆಂದು ಸ್ಪಷ್ಟಾಕ್ಷರಗಳಿಂದ ಬರೆದಿದ್ದಿತು.

ಬಳಿಕ ಆರ್ಟನ್ನ ಆ ಲಕ್ಕೋಟೆಯನ್ನು ಬಿಚ್ಚಿ, ಅದರೊಳಗಿನ ಒಂದೊಂದೇ ಕಾಗದ ತೆರೆತೆರೆದು ಛಾಯೋಲೆಗೆ ತೋರಿಸತೊಡಗಿದ. ಅವುಗಳಲ್ಲಿ ಎಷ್ಟೋ ಪ್ರಾಮಿಸರಿ ನೋಟುಗಳೂ, ಅವುಗಳ ಬಗ್ಗೆ ಬೊಬ್ಬಾಟ ಮಾಡಬಾರದೆಂದು ಬರೆದ ಎಷ್ಟೋ ವಿನಂತಿ ಪತ್ರಗಳೂ ಇದ್ದವು. ಅವೆಲ್ಲವುಗಳನ್ನು ತನ್ನ ಮಾವನಿಗೆ ತಲುಪಿಸಬೇಕೆಂದು ಆರ್ಟನ್ನ ಅವಳಿಗೆ ಹೇಳುತ್ತಿದ್ದ.

ಆಗ ಛಾಯೋಲೆ ಭಯಪೂರ್ಣ ವಿಸ್ಮಯದಿಂದ ಅವ್ಯಕ್ತಳಾಗಿ ವ್ಯಂಗ್ಯ ದನಿಯಿಂದ:-ಅಹಹಾ, ಪಶುವೇ! ಅಹಹಾ, ಮನುಷ್ಯ ಮುಕುಟ ಧರಿಸಿದ ಸೈತಾನನೇ! ನಿನ್ನಲ್ಲಿ ಬಿಂದು ಮಾತ್ರವೂ ದಯೆಯಿಲ್ಲವೆ! ಛೀ, ಥೂ! ನಿನ್ನ ಬಾಳಿಗೆ!!!

'ನನ್ನಲ್ಲಿ ಇನ್ನೂ ಸ್ವಲ್ಪ ದಯೆಯಿರುತ್ತದೆಂದೇ ನಾನು ನಿನ್ನ ಈ ಎಲ್ಲ ಕಾಗದ-ಪತ್ರಗಳನ್ನು ಈ ಮೊದಲೇ ನಿನ್ನ ಮಾವನಿಗೆ ತೋರಿಸಿಲ್ಲ. ತೋರಿಸಿದ್ದರೆ ಇಷ್ಟರಲ್ಲಿ ಆತ ನಿನ್ನನ್ನು ಓಣಿಯ ಭಿಕ್ಷುಕಳನ್ನಾಗ ಮಾಡದೆ ಇರುತ್ತಿರಲಿಲ್ಲ; ಆದರೆ ಪೋರೀ, ಇಂದು ನಿನ್ನ ಗರ್ವಭಂಗ ಮಾಡದ ಹೊರತು

ನಡೆಯುಲಾರದು. ಮನೆಗೆ ಹೊರಡುವ ಮೊದಲು ನಾನು ಈ ಲಕ್ಕೋಟೆಯನ್ನು ಅಂಚೆಯ ಪೆಟ್ಟಿಗೆಯಲ್ಲಿ ಚಲ್ಲಿಯೇ ಹೋಗುವೆನು; ಅಂದರೆ ನಿನ್ನ ವ್ಯವಸ್ಥೆ ನಿನಗಾಗುವದು.'

ಭಾಯೋಲೆ ವ್ಯಾಕುಲ ಭಾವದಿಂದ:- ಬೇಡ; ನನ್ನ ಸರ್ವನಾಶಗೊಳಿಸ ಬೇಡ. ನನಗೆ ಒಂದೇ ಒಂದಾಗಿ ಉಳಿದಿರುವ ನಮ್ಮ ಮಾವನ ಆಶ್ರಯ ತಪ್ಪಿ ಸುವ ಗೊಡವೆಗೆ ಹೋಗಬೇಡ. ಕೇವಲ ನಿರಾಶ್ರಯಗಳಾಗಿರುವದರಿಂದಲೇ ಇಂದು ನಾನು ನಿನ್ನಂತಹ ನರಪಿಶಾಚಿಗೆ ಪ್ರಾರ್ಥಿಸುತ್ತೇನೆ.

'ಹಾಗಾದರೆ ನಿನಗೆ ನನ್ನ ಅಂಜೋಣ ಸಮ್ಮತವಿಪೆಯೇ? ಅಹುದು-ಇಲ್ಲ, ಎಂಬದೊಂದೇ ಮಾತಿನಲ್ಲಿ ಉತ್ತರ ಕೊಡು. ನನಗೆ ಹಲವು ಮಹ ತ್ವದ ಕೆಲಸಗಳಿರುತ್ತವೆ; ಗೊಡ್ಡು ಹರಟೆ ಕೊಚ್ಚಲಿಕ್ಕೆ ಸಮಯವಿಲ್ಲ.'

ಭಾಯೋಲೆ ಮೋರೆಯನ್ನೆತ್ತಿ ಸ್ಪಷ್ಟವಾಗಿ ಕೇಳಿಸುವಂತೆ:-ಇಲ್ಲ; ನಿನ್ನ ನೀಚತನದ ಆದೇಶ ನಾನು ಎಂದೆಂದಿಗೂ ಪಾಲಿಸಲಾರೆ ನೀನು ನಿನ್ನ ಮನ ಸ್ಸಿಗೆ ಬಂದಂತೆ ನನ್ನ ಅನಿಷ್ಟದ ಯತ್ನ ಮಾಡು. ಭಗವಂತಾ! ದಯಾಘನ ನಾದ ಭಗವಂತಾ! ಈ ಸಂಕಟ ಸಮಯದಲ್ಲಿ ನೀನೇ ನನಗೆ ತಾರಕ!

ಹೀಗೆಂದು ನುಡಿದು, ಭಾಯೋಲೆ ಬೇರೆ ಕಡೆಗೆ ಹೊರಳಿ ನಿಲ್ಲಲು, ಒಬ್ಬ ಸಭ್ಯ ಮನುಷ್ಯ ಆ ವಿಶ್ರಾಮವಾಟಿಕೆಯೊಳಗಿನ ಒಂದು ವೃಕ್ಷದ ಕವಿ ನೆಳಲೊಳಗಿಂದ ಹೊರಟು ತನ್ನನ್ನು ಬೇರೆ ಯಾರೂ ನೋಡಬಾರದೆಂಬ ಭಾವದಿಂದ ಮೆಲ್ಲ ಮೆಲ್ಲನೆ ಬೇರೆ ಕಡೆಗೆ ನಡೆದುದು ಆರ್ಟನ್ನನಿಗೆ ಕಾಣಿಸಿತು. ಯಾವನೊಬ್ಬ ದಾರಿಕಾರನಿಗೆ ದಾರಿಯಲ್ಲಿ ಒಳ್ಳೇ ಸಿಟ್ಟಿನಿಂದ ಹೆಡೆಯನ್ನಪ್ಪಳಿ ಸುತ್ತ ನಿಂತಿರುವ ಸರ್ಪ ಆಕಸ್ಮಿಕ ಕಂಡರೆ ಆಗ ಆತ ಹೇಗೆ ಭಯಕಂಪಿತ ನಾಗಿ ಮುಂದುಗಾಣದಂತಾಗುವನೋ ಆರ್ಟನ್ನನ ಸ್ಥಿತಿಯೂ ಕೇವಲ ತದ್ರೂಪವಾಯಿತು. ಪರಕ್ಷಣದಲ್ಲಿ ಆರ್ಟನ್ನನ ಕಣ್ಣುಗಳು ಕೆಂಪಡರಿದವು. ಆಗ ಆತನ ಹೃದಯದಲ್ಲಿ ಯಾವ ಭಯಂಕರ ವೇದನೆಯಾಗುತ್ತಿತ್ತೋ ಅದ ರಿಂದ ಆತ ಸ್ತಂಭಿತನಾಗಿಬಿಟ್ಟ.

ಆಗ ಆ ವಿಶ್ರಾಮವಾಟಿಕೆಯೊಳಗಿಂದ ಹಾಗೆ ಮೆಲ್ಲನೆ ಹಾಯ್ದುಹೋದ ಸಭ್ಯ ಗೃಹಸ್ಥ ಬೇರೆ ಯಾವನೂ ಆಗಿರದೆ, ವಿಪದಗ್ರಸ್ತರ ಬಂಧುವಂತಿದ್ದ ನಮ್ಮ ರಾಬರ್ಟ ಬ್ಲೇಕನೇ ಅಹುದು.

——

## ೭ನೇ ತೆರೆ—ಪ್ರಾರಂಭದ ಭೆಟ್ಟಿ!

ಭಾಯೋಲೆ ಆ ನೀಚತಮ ಆರ್ಟನ್ನನೊಡನೆ ಆ ವಿಶ್ರಾಮಕುಂಜ ವನ್ನು ಪ್ರವೇಶಿಸಲು. ಆಕೆಯ ಪ್ರಣಯಿಯಾದ ಕ್ಯಾಪ್ಟನ್‌ರೆನ್‌ಹ್ಯಾಮನಿಗೆ ಬಲು ಸಂತಾಪವುಂಟಾಯಿತು. ಆರ್ಟನ್ನನ ಕೂಡ ರೆನ್ ಹ್ಯಾಮನ ಸ್ನೇಹ ಭಾವವಿದ್ದಿಲ್ಲವೆಂತಲ್ಲ; ಆದರೂ ಆತನಲ್ಲಿ ಅವನ ಶ್ರದ್ಧೆ ಮಾತ್ರ ಲವಲೇಶವೂ ಇರಲಿಲ್ಲ. ತನ್ನ ಪ್ರಣಯಿನಿ ಪರಪುರುಷನೊಡನೆ ಗೌಪ್ಯವಾಗಿ ಮಾತಾಡುತ್ತಿರುವದನ್ನು ಕಂಡು ಕೇವಲ ಸ್ತ್ರೀ ಸ್ವಾತಂತ್ರ್ಯತೆಯ ಆ ಲೀಲಾಕ್ಷೇತ್ರದಲ್ಲಿಯೂ ಕೂಡ ಯಾವನೊಬ್ಬ ಗಂಡಸಿನ ಹೃದಯ ಆನಂದದಿಂದ ಉಕ್ಕೇರದಿರುವದು ಸೋಜಿಗವಲ್ಲವೆ?

ರೇನ್‌ಹ್ಯಾಮ ಭಾಯೋಲೆಯ ಹೊರತು ಬೇರೆ ಯಾವ ಸ್ತ್ರೀಯೊಡನೆಯೂ ಆಂದಿನ ಆ ಲಾರ್ಡರ ಮನೆಯ ಬಾಲಿನಲ್ಲಿ ಕುಣಿಯುವದಿಲ್ಲೆಂದು ನಿಶ್ಚಯಿಸಿಕೊಂಡಿದ್ದ; ಆದರೆ ಬಾಲಿನ ವೇಳೆಯಲ್ಲಿ ಭಾಯೋಲೆ ಅಲ್ಲಿರದೆ ಬೇರೆ ಕಡೆಗೆ ಹೊರಟು ಹೋಗಲು, ರೆನ್‌ಹ್ಯಾಮ ಅಲ್ಲಿ ನಿಲ್ಲದೆ ಅತ್ತಿತ್ತ ಸುಮ್ಮನೆ ಅಡ್ಡಾಡಹತ್ತಿದ. ಮುಂದೆ ಅರ್ಧ ಗಂಟೆಯ ಮೇಲೆ ಆತನಿಗೆ ಆತನ ತಂಗಿ ಕ್ಲಾರೆ ಆಕಸ್ಮಾತ್ತಾಗಿ ಭೇಟಿಯಾದಳು. ಆಗ ರೆನ್‌ಹ್ಯಾಮನೆನ್ನುತ್ತಾನೆ:— ತಂಗೀ, ಕ್ಲಾರೇ, ನೀನು ನನಗೆ ಒಂದಿಷ್ಟು ಸಹಾಯ ಮಾಡುವೆಯಾ? ನೀನು ನನ್ನೊಡನೆ ಆಚೆಗಿನ ಆ ಕೋಣೆಗೆ ನಡೆ. ನಿನಗೆ ಎಲ್ಲವನ್ನೂ ವಿಶದವಾಗಿ ತಿಳಿಸುತ್ತೇನೆ, ಎಂದಂನ.

ಕೂಡಲೆ ಕ್ಲಾರೆ ರೆನ್‌ಹ್ಯಾಮನೊಡನೆ ಆ ಕೋಣೆಗೆ ಹೋದಳು. ಆಗ ಉಳಿದವರು ಮಧ್ಯದ ಹಾಲಿನೊಳಗಿನ ಬಾಲಿನಲ್ಲಿ ದಂಗಾಗಿದ್ದರು; ಆದರಿಂದ ಆ ಕೋಣೆಯಲ್ಲಿ ಬೇರೆ ಯಾರೂ ಇರಲಿಲ್ಲ. ಆಗ ರೆನ್‌ಹ್ಯಾಮನು ತಂಗಿಯ ಎದುರಿಗೆ ಕುಳಿತುಕೊಂಡು ಖಿನ್ನಭಾವದಿಂದ:-ತಂಗೀ, ನಾನು ಇಂದು ಬಹು ಸಂಕಟಕ್ಕೀಡಾಗಿರುವೆ. ಈ ಪ್ರಸಂಗದಲ್ಲಿ ನೀನು ಒಂದಿಷ್ಟು ಸಹಾಯ ಮಾಡದಿದ್ದರೆ ನನ್ನ ಅವಸ್ಥೆ ನೆಟ್ಟಗಾಗುವಂತಿಲ್ಲ. ನನ್ನೊಬ್ಬ ಮಿತ್ರ ಎರಡು ನೂರು ಪೌಂಡು ಸಾಲ ಮಾಡಿ, ಅದನ್ನು ತೀರಿಸಲಾರದೆ ಮಿಡುಕುತ್ತಿರುವ; ಆತನ ಆ ಋಣ ತೀರಿಸಲಿಕ್ಕೆ ನಾನು ವಚನಬದ್ಧನಾಗಿರುವೆ. ಆ ಹಣ ನಾನು ನಾಳೆ ಬೆಳಿಗ್ಗೆ ೧೦ ಗಂಟೆಯೊಳಗೆ ಕೊಡಲಿಕ್ಕೇ ಬೇಕು; ಕೊಡದಿದ್ದರೆ ನಡೆಯುವ

ತಿಲ್ಲ. ನನಗಂತೂ ಆ ಹಣ ಇಷ್ಟು ಬೇಗನೆ ಎಲ್ಲಿಯೂ ಸಿಗಲಾರದು. ಕಾರಣ ಈಗ ನಾನು ನಿನಗೆ ಹೇಳಿಕೊಳ್ಳುತ್ತೇನೆ.

ಕೂಡಲೆ ಕ್ಲಾರೆ ಗಂಭೀರಳಾಗಿ: ಆ ಎರಡು ನೂರು ಪೌಂಡನ್ನು ನೀನು ನನ್ನಲ್ಲಿ ಸಾಲವಾಗಿ ಕೇಳುತ್ತಿರುವೆಯಾ?'

'ಅಹುದು; ನಾನು ಅವುಗಳನ್ನು ನಿನಗೆ ಕೆಲ ದಿನಗಳಲ್ಲೇ ಕೊಟ್ಟು ಮುಟ್ಟಿಸುತ್ತೇನೆ.'

ಆಗ ಕ್ಲಾರೆ ಅನ್ನುತ್ತಾಳೆ:-ಅಣ್ಣಾ, ನಿನ್ನೀ ಸಾಮಾನ್ಯ ಬಿನ್ನಹ ನನ್ನಿಂದ ಮನ್ನಿಸುವದಾಗಿದ್ದರೆ ನನಗೆ ಬಹು ಸಮಾಧಾನವೆನಿಸುತ್ತಿತ್ತು; ಆದರೆ ಅಣ್ಣಾ, ನನ್ನ ಬಳಿಯಲ್ಲಿ ಈಗ ಹಣವಿಲ್ಲ. ನನ್ನ ಹಣ ನನಗೆ ಬರುವವರೆಗೆ ನಾನೂ ಸಾಲ ಮಾಡಿಯೇ ಕಾಲ ಕಳೆಯಬೇಕಾಗಿದೆ.

ಕ್ಲಾರೆಯ ಗಂಡನಾದ ಲಾರ್ಡ ಭಿಸ್ಸ ಸ್ಕಾಟಲಂಡ ದೇಶದೊಳಗಿನವನೊಬ್ಬ ಪ್ರಸಿದ್ಧ ಲಾರ್ಡ. ಆತ ಹೆಂಡತಿಗೆ ತಿಂಗತಿಂಗಳಿಗೆ ಸಾಕಷ್ಟು ಹಣ ಖರ್ಚಿಗಾಗಿ ಕೊಡುತ್ತಿದ್ದ; ಆದರೆ ಕ್ಲಾರೆ ಮಿತವ್ಯಯಿಯಾಗದ್ದರಿಂದ ಇದು-ವರೆಗೆ ಒಂದು ಕಾಸನ್ನೂ ಸಂಗ್ರಹಿಸಿರಲಿಲ್ಲ! ತಿಂಗತಿಂಗಳಿಗೆ ಅವಳ ಸಾಲವೇ ಹೆಚ್ಚುತ್ತ ನಡೆದಿತ್ತು. ಕ್ಯಾಪ್ಟನ್ ರೆನ್‍ಹ್ಯಾಮನಿಗೆ ತನ್ನ ತಂಗಿಯ ಆ ಅವಸ್ಥೆ ಅವಗತವಾಗಿದ್ದಿಲ್ಲವೆಂತಲ್ಲ. ತನ್ನ ಸಾಮಾನ್ಯ ವಿನಂತಿಯನ್ನು ಮನ್ನಿಸಲಿಕ್ಕಾಗಲಿಲ್ಲೆಂದು ಅಸಮಾಧಾನಪಟ್ಟ ತನ್ನ ತಂಗಿಯನ್ನು ಕುರಿತು ರೆನ್‍ಹ್ಯಾಮನೆನ್ನುತ್ತಾನೆ:-ತಂಗೀ, ಕ್ಲಾರೇ, ನೀನು ದುಃಖಿಸಬೇಡ. ನನಗೆ ಮತ್ತೆ ಎಲ್ಲಿಯಾದರೂ ಹಣ ದೊರೆತೀತೆಂದು ನನಗನಿಸುತ್ತಿದೆ.

'ನನ್ನ ಸ್ವಾಮಿ ಊರಲ್ಲಿದ್ದರೆ ನಾನು ಅವನಿಂದ ನಿನಗೆ ಬೇಕಾಗಿದ್ದ ಹಣ ದೊರೆಕಿಸಿ ಕೊಡುತ್ತಿದ್ದೆ; ಆದರೆ ಆತ ಬೇಟೆಯ ವಿಷಯದ ತನ್ನ ಹಂಬಲವನ್ನೀಡೇರಿಸಿಕೊಳ್ಳುವದಕ್ಕೆಂದು ದಕ್ಷಿಣ ಆಫ್ರಿಕೆಗೆ ಹೋಗಿರುವ ಸಂಗತಿ ನಿನಗೆ ಗೊತ್ತೇ ಇದೆ. ಅಣ್ಣಾ, ನಾನು ಮಹಾ ಮೂರ್ಖಳು. ನನಗೆ ಒಂದಿಷ್ಟೂ ತಿಳುವಳಿಕೆಯಿರುವದಿಲ್ಲ. ನನ್ನ ಬಳಿಯಲ್ಲಿ ಬೆಲೆಯುಳ್ಳ ಅಲಂಕಾರಗಳಿಗೆ ಕೊರತೆಯಿಲ್ಲ. ಅವುಗಳನ್ನು ಒತ್ತಿ ಇಟ್ಟರೆ ಹಣಕ್ಕೇನು ಕಡಿಮೆ? ನನ್ನ ಗಂಡ ಹಿಂದಿರುಗಿ ಬಂದ ಕೂಡಲೆ ನಾನು ಅವುಗಳನ್ನು ಬಿಡಿಸಿಕೊಳ್ಳುವೆ' ಹೀಗೆಂದು ನುಡಿದು, ಕ್ಲಾರೆ ತನ್ನ ಕೊರಳೊಳಗಿನ ವಜ್ರದ್ದೊಂದು ಹಾರ

ತೆಗೆದು ರೆನ್‌ಹ್ಯಾಮನೆದುರಿಗೆ ಚೆಲ್ಲಿದಳು. ಅದರ ಬೆಲೆ ಎರಡು ಸಾವಿರ ಪೌಂಡುಗಳಿಗೆ ಕಡಿಮೆಯಿರಲಿಲ್ಲ!

ಆಗ ರೆನ್‌ಹ್ಯಾಮು ಅವಳನ್ನು ನಿಷೇಧಿಸಿ:-ತಂಗೀ, ನಿನ್ನ ಎರಡು ಸಾವಿರ ಪೌಂಡು ಬೆಲೆಯ ಹಾರವನ್ನು ನೀನು ನನಗಾಗಿ ಎರಡು ನೂರು ಪೌಂಡಿಗೆ ಒತ್ತೆ ಇಡುವ ಕಾರಣವಿಲ್ಲ. ನಾನು ಬೇರೆ ಎಲ್ಲಿಯಾದರೂ ಹಣದ ವ್ಯವಸ್ಥೆ ಮಾಡುವೆ; ಆದರೆ ತಂಗೀ, ನಿನ್ನೀ ಹೀರಕ ಹಾರ ಹೀಗೇಕೆ ವಿದ್ರೂಪ ತೋರುವದು? ಇದರ ನಡುವಿನ ಆ ಮುತ್ತು-ರತ್ನಗಳ ಗೊಂಚಲ ಕಾಣುವದಿಲ್ಲವಲ್ಲ! ಎನ್ನಲು,

'ಅಣ್ಣಾ, ನಾಚಿನ ಭರದಲ್ಲಿ ಅದೆಲ್ಲಿಯಾದರೂ ಬಿದ್ದು ಹೋದೀತೆಂದು ಬಗೆದು ನಾನು ಅದನ್ನು ಮನೆಯೊಳಗೇ ಬಿಟ್ಟು ಬಂದಿರುತ್ತೇನೆ.'

'ಹಾಗೆಯೋ? ಹಾಗಾದರೆ ಅಡ್ಡಿಯಿಲ್ಲ. ನಾಚಿನ ಭರದಲ್ಲಿ ಅದು ಇಲ್ಲಿಯೋ ಎಲ್ಲಿಯಾದರೂ ಬಿದ್ದು ಹೋಗಿರಬಹುದೆಂದು ನಾನು ಭಾವಿಸಿದ್ದೆ. ಆ ಗೊಂಚಲ ಬಹು ಮೂಲ್ಯವಾದ ಮುತ್ತು-ರತ್ನಗಳಿಂದ ನಿರ್ಮಿಸಲ್ಪಟ್ಟಿದ್ದು, ನೀನು ನಿನ್ನ ಮನೆಯೊಳಗಿನ ಸಾಮಾನ್ಯವಾದ ಪೆಟ್ಟಿಗೆಯಲ್ಲಿ ಅದನ್ನಿಟ್ಟು ಬಂದಿರುವದಿಲ್ಲವಷ್ಟೆ? ಕಳ್ಳರು-ಕಾಕರಿಗೆ ಅದರ ಸಂಧಾನ ಹತ್ತಿದರೆ, ಅವರು ಅದನ್ನು ಬಿಡರು. ಈಗಿನ ಕಾಲದ ಕಳ್ಳರು ಸರ್ವ ಸಾಮಾನ್ಯರಲ್ಲ; ವೈಜ್ಞಾನಿಕ ಸುಪಂಡಿತರೂ ಆ ಹೋರೆಗೆ ನಿಂತಿರುತ್ತಾರೆ. ಅವರು ವೈಜ್ಞಾನಿಕ ಯಂತ್ರಗಳ ಸಹಾಯದಿಂದ ದುರ್ಭೇದ್ಯವಾದ ಲೋಹ ಸಂದೂಕಗಳನ್ನು ಅತಿ ಸಹಜವಾಗಿ ತೆರೆದು, ಅವುಗಳೊಳಗಿನ ಸರ್ವಸ್ವವನ್ನೂ ಹರಣ ಮಾಡುತಲಿರುವರು.'

ಆಗ ಕ್ಲಾರೆ ಮುಗುಳ್ನಗೆಯಿಂದ:-ಅಣ್ಣಾ, ನನ್ನನ್ನು ಅಷ್ಟೊಂದು ಹುಚ್ಚಿಯೆಂದು ತಿಳಿದಿರುವೆಯಾ? ನಾನು ಅದನ್ನು ಒಳ್ಳೇ ಸುರಕ್ಷಿತ ಸ್ಥಳದಲ್ಲಿ ಬಚ್ಚಿಟ್ಟಿರುತ್ತೇನೆ. ಅದು ಕಳ್ಳರು-ಕಾಕರ ಅಜ್ಜ-ಮುತ್ತಜ್ಜಂದಿರಿಗೂ ಸಿಗಲಾರದು.

'ತಂಗೀ, ನೀನು ಒಳ್ಳೇ ಧೂರ್ತಳಾಗಿರುವಂತೆ ತೋರುತ್ತಿದೆ; ಹಾಗಾದರೆ ನೀನು ಅದನ್ನೆಲ್ಲಿ ಮುಚ್ಚಿಟ್ಟಿರುತ್ತೀಯೆಂಬದನ್ನು ಹೇಳು ನೋಡೋಣ.'

ಕ್ಲಾರೆ ಸಾನಂದದಿಂದ ಕಣ್ಣು ಹೊರಳಿಸುತ್ತ:-'ನಾನು ಬಾಯಿ ಬಿಚ್ಚಿ ಹೇಳದಿದ್ದರೆ ಆ ಸ್ಥಳವನ್ನು ಅನುಮಾನದಿಂದ ಯಾರೂ ಪತ್ತೆ ಹಚ್ಚಲಾರರು. ನಾನು ದಿನಾಲು ನನ್ನ ಮೋರೆಗೆ ಒತ್ತಿಕೊಳ್ಳುವ ಪಾವುಡರಿನ ಡಬ್ಬಿಯಲ್ಲಿ ಪಾವುಡರಿನ ಕೆಳಗೆ ಕಾಗದದಲ್ಲಿ ಅದನ್ನು ಸುತ್ತಿಟ್ಟು ಬಂದಿರುತ್ತೇನೆ.'

'ತಂಗೀ, ಒಳ್ಳೇ ಸುರಕ್ಷಿತ ಸ್ಥಳದಲ್ಲಿಟ್ಟಿರುತ್ತೀ. ಐದು ಘಾರ್ದಿಂಗಿನ ಪಾವುಡರಿನ ಡಬ್ಬಿಯಲ್ಲಿ ಹತ್ತು-ಹನ್ನೆರಡು ಸಾವಿರ ಪೌಂಡಿನ ಮುತ್ತುರತ್ನಗಳು ಮುಚ್ಚಿಡಲ್ಪಟ್ಟಿರುವವೆಂಬದನ್ನು ಆದಾರು ಅನುಮಾನಗೊಳ್ಳುವರು?'

ಹೀಗೆಂದು ಆ ಅಣ್ಣಾ-ತಂಗಿಯರು ತಮ್ಮ ತಮ್ಮೊಳಗೆ ಮಾತಾಡುತ್ತಿರುವಾಗ, ಒಬ್ಬ ಭೃತ್ಯ ಅಲ್ಲಿಗೆ ಬಂದು:—ಕ್ಯಾಪ್ಟನ್ನರೇ, ಟೆಲಿಫೋನದಲ್ಲಿ ತಮ್ಮನ್ನಾರೋ ಕೂಗುತ್ತಿರುವರೆಂದು ಹೇಳಿದ. ಕೂಡಲೆ ಕ್ಯಾಪ್ಟನ್ನರೆನ್ ಹ್ಯಾಮ ಲಾರ್ಡ ಬೋರ್ಲರ ಮನೆಯ ಅಟ್ಟದ ಮೇಲಿನ ಟೆಲಿಫೋನ ಕೋಣೆಗೆ ಹೋದ; ಕ್ಲಾರಿ ಬಾಲಿನ ಹಾಲಿಗೆ ಹೊರಟು ಹೋದಳು.

ಪರರಾಷ್ಟ್ರ ವಿಭಾಗದ ಒಬ್ಬ ಮುಖ್ಯಸ್ಥ ಟೆಲಿಫೋನಿನಲ್ಲಿ ರೆನ್‌ಹ್ಯಾಮನನ್ನು ಕರೆಯುತ್ತಿದ್ದ. ರೆನ್‌ಹ್ಯಾಮ ಅಲ್ಲಿಗೆ ಹೋದ ಕೂಡಲೆ:— 'ನೀನು ಈಗಿಂದೀಗಲೆ ಕ್ರುಸೇಲಸ ಪಟ್ಟಣಕ್ಕೆ ಹೊರಡು. ಯಾವ ಬಂಡಿಯಲ್ಲಿ ಕುಳಿತು ನೀನು ಹಡಗವನ್ನು ತಲುಪಬೇಕಾಗಿದೆಯೋ ಅದು ಸರಿಯಾಗಿ ಇನ್ನು ಅರ್ಧ ಗಂಟೆಗೆ ವ್ಹಿಕ್ಟೋರಿಯಾ ಸ್ಟೇಶನ್ನಿನಿಂದ ಹೊರಡಲಿರುವದು. ಕಾರಣ ಬೇಗನೆ ಹೊರಡು' ಎಂದು ಸಂದೇಶ ಬಂದಿತು. ರೆನ್‌ಹ್ಯಾಮ ಒಂದು ಗಳಿಗೆಯೂ ತಡಮಾಡುವಂತಿರಲಿಲ್ಲ; ಯಾರಿಗೂ ಭೇಟಿಯಾಗುವಂತಿಗಲಿಲ್ಲ. ಆದರಿಂದ ಆತ ಆ ಕೂಡಲೆ ಲಾರ್ಡ ಬೋರ್ಲರ ಮನೆಯಿಂದ ಹೊರಟು ಹೋದ.

ಇಷ್ಟಾಗುವದರೊಳಗೆ ಹಾಮುನ್ ಆರ್ಟನ್ನ ಭಾಯೋಲೆಯನ್ನು ಬಾಲಿನ ಹಾಲಿಗೆ ತಲುಪಿಸಿ, ಲೇಡೀ ಎಲೀಸೆಯ ಭೇಟಿಗಾಗಿ ನಿರೀಕ್ಷಿಸಹತ್ತಿದ; ಆಕೆ ಯಾವ ಕಡೆಗೆ ಅಡ್ಡಾಡುತ್ತಿರುವಳೆಂಬದನ್ನು ಶೋಧಿಸಲಾರಂಭಿಸಿದ. ಆಗ ಆತನ ಕಾಲಿಗೆ ನೋವಾದಂತಾಗಲು, ಅವನ ಮುಖಭಾವವು ವೇದನಾಭರದಿಂದ ವಿವರ್ಣವಾಯಿತು.

ತುಸ ವೇಳೆಯಲ್ಲೇ ಲೇಡೀ ಎಲೀಸೆ ಆರ್ಟನ್ನನ ಬಳಿಗೆ ಬಂದು:—ಆರ್ಟನ್ನರೇ, ನಿಮ್ಮ ಮುಖ ಹೀಗೇಕೆ ವಿವರ್ಣವಾಗಿದೆ? ನಿಮಗೇನಾದರೂ ನೋವಾಗಿದೆಯೋನೆಂದು ಕೇಳಿದಳು.

ಆರ್ಟನ್ನ ಮತ್ತಿಷ್ಟು ಮೋರೆ ಸೊಟ್ಟ ಮಾಡುತ್ತ:— ಅಹುದು; ಲೇಡಿಯವರೇ, ಅರ್ಧ ಗಂಟೆಯ ಪೂರ್ವದಲ್ಲಿ ಕಾಲು ಜಾರಿ ಬಿದ್ದಿದ್ದೆ.

ಯಾವಾಗ ಎಂಥ ವಿಪತ್ತೊದಗುವದೆಂಬದು ಆದಾರಿಗೆ ಮುಂಗಡವಾಗಿ ತಿಳಿಯುವದು? ನಾನು ಇಂದಿನ ಬಾಲಿನಾಟದಲ್ಲಿ ನಿಮ್ಮೊಡನೆ ಕುಣಿಯಬೇಕೆಂದು ಗೊತ್ತಾಗಿತ್ತು;ಆದರೆ ಈ ಕಾಲಿನೊಳಿತದ ಮೂಲಕ ಅದು ಅಸಾಧ್ಯವಾಯಿತು. ಆದಕ್ಕಾಗಿ ನಾನು ನಿಮ್ಮಲ್ಲಿ ಕ್ಷಮೆ ಬೇಡುವೆ.

'ಬೇಡ-ಬೇಡ. ನೀವು ಕುಣಿಯದಿದ್ದುದೇ ವಿಹಿತ. ಇನ್ನು ನೀವು ನಿಮ್ಮ ಕಾಲಿನ ನೋವು ಬೇಗನೆ ಕಡಿಮೆಯಾಗುವ ಪ್ರಯತ್ನಕ್ಕೆ ಹತ್ತಿರಿ. ನಾನಾದರೂ ಹಲವು ಕಡೆಗೆ ಅಡ್ಡಾಡಿ-ಅಡ್ಡಾಡಿ ಬೇಸತ್ತಿರುವೆನಾದ್ದರಿಂದ, ನಾನೂ ಇಂದಿನ ನಾಚಿನಲ್ಲಿ ಕುಣಿಯಲಾರೆ.'

ಹೀಗೆಂದು ನುಡಿದು, ಎಲೀಸೆ ಅವನನ್ನು ಸಮೀಪದ ಒಂದು ಕೋಣೆಗೆ ಕರೆದೊಯ್ದು, ಅಲ್ಲಿಯ ಆರಾಮ ಖುರ್ಚಿಯ ಮೇಲೆ ಕೂಡ್ರಿಸಿ, ತಾನೂ ಆತನ ಸಮೀಪದಲ್ಲೇ ಕುಳಿತುಕೊಂಡಳು. ಬಳಿಕ ಆಕೆ:—ನನಗೆ ಇದುವರೆಗೆ ನಿಮ್ಮ ಅಮೇರಿಕಾ ದೇಶ ನೋಡುವ ಸುಯೋಗ ಪ್ರಾಪ್ತವಾಗಿಲ್ಲ; ಆದರೂ ನಾನು ಕೇಳಿ ತಿಳಿದಿರುವದೇನಂದರೆ, ಅಲ್ಲಿಯ ನಾಚ-ರಂಗಿನ ವ್ಯವಸ್ಥೆಯೂ ನಮಲ್ಲಿಯಂತೆಯೇ ಇದೆಯೆಂದು.

'ಹಾಗಿದ್ದರೂ ನಮ್ಮ ನ್ಯೂಯಾರ್ಕಿನಲ್ಲಿಯ ಬಾಲ್-ನಾಚುಗಳಿಗೆ ಎಲ್ಲ ಶ್ರೇಣಿಯ ಜನರೂ ಕರೆಯಲ್ಪಡುತ್ತಿರುತ್ತಾರೆ, ಇಲ್ಲಿಯಂತೆ ಕೇವಲ ತಮ್ಮ ತಮ್ಮ ದರ್ಜೆಯ ಜನರಿಗಷ್ಟೇ ಅಲ್ಲಿ ನಿಮಂತ್ರಣವಿರುವದಿಲ್ಲ. ಇಲ್ಲಿಯ ನಾಚು-ರಂಗುಗಳು ಒಂದು ರೀತಿಯಿಂದ ಸಂಕುಚಿತ ಭಾವದವೆಂದು ನನ್ನ ಮತವಾಗಿದೆ; ಆದರೂ ಇಂದಿನ ನಿಮ್ಮಲ್ಲಿಯ ನಾಚಿಗೆ ಸುವಿಖ್ಯಾತ ಜನರು ಕಲೆತಿರುವದನ್ನು ನೋಡಿ ನನಗೆ ಬಹು ಸಮಾಧಾನವೆನಿಸಿದೆ. ಅವರಲ್ಲಿಯೂ ಇಲ್ಲಿಯ ಸುಪ್ರಸಿದ್ಧ ಪತ್ತೆದಾರ ರಾಬರ್ಟ ಬ್ಲೇಕರು ಬಂದದ್ದು ಬಹು ಸಂತೋಷಕರವಾಗಿದೆ. ನಮ್ಮ ನ್ಯೂಯಾರ್ಕದಲ್ಲಿ ಈ ನಿಮ್ಮ ಬ್ಲೇಕರ ಹೆಸರು ಬಹು ಪ್ರಖ್ಯಾತಿಗೊಂಡಿದೆ.'

ಅದನ್ನು ಕೇಳಿ ಲೇಡೀ ಎಲೀಸೆ ಪರಮ ಸೋಜಿಗಗೊಂಡು:—ನಿಮ್ಮ ದೇಶದಲ್ಲಿ ಬ್ಲೇಕರಂತಹ ಪತ್ತೆದಾರರಿಲ್ಲವೆ? ನಾನು ನಿಮಗೆ ಆ ಬ್ಲೇಕರ ಪರಿಚಯ ಮಾಡಿಕೊಡುತ್ತೇನೆ ಬನ್ನಿರಿತ್ತ, ಎಂದಂದು ಅವನನ್ನು ಬೇರೆ ಕಡೆಗೆ ಕರೆದುಕೊಂಡು ನಡೆದಳು. ಅಲ್ಪಾವಧಿಯಲ್ಲೇ ಬ್ಲೇಕ ಅವರಿಗೆದುರಾದ. ಪತ್ತೆದಾರನೆಂದರೆ ವಿಪುಲವಾದ ಗಡ್ಡ-ಮೀಸೆಗಳುಳ್ಳವನೂ, ದರ್ಪಯುಕ್ತ

ಮುಖಚರ್ಯೆಯುಳ್ಳವನೂ, ಗುಲಗಂಜಿಯಂತಹ ಕಣ್ಣುಗಳುಳ್ಳವನೂ, ಒಳ್ಳೇ ಕಠೋರ ಸ್ವಭಾವದವನೂ ಇರಬಹುದೆಂದು ಆರ್ಟೆನ್ನನ ಊಹೆಯಾಗಿತ್ತು; ಆದರೆ ಬ್ಲೇಕನನ್ನು ಪ್ರತ್ಯಕ್ಷ ನೋಡಲು, ಆತ ಸುಪ್ರಸನ್ನವದನನಿಯೂ, ನಗುವ ದೃಷ್ಟಿಯುಳ್ಳವನೂ, ಗಡ್ಡ-ಮೀಸೆಗಳಿಲ್ಲದ ಕೇವಲ ಸಾದಾ ಮನುಷ್ಯನೂ ಆಗಿದ್ದ.

ಬ್ಲೇಕ ಸಮೀಪಕ್ಕೆ ಬಂದೊಡನೆಯೇ ಆರ್ಟೆನ್ನ ಎದ್ದು ನಿಲ್ಲಲಿಕ್ಕೆಂದು ಪ್ರಯತ್ನಿಸುವಾಗ, ಕಾಲಿಗೆ ಒಳ್ಳೇ ವೇದನೆಯಾಗುತ್ತಿರುವವರಂತೆ ನಟಿಸಿದ; ಹಾಗು ಅಯ್ಯಯ್ಯೋ! ಎಂದು ಚೀರಿ, ಸಮೀಪದ ಟೇಬಲ್ಲಿನ ಮೇಲೆ ದೊಪ್ಪೆಂದು ಬಿದ್ದ. ಹಾಗೆ ಬೀಳುವಾಗ ಆತ ಮೇಜಿನ ಮೇಲಿದ್ದ ಮಾರ್ಬಲ್ಲ ಕಲ್ಲಿನ ಗುಂಡನ್ನು ಬ್ಲೇಕನ ಹಣೆಗೆ ಬಡಿಯುವಂತೆ ಒಳ್ಳೇ ಕಸುವಿನಿಂದ ಒದೆಯದಿರಲಿಲ್ಲ.

ಲೇಡಿ ಎಲೀಸ ಆರ್ಟೆನ್ನನ ಆ ಚೀತ್ಕಾರವ ಕೇಳಿ ಅತ್ತಕಡೆಗೆ ಹೊರಳಿದಳು ಮಾತ್ರ. ಅಷ್ಟರಲ್ಲಿ ಟೇಬಲ್ಲಿನ ಮೇಲಿನ ಆ ಕಲ್ಲಿನ ಗುಂಡು ಬ್ಲೇಕನ ತಲೆಯೊಡೆಯಲಿಕ್ಕೆ ಭರದಿಂದ ನಡೆದಿತ್ತು; ಆದರೆ ಅದು ಬ್ಲೇಕನ ಹಣೆಗೆ ತಾಕದೆ ಎದುರಿಗಿನ ಚೌಕಟ್ಟಿಗೆ ಬಲವಾಗಿ ಬಡೆಯಿತು.

ಆ ಕಲ್ಲು ಚೌಕಟ್ಟಿಗೆ ತಾಕಿ ನೆಲಕ್ಕೆ ಬೀಳಲು, ಆರ್ಟೆನ್ನ ಒಳ್ಳೇ ಸಹೃದಯತೆಯಿಂದ:—ನಾನು ಮೇಜಿನ ಮೇಲೆ ಬೀಳುವಾಗ ನನ್ನ ಕಾಲು ತಾಕಿ, ಆ ಕಲ್ಲು ಹಾಗೆ ಪುಟಿಯಿತು. ಅದು ರಾಬರ್ಟ ಬ್ಲೇಕರ ತಲೆಗಿಲೆಗೆ ಬಡೆದಿದ್ದರೆ ಅವರ ತಲೆಯೊಡೆದು ಕೊಲೆಯಾಗುತ್ತಿತ್ತು. ದೈವಬಲದಿಂದ ಅವರು ಪಾರಾದರು. ಅಯ್ಯೋ ದೇವರೇ, ಎಂಥ ಘಾತವಾಗುತ್ತಿತ್ತಲ್ಲ! ಎಂದು ಅಂದು, ಬಹು ವಿಷಣ್ಣವಾದವನಂತೆ ನಟಿಸಿದ.

ಬಾಲಿಗೆ ಬಂದ ಹಲವರು ಅದನ್ನು ನೋಡಿದರು. ಭಾಯೋಲೆಗೂ ಅದು ಕಾಣಿಸದಿರಲಿಲ್ಲ. ಆರ್ಟೆನ್ನ ಎಂಥ ನೀಚನೆಂಬದು ಆಕೆಗೆ ಹೇಳಬೇಕಿದ್ದಿಲ್ಲ. ಈ ನರಪಿಶಾಚಿ ಮತ್ತಾವ ಜಾಲವನ್ನೊಡ್ಡುತ್ತಿರುವನೋ ಎಂಬ ಆಶಂಕೆಯಿಂದ ಅವಳ ತಲೆ ತಿರುಗಹತ್ತಿತ್ತು. ಭಾಯೋಲೆಯ ಬಳಿಯಲ್ಲೇ ವಿಲ್ಯಮ್ ಡ್ಯೂಕ ನಿಂತುಕೊಂಡಿದ್ದ. ಭಾಯೋಲೆ ಇನ್ನು ಬೀಳುತ್ತಾಳೆಂಬದನ್ನು ಕಂಡು, ಆತ ಅವಳನ್ನು ತನ್ನ ಎರಡೂ ಕೈಗಳಿಂದ ಸಾವರಿಸಿ ಹಿಡಿದು, ಸಮೀಪದಲ್ಲಿಯ ಒಂದು ಆರಾಮ ಖುರ್ಚಿಯ

ಮೇಲೆ ಮೆಲ್ಲಗೆ ಕೂಡ್ರಿಸಿದ. ಬಾಲಿಶ ನಾಚಿಕೆಯೊಳಗಿನ ಅತಿ ಶ್ರಮದಿಂದ ಅವಳಿಗೆ ಹೀಗೆ ಬವಳಿ ಬಂದಿರಬಹುದೆಂದು ಅಲ್ಲಿಯು ಹಲವರಿಗೆ ಅನಿಸಿತು.

ಆದರೆ ಭಾಯೋಲೆಗೆ ಹಾಗೆ ಆಕಸ್ಮಾತ್ತಾಗಿ ಬವಳಿ ಬಂದ ಕಾರಣ ತಿಳಿಯಲಿಕ್ಕೆ ಬ್ಲೇಕನಿಗೆ ಒಂದಿಷ್ಟೂ ಅವಕಾಶ ಹಿಡಿಯಲಿಲ್ಲ. ಆತ ಅಸಾಧಾರಣ ಆತ್ಮಸಂಯಮಿಯಾಗಿದ್ದ. ಅಂಥ ಆ ಅತರ್ಕ್ಯವಾದ ವಿಪತ್ತಿನಲ್ಲಿಯೂ ಆತನ ಮುಖಚರ್ಯೆ ಸ್ವಲ್ಪವೂ ಪರಿವರ್ತನ ಹೊಂದಲಿಲ್ಲ; ಇಷ್ಟೇ ಅಲ್ಲ, ಆತನ ಹಣೆಯ ಮೇಲಿನ ಯಾವುದೊಂದು ಸಣ್ಣ ನರವೂ ಕೂಡ ಕಂಪನಗೊಳ್ಳಲಿಲ್ಲ! ಬ್ಲೇಕ ಮಂದಮಂದ ಗತಿಯಿಂದ ಲೇಡೀ ಎಲೀಸೆಯ ಸಮೀಪಕ್ಕೆ ಬಂದು, ಅವಳನ್ನು ಅಭಿವಂದಿಸಿ, ಅನ್ನುತ್ತಾನೆ:—ತಾವು ನನಗೆ ಯಾವುದೋ ಒಂದು ಸಂಗತಿ ತಿಳಿಸಬೇಕೆಂದಿರುವ ಹಾಗೆ ತೋರುತ್ತದಲ್ಲ?

ಆರ್ಟಿನ್ನ ನಡುವೇ ಬಾಯಿ ಹಾಕಿ:—ಮಹಾಶಯರೇ, ಅಹುದು. ನನ್ನ ಅನುರೋಧದಿಂದಲೇ ಇವರು ನಿಮ್ಮ ಬಳಿಗೆ ಬಂದಿರುತ್ತಾರೆ. ನನ್ನ ಅಸಾವಧಾನತೆಯ ಮೂಲಕ ನನ್ನ ಕಾಲು ಬಡಿದು ಸಿಡಿದ ಕಲ್ಲಿನ ಗುಂಡು ನಿಮ್ಮ ಹಣೆಗಿಣೆಗೆ ಬಡೆದಿದ್ದರೆ, ಇಂದು ನಿಮ್ಮ ಕೊಲೆಯಾಗದೆ ಇರುತ್ತಿದ್ದಿಲ್ಲ. ಹಾಗಾಗಿದ್ದರೆ ನಾನು ನರಹತ್ಯೆಯ ಪಾಪಕ್ಕೆ ಗುರಿಯಾಗಬೇಕಾಗುತ್ತಿತ್ತು, ಎಂದಂದ.

ಬ್ಲೇಕ ಮುಗುಳ್ನಗೆ ನಗುತ್ತ, ತನ್ನ ಇಂಗಿತ ಬೇರೆ ಯಾರಿಗೂ ತಿಳಿಯದ ಹಾಗೆ:—ಯಾವದು ಆಗಬೇಕಾಗಿದ್ದಿತೋ ಅದಾಗಲಿಲ್ಲೆಂಬದನ್ನು ಆಡಿ ತೋರಿಸಿದರೆ ಆಗುವ ಫಲವೇನು? ಆದರೆ ನೀವು ನಿಮ್ಮ ಕಾಲಿನ ವೇದನೆಯಿಂದ ಅಷ್ಟು ಬಳಲುತ್ತಿರುವಾಗ, ಆ ಪ್ರಚಂಡವಾದ ಮಾರ್ಬಲ್ಲ ಕಲ್ಲಿನ ಗುಂಡು ನಿಮ್ಮ ಆ ನೋವಾದ ಕಾಲಿನ ಏಟಿನಿಂದ ಫುಟಬಾಲದಂತೆ ಇಷ್ಟು ಬಲವಾಗಿ ಪುಟಿಯುವದು ಶಕ್ಯವಿಲ್ಲವಲ್ಲ,'

ಆಗ ಆ ವಿಷಯದ ಬಗ್ಗೆ ಹೆಚ್ಚು ಚರ್ಚೆಯಾಗಲಿಲ್ಲ. ಲೇಡೀ ಎಲೀಸೆ ಬ್ಲೇಕನೊಡನೆ ಮಾತಾಡಹತ್ತಿದಳು. ಬ್ಲೇಕನೂ ಆ ಮಾತನ್ನು ಮತ್ತೆ ಎತ್ತಲಿಲ್ಲ. ಕಡೆಗೆ ಆರ್ಟಿನ್ನ ತನ್ನಿಂದಾದ ಅನಿಚ್ಛಾಕೃತ ಅಪರಾಧಕ್ಕಾಗಿ ಬ್ಲೇಕನ ಬಳಿಯಲ್ಲಿ ಕ್ಷಮೆ ಬೇಡಿದ. ಬ್ಲೇಕ:—ದೈವಕ್ರಮದಿಂದ ಏನಾಗ

ಬೇಕಾಗಿದ್ದಿತೋ ಅದಕ್ಕಾಗಿ ತಾವು ವಿಷಣ್ಣರಾಗುವ ಕಾರಣವಿಲ್ಲ. ನೀವು ನನ್ನೊಡನೆ ಸಂಭಾಷಿಸ ಬಂದಿರುವಿರೆಂದು ಲೇಡೀ ಎಲೀಸೆ ಹೇಳುತ್ತಿದ್ದ ವಳು. ಸಂಭಾಷಣ ಮಾಡಲಿಕ್ಕೆ ನನ್ನದೇನೂ ಪ್ರತಿಬಂಧವಿಲ್ಲ; ಆದರೆ ನನ್ನ ವ್ಯವಸಾಯ ವಿಷಯದ ಬಗ್ಗೆ ಮಾತ್ರ ನೀವು ಇಲ್ಲಿ ನನ್ನೊಡನೆ ಚರ್ಚಿಸಬಾರದೆಂದು ನಾನು ನಿಮಗೆ ಮೊದಲೇ ಹೇಳಿಡುತ್ತೇನೆ ಈ ಬಾಲಿನಾಟಕ್ಕಾಗಿ ಬಂದು, ಆ ದಿನದ ಹೋರೆಯ ಬಗ್ಗೆ ಚರ್ಚಿಸುತ್ತ ಕೂಡ್ರು ವದು ನನಗಂತೂ ಅಸಹ್ಯವೆನಿಸುತ್ತದೆ.

'ಅಹುದು; ಬ್ಲೇಕರೇ, ತಮ್ಮ ಪ್ರಖ್ಯಾತಿ ಬಹು ದಿನಗಳಿಂದಲೂ ಕೇಳುತ್ತಿದ್ದ ನಾನು, ನಿಮ್ಮೊಡನೆ ಎಷ್ಟೋ ಮಾತಾಡಬೇಕೆಂದಿರುವದು ನಿಜ. ಅದಕ್ಕಾಗಿಯೇ ನಾನು ಲೇಡಿಯವರೊಡನೆ ಇಲ್ಲಿಗೆ ನಿಮ್ಮ ಬಳಿಗೆ ಬಂದಿರುತ್ತೇನೆ.'

ಆರ್ಟಿನ್ನ ಅಸಾಧಾರಣ ಚತುರನೂ ಮಾತು ಬಲ್ಲವನೂ ಆಗಿದ್ದು, ಸಾಹಿತ್ಯ, ವಿಜ್ಞಾನ, ರಾಜನೀತಿ, ಸಮಾಜನೀತಿ ಮುಂತಾದ ಎಲ್ಲ ವಿಷಯಗಳಲ್ಲೂ ಆತನು ಒಳ್ಳೇ ಪಾರಂಗತನಾದುದರಿಂದ, ಆತ ಎಂಥ ಪಂಡಿತರಿಗೂ ವಾಗ್ಯುದ್ಧದಲ್ಲಿ ಸೋಲುವಂತಿರಲಿಲ್ಲ. ಬ್ಲೇಕ ಮಹಾಧೂರ್ತನೂ ಮನುಷ್ಯ ಚಾರಿತ್ರ್ಯಜ್ಞನೂ ಆಗಿದ್ದರೂ, ಆರ್ಟಿನ್ನನೊಡನೆ ಸುಮಾರು ಅರ್ಧ ಗಂಟೆ ಸಂಭಾಷಿಸಿದ ಬಳಿಕ ಆತನ ವಿಷಯವಾಗಿ ಬಹು ಸಂತಸಗೊಂಡ. ಅದರಿಂದ ಆತನ ವಿಷಯವಾಗಿ ಈ ಮೊದಲು ಬ್ಲೇಕನಿಗುಂಟಾಗಿದ್ದ ಹಲವು ಸಂಶಯಗಳು ಕೂಡಲೆ ಅಡಗಿದವು. ಆರ್ಟಿನ್ನನಂಥ ರಸಿಕ ಈ ಲಂಡನ್ನ ಪಟ್ಟಣದಲ್ಲಿಯೇ ಇರುವದಿಲ್ಲೆಂದು ಬ್ಲೇಕನಿಗನಿಸಿತು.

ಆರ್ಟಿನ್ನ ಬ್ಲೇಕನೊಡನೆ ಒಳ್ಳೇ ಭರದಿಂದ ಸಂಭಾಷಣ ಮಾಡುತ್ತಿದ್ದ. ಬ್ಲೇಕನಾದರೂ ಅದನ್ನು ಒಳ್ಳೇ ಆಸ್ಥೆಯಿಂದ ಕೇಳಿಕೊಳ್ಳುತ್ತಿದ್ದ. ಇಂಥೀ ಸಮಯದಲ್ಲಿ ಲಾರ್ಡ ಬೋರ್ಲೆರ ಅಂಡರ ಸೆಕ್ರೆಟರಿ ಅಲ್ಲಿಗೆ ಬಂದು ಆರ್ಟಿನ್ನನನ್ನು ಕುರಿತು:—ಆರ್ಟಿನ್ನರೇ, ನಿಮ್ಮ ದ್ವಾರಪಾಲಕ ಹೊರಗೆ ನಿಮ್ಮ ನಿರೀಕ್ಷಣೆಯಲ್ಲಿರುವ. ನಿಮಗೆ ಒರಬೇಕಾಗಿದ್ದ ಅಮೇರಿಕೆಯ "ಕೇಬಲಗ್ರಾಮು" ಬಂದಿರುವದೆಂದು ಆತ ನಿಮಗೆ ತಿಳಿಸಬಂದಿರುತ್ತಾನೆ, ಎಂದು ತಿಳಿಸಿದ.

ಇದನ್ನು ಕೇಳಿದ ಕೂಡಲೆ ಹ್ಯಾಮುನ್ನ ಆರ್ಟಿನ್ನ ಕುಳಿತ ಸ್ಥಳದಿಂದ ಬಹು ಕಷ್ಟದಿಂದ ಏಳುವವನಂತೆ ಎದ್ದು ನಿಂತು, ತನ್ನ ಮೋಟರಿನ ಕಡೆಗೆ ಮೆಲ್ಲಮೆಲ್ಲನೆ ನಡೆದ; ಹಾಗು ಗಾಡಿಯನ್ನೇರುವಾಗ ಬ್ಲೇಕನನ್ನು ದ್ದೇಶಿಸಿ:- ಬ್ಲೇಕರೆ, ತಮ್ಮಂತಹ ರಸಿಕ ಮತ್ತು ತಿಳುವಳಿಕೆಯುಳ್ಳವರು ಈ ಲಂಡನ್ನಿನಲ್ಲಿ ಅಪರೂಪವಾಗಿರುತ್ತಾರೆ. ತಮ್ಮ ಬಳಿಯಿಂದ ಇಷ್ಟು ಬೇಗನೆ ಹೊರಡುವ ಇಚ್ಛೆ ನನಗಿರಲಿಲ್ಲ. ತಮ್ಮೊಡನೆ ಸಂಭಾಷಿಸಲಿಕ್ಕೆ ನನಗೊಳ್ಳೇ ಹುರುವು ಬರುವದು. ನಾಳೆ ರಾತ್ರಿ ನೀವು ನಮ್ಮ ಮಿಲಾನ ಹೊಟೆಲ್ಲಿಗೆ ಊಟಕ್ಕೆ ಬಂದರೆ, ನನಗೆ ಬಹು ಸಂತೋಷವಾಗುವದು.

ಆರ್ಟಿನ್ನನನ್ನು ಹಿಡಿದು ಆತನ ಗಾಡಿಯಲ್ಲಿ ಕುಳ್ಳಿರಿಸುತ್ತ ಬ್ಲೇಕ ನಸುನಗೆಯಿಂದ:— ನಾನು ಸಾನಂದದಿಂದ ನಿಮ್ಮ ನಿಮಂತ್ರಣ ಸ್ವೀಕರಿಸುತ್ತೇನೆ, ಎಂದಂದ.



## ೭ನೇ ತೆರೆ ಭೃತ್ಯನ ತತ್ಪರತೆ.

ಆರ್ಟಿನ್ನನ ಮೊಟರು ಘೊಂ ಘೊಂ ಎಂದು ಶಬ್ದ ಮಾಡುತ್ತ ಶೀಘ್ರಗತಿಯಿಂದ ಬಂದು ಆತನ ಬಾಗಿಲೆದುರಿಗೆ ನಿಂತಿತು. ಕೂಡಲೆ ಆರ್ಟಿನ್ನ ಇಳಿದು, ತ್ವರಿತಗತಿಯಿಂದ ಮನೆಯ ಉಪ್ಪರಿಗೆ ಏರಿದ. ಹಾಗೆ ಏರುವಾಗ ಈ ಮೊದಲಿನ ಆತನ ಕಾಲ ನೋವು ಎತ್ತೋ ಮಾಯವಾಗಿ ಬಿಟ್ಟಿತ್ತು! ಅಟ್ಟವನ್ನೇರಿದವನೇ ಆತ ತನ್ನ ಕೋಟು-ಟೋಪಿಗಳನ್ನು ಒಬ್ಬ ದೂತನ ಕೈಗೆ ಕೊಟ್ಟು, ತಾನು ಓಡುತ್ತೋಡುತ್ತ ತನ್ನ ಲಾಯಬ್ರರಿಯ ಕೋಣೆ ಪ್ರವೇಶಿಸಿದ.

ಆತ ಯಾವ 'ಕೇಬಲ್‌ಗ್ರಾಮು'ದ ಸಂಗತಿ ಕೇಳಿ ಲಾರ್ಡ ಬೋರ್ಲರ ಮನೆಯಿಂದ ಅಷ್ಟು ತೀವ್ರವಾಗಿ ಬಂದಿದ್ದನೋ, ಲಾಯಬ್ರರಿಯ ಕೋಣೆಯನ್ನು ಸೇರುತ್ತಲೆ ಅದನ್ನು ಮರೆತೇ ಬಿಟ್ಟ. ಅಲ್ಲಿಗೆ ಹೋದವನೇ ಆತ ಎಲ್ಲಕ್ಕೂ ಮೊದಲು ಈ ಮೊದಲು ವರ್ಣಿಸಿದಂತೆ ತನ್ನ ಮುಖದ ಮೇಲೆ ಕೃತ್ರಿಮ ಮುಖ ಧರಿಸಿಕೊಂಡು, ಆ ಗುಪ್ತ ಕೋಣೆಯನ್ನು ಹೊಕ್ಕ. ಬೇಟೆಯ ಸಂಧಾನ ಹತ್ತಲು, ಬೇಟೆಗಾರ ತನ್ನ ಬಲೆಯ ಸಮೀಪಕ್ಕೆ

ಕುಳಿತು ಅದರ ದಾರ ತಿರುವುವದರಿಂದ ಹೇಗೆ ಆ ಬೇಟೆಯನ್ನು ಕೆಡವುವ ಪ್ರಯತ್ನಕ್ಕೆ ಹತ್ತುವನೋ, ತದ್ರೂಪವೇ ಆರ್ಟೆನ್ನ ಆ ಕೋಣೆ ಸೇರಿ, ತನ್ನ ಅಧೀನರಾದ ದಸ್ಯುಗಳ ಮುಖಾಂತರವಾಗಿ ಬೇರೆ ಬೇರೆ ಬೇಟೆಗಳನ್ನು ಕೆಡಹುವ ಯತ್ನಕ್ಕೆ ಪ್ರಾರಂಭಿಸುತ್ತಿದ್ದ.

ಕೋಣೆಯನ್ನು ಪ್ರವೇಶಿಸಿದವನೇ ಆರ್ಟೆನ್ನ ಆ ಕೋಣೆಯ ಬಾಗಿಲನ್ನಿಕ್ಕಿಕೊಂಡು ತನ್ನ ಪ್ರಿಯ ದೂತನಾದ ಡಚ್ಚನನ್ನು ಬರಮಾಡಿಕೊಂಡ ಆತ ಎದುರಿಗೆ ಬಂದ ಕೂಡಲೆ, ಆರ್ಟೆನ್ನ:—ನಾಚಿನ ಭರದಲ್ಲಿ ನಿನ್ನ ಸಂದೇಶ ಟಿಕ್ ಟಿಕ್ ಎಂದು ಬಂದಾಗ, ನಾನು ರಾಬರ್ಟ ಬ್ಲೇಕನ ಕೂಡ ಮಾತಾಡುತ್ತ ಕುಳಿತಿದ್ದೆ, ಎನ್ನಲು,

'ಆಗ ನೀವು ಆತನನ್ನು ಕೊಲ್ಲಲಿಕ್ಕೆ ಪ್ರಯತ್ನಿಸುವದು ನಿರರ್ಥಕವಾದದ್ದರಿಂದ, ಅವನೊಡನೆ ಹಾಗೆ ಹರಟುತ್ತ ಕುಳಿತಿರೇನು?'

'ಅದಿರಲಿ ಬಿಡು. ನೀನು ನನಗೆ ಸಾಂಕೇತಿಕ ಭಾಷೆಯಿಂದ ಕರೆದೆಯಷ್ಟೆ? ಅಷ್ಟು ಅಗತ್ಯದ ಕೆಲಸವೇನು?'

ಡಚ್ಚ ಬಾಯಿಂದೇನೂ ಮಾತಾಡದೆ, ಆರ್ಟೆನ್ನನ ಕೈಗೊಂದು ಕಾಗದ ಕೊಟ್ಟ. ಕ್ಯಾಪ್ಟನ್ ರೆನ್‌ಹ್ಯಾಮನ ಕೂಡ ಆತನ ತಂಗಿಯಾದ ಕ್ಹಾರಿ ಏನೇನು ಹೇಳುತ್ತಿದ್ದಳೋ, ಅದೆಲ್ಲವೂ ಆ ಕಾಗದದಲ್ಲಿ ಉದ್ಧೃತವಾಗಿತ್ತು.

ಆರ್ಟೆನ್ನ ಆ ಕಾಗದದ ಮೊದಲಿನ ಕೆಲ ಭಾಗವನ್ನು ಓದಿ:—ಇದಾವ ಹೊಸ ಸಂಗತಿ? ರೆನ್‌ಹ್ಯಾಮನಿಗೆ ೨೦೦ ಪೌಂಡುಗಳ ಅವಶ್ಯಕತೆಯಿದೆಯೆಂಬದನ್ನು ನಾನು ಆಗಲೆ ತಿಳಿದಿರುತ್ತೇನೆ. ನಾನು ಅವನಿಗೆ ೨೦೦ ಪೌಂಡು ಏಕೆ, ೨ ಲಕ್ಷ ಪೌಂಡುಗಳ ಆಶೆ ತೋರಿಸಿದರೂ ಆತ ನನಗೆ ವಶವಾಗಲಾರ, ಎಂದಂದ.

ಆಗ ಡಚ್ಚ:—ಧಣಿಯರೇ, ಮೊದಲು ನೀವು ಈ ಕಾಗದವನ್ನು ಸಂಪೂರ್ಣವಾಗಿ ಓದಿಕೊಂಡು, ಆ ಮೇಲೆಯೇ ನಿಮ್ಮ ಅಭಿಪ್ರಾಯ ವ್ಯಕ್ತಪಡಿಸಿರಿ.

ಆರ್ಟೆನ್ನ ಪಿಟ್ಟೆಂದುಸುರದೆ, ಅದನ್ನು ಸಂಪೂರ್ಣವಾಗಿ ಓದಿದ. ಆಗ ಆತನ ಕಣ್ಣುಗಳು ಆನಂದೋದ್ರೇಕದಿಂದ ಹೊಳೆಯಹತ್ತಿದವು. ಅವನು

ಉತ್ಸಾಹಭರದಿಂದ:—ಡಚ್ಯಾ, ನೀನನ್ನುವದು ನಿಜ. ಇದಕ್ಕೇ ಹೊಸ ಸುದ್ದಿಯೆನ್ನಬೇಕು! ಲೇಡೀ ಕ್ಲಾರೆಯ ಹೀರಕ ಹಾರಿನ ಆ ಮುತ್ತು-ರತ್ನಗಳ ಗೊಂಚಲು ಸಾಮಾನ್ಯವಾದುದಲ್ಲ. ಅದರ ಬೆಲೆ ತೀರ ಕನಿಷ್ಠಪಕ್ಷಕ್ಕೆ ೩-೪ ಸಾವಿರ ಪೌಂಡುಗಳಾಗಬಹುದು. ಕ್ಲಾರೆ ಅದನ್ನು ಇತ್ತೀಚೆಗೆ ಉಪಯೋಗಿಸದ್ದರಿಂದ, ಅದನ್ನು ಯಾವುದೊಂದು ಬ್ಯಾಂಕಿನಲ್ಲಿ ಒತ್ತೀ ಇಟ್ಟಿರಬಹುದೆಂದು ನಾನಿದುವರೆಗೆ ತಿಳಿದಿದ್ದೆ.

'ಆದರೆ ಧಣಿಯರೇ, ಆ ಬಗ್ಗೆ ಈಗೇನು ಮಾಡಬೇಕೆಂದಿರುವಿರಿ? ನಾವು ಮೊಟ್ಟಮೊದಲು ಆ ಯುವತಿಯ ವಾಸ್ತವ್ಯ ಸ್ಥಾನಗಳನ್ನು ಗೊತ್ತು ಮಾಡಿಕೊಳ್ಳಬೇಕು; ತದನಂತರ ಯಾರೊಬ್ಬರಿಗೂ ತಿಳಿಯದಂತೆ ಅವಳ ಆ ಖಾಸ ರೂಮಿನಲ್ಲಿ ಪ್ರವೇಶಿಸಬೇಕು; ಹಾಗೂ ಕಟ್ಟಕಡೆಗೆ ಆಕೆಯ ಆ ಸೌಗಂಧಿಕ ಪಾವುಡರಿನ ಪತ್ತೆಹಚ್ಚಿ ಆ ಗೊಂಚಲನ್ನೆಬ್ಬಿಸಿಕೊಂಡು ಬರಬೇಕು................'

ಡಚ್ಚ ಇನ್ನೂ ಮಾತಾಡುತ್ತಿರುವಾಗಲೇ ಆರ್ಟನ್ನ ತನ್ನ ಮೇಜಿನ ಮೇಲಿನ ವಿದ್ಯುತ್‌ಯಂತ್ರದ ಒಂದು ಕೀಲನ್ನೊತ್ತಿ:—ಡಚ್ಯಾ, ಈ ಎಲ್ಲ ಕೆಲಸಗಳನ್ನು ಇನ್ನು ಎರಡು ತಾಸಿನಲ್ಲೇ ನೆರವೇರಿಸಬೇಕು. ಇನ್ನೆರಡು ತಾಸಿನಲ್ಲೇ ಆ ಹೀರಕ ಹಾರದ ಮುತ್ತು-ರತ್ನಗಳ ಗೊಂಚಲ ನನ್ನ ಕೈಸೇರುವದೆಂದು ಖಂಡಿತವಾಗಿ ಹೇಳಬಲ್ಲೆನು.

ಕ್ಷಣಾರ್ಧದಲ್ಲಿ ಆರ್ಟನ್ನನ ವಿದ್ಯುತ್ ಯಂತ್ರದಿಂದ ಕೆಂಪು-ನೀಲಿ-ಹಸಗು-ಹಳದಿ ಬಣ್ಣಗಳ ಪ್ರಕಾಶ ಕ್ರಮೇಣ ಬೀಳತೊಡಗಿತು. ಆರ್ಟನ್ನನ ಆಜ್ಞಾಧಾರಕರಾದ ಯಾವ ಕಳ್ಳರು ಅಲ್ಲಿಯ ಬೇರೆ ಬೇರೆ ಕೋಣೆಗಳಲ್ಲಿ ಕೂಡಲ್ಪಟ್ಟಿದ್ದರೋ, ಒಂದೊಂದು ಬಣ್ಣದ ದೀಪವು ಅವರಲ್ಲೊಬ್ಬೊಬ್ಬರ ಗುರ್ತಿನದಾಗಿತ್ತು.

ಆಗ ಆರ್ಟನ್ನ ಅಸ್ಫುಟ ದನಿಯಿಂದ:—'ಮಿಕಿ ಪಿವು ಒಳ್ಳೇ ಚಾಖಾಕ್ಷ ಪೋರ ಆತನೇ ಈ ಕೆಲಸ ಮಾಡಲಿಕ್ಕೆ ಯೋಗ್ಯ' ಹೀಗೆಂದು, ಎದುರಿಗಿನ ಮಿಕ್ಕ ಎಲ್ಲ ಬಣ್ಣಗಳ ದೀಪಗಳನ್ನು ಆರಿಸಿ, ಹಳದೀ ವರ್ಣದ ದೀಪವನ್ನಷ್ಟೇ ಪ್ರಜ್ವಲಿಸಿದ. ಬಳಿಕ ಆರ್ಟನ್ನ ಡಚ್ಚನನ್ನು ಕುರಿತು:—ಡಚ್ಯಾ, ನಾಳೆ ರಾತ್ರಿಯಲ್ಲಿ ಪತ್ತೆದಾರ ಬ್ಲೇಕ ನಮ್ಮ ಮಿಲಾನ ಹೊಟೆಲ್ಲಿಗೆ ಊಟಕ್ಕೆ

ಬರುವನು. ಅಲ್ಲಿಗೆ ಬರಲಿಕ್ಕೆ ನಾನು ಆತನಿಗೆ ನಿಮಂತ್ರಣಕೊಟ್ಟಿರುತ್ತೇನೆ. ಆಗ ಆತನ ಮೇಲೆ ನಜರನ್ನಿಡುವ ಕೆಲಸ ನಿನ್ನದು. ನನಗೆ ನಾಳೆ ರಾತ್ರಿ ಹನ್ನೊಂದಕ್ಕೆ ತಲೆಶೂಲಿ ಏಳಬಹುದಾಗಿದೆ. ಆತ ಆಗಲೆ ಹಿಂದಿರುಗುತ್ತಾನೆ.

ಕೂಡಲೆ ಡಚ್ಚ ತನ್ನ ವಸ್ತ್ರಗಳಲ್ಲಿ ಬಚ್ಚಿಟ್ಟಿದ್ದ ಒಂದು ಬಹು ದೀರ್ಘ ಚೂರಿ ತೆಗೆದು, ಕೈಯಲ್ಲಿ ಹಿಡಿದು, ಅಭಿನಯಪೂರ್ವಕವಾಗಿ:-ಆ ಸುಸಂಧಿಯಲ್ಲಿ ಈ ಚೂರಿಯ ಸಹಾಯದಿಂದ ನಾನು ಆತನನ್ನು ಈ ಪತ್ತೆದಾರಿಕೆಯ ಜೀವನದಿಂದ ಒಮ್ಮೆಲೆ ಮುಕ್ತಗೊಳಿಸಿಬಿಡುವೆನು. ಸುಸಮಯ ಮಾತ್ರ ಪ್ರಾಪ್ತವಾಗಬೇಕು. ಆತನನ್ನು ಕೊಲ್ಲಬೇಕೆಂಬ ಸೇಡಿನ ಜ್ವಾಲೆ ನನ್ನ ಅಂತರಂಗದಲ್ಲಿ ಹಗಲು-ರಾತ್ರಿ ಧಗಧಗನೆ ಉರಿಯುತ್ತಲಿದೆ. ಆತನಿಂದ ನನಗುಂಟಾದ ಐದು ವರ್ಷಗಳ ಕಠಿಣ ಸಜವನ್ನು ನಾನು ಸಹಜವಾಗಿ ಮರೆಯಲೊ? ಅಷ್ಟರಲ್ಲಿ ಖಟ್‌ಖಡಲ್ಲೆಂಬ ಸಪ್ಪಳವಾಯಿತು; ಹಾಗು ಆ ಕೋಣೆಯ ಮೇಲಿನ ಹಲಿಗೆ ಹೊಂದಿಸಿದ ಮಾಳಿಗೆಯ ಒಂದು ಭಾಗವು ಒತ್ತಟ್ಟಿಗೆ ಸರಿಯಿತು. ಕೂಡಲೆ ಅಲ್ಲಿಂದ ಒಬ್ಬ ತೀರ ಕುಳ್ಳಾದ, ಗೇಟಿಯಂತಹ ತರುಣ ಇಳಿದು ಬಂದು, ಆರ್ಸ್ಟನ್ನನೆದುರಿಗೆ ನಿಂತುಕೊಂಡ. ಆ ತರುಣ ಸಾಹಸ-ಕೌಶಲ್ಯಗಳಲ್ಲಿ ಆಗಿನ ಲಂಡನ್ನಿನೊಳಗಿನ ಎಲ್ಲ ತಸ್ಕರರಲ್ಲಿ ಪ್ರಖ್ಯಾತನಾದುದರಿಂದ, ಆತನು ಆರ್ಟನ್ನನ ಅನುಗ್ರಹಕ್ಕೂ ವಿಶ್ವಾಸಕ್ಕೂ ವಿಶೇಷ ಪಾತ್ರನಾಗಿದ್ದ. ಯಾವಾಗಲೂ ಅವನಿಗೆ ಎಲ್ಲಕ್ಕೂ ಕಠಿಣವಾದ ಕೆಲಸಗಳೇ ಆರ್ಸ್ಟನ್ನನಿಂದ ಒಪ್ಪಿಸಲ್ಪಡುತ್ತಿದ್ದವು. ಆತ ದುಂಡನ್ನ ಮುಖದವನೂ, ಮೈಯಲ್ಲಿ ಕೆಂಪು-ಕಪ್ಪು ಮಿಶ್ರ ಬಣ್ಣಗಳ ಕೋಟು-ಬಟ್ಟೆಗಳನ್ನು ಧರಿಸಿದವನೂ ಆಗಿದ್ದರಿಂದ, ಅವನನ್ನು ಹಳ್ಳಿಯ ನಿವಾಸಿಯಾದ ಯಾವನೊಬ್ಬ ಸಾಮಾನ್ಯ ರೈತನೆಂದು ತಿಳಿಯುವಂತಿದ್ದ. ಆತನ ಹೆಸರು ಮಿಕಿ ಪಿವು ಎಂದಿತ್ತು.

ಮಿಕಿಯು ಬಂದವನೇ ಆರ್ಟನ್ನನಿಗೆ ಪೊಡಮೊಟ್ಟು:-ಧಣಿಯರ ಅಪ್ಪಣೆಯೇನೆಂದು ಕೇಳಿದ. ಕೂಡಲೆ ಆರ್ಟನ್ನ ಹೇಳುತ್ತಾನೆ:-ಮಿಕಿ, ನೀನು ಈಗಿಂದೀಗಲೆ ಲಂಡನ್ನ ನಗರದ ಉತ್ತರ ದಿಕ್ಕಿನ ಆ ಕೊನೆಯ ಓಣಿಯಲ್ಲಿರುವ ಲಾರ್ಡ ಭಿಸ್ಸರ ಮನೆಗೆ ಹೋಗಬೇಕು.

'ಒಡೆಯರೆ, ಲಾರ್ಡ ಭಿಸ್ಸರ ಮನೆಯ ಮೇಲೆ ನನ್ನ ಕಾಕ ದೃಷ್ಟಿ ಇದ್ದೇ ಇದೆ. ಲೇಡೀ ಭಿಸ್ಸಳ (ಕ್ಲಾರೆಯ) ಕೊರಳೊಳಗಿನ ಆ ಬಹು ಮೂಲ್ಯವಾದ ಹೀರಕ ಹಾರ ನನ್ನ ದೃಷ್ಟಿಯನ್ನೆಂದೋ ಎಳೆಕೊಂಡಿರುತ್ತದೆ.'

ಮಿಕಿ, ಆ ಹಾರದ ರತ್ನ ಖಚಿತವಾದ ಗೊಂಚಲು ಬಹು ಮೌಲ್ಯವಾ ದದ್ದು. ಅದು ಈಗ ಎಲ್ಲಿರುತ್ತದೆಂಬದನ್ನು ನೀನು ಅನುಮಾನಿಸಲಾರೆ'

'ಒಡೆಯರೇ, ಇಂದು ಬೆಳಿಗ್ಗೆ ಲೇಡೀ ಭಿಸ್ಸಳು ಆ ಹಾರವನ್ನು ಬ್ಯಾಂಕಿನಿಂದ ತರಿಸಿದ್ದು, ಇಂದಿನ ಲಾರ್ಡ ಬೋರ್ಲರ ಮನೆಯ ಬಾಲಿಗೆ ಅದನ್ನು ಆಕೆ ಹಾಕಿಕೊಂಡು ಹೋಗಿರುತ್ತಾಳೆಂಬದನ್ನು ಬಲ್ಲೆ.'

'ಆದರೆ ಅವಳು ಆ ಹಾರದ ರತ್ನ ಖಚಿತ ಗೊಂಚಲವನ್ನು ಮನೆಯಲ್ಲೇ ಬಿಟ್ಟು ಬಂದಿರುತ್ತಾಳೆಂಬದನ್ನು ನೀನು ಈ ರಿಪೋರ್ಟನಿಂದ ತಿಳಿಯಬಹುದಾಗಿದೆ.' ಹೀಗೆಂದು ಹೇಳಿ, ಆರ್ಟಿನ್ನ ಈ ಮೊದಲಿಗೆ ಡಚ್ಚನಿಂದ ಪಡೆದ ಆ ಕಾಗದ ಆ ಮಿಕಿ ಪಿವೂನ ಕೈಗಿತ್ತ.

ಆ ರತ್ನ ಖಚಿತ ಗೊಂಚಲದ ಸಂಧಾನ ಹತ್ತಲು, ಮಿಕಿಯ ಬಾಯಿಗೆ ನೀರೊಡೆಯಿತು. ಉತ್ಕಟ ಲೋಭದಿಂದ ಆತ ಚಂಚಲನಾಗಿ:-ಧಣಿಯರೇ, ಇಂಥ ದೊಡ್ಡ ಜೀನಸು ಸಿಗುವದೇ ಅಪರೂಪ; ಆದರೆ ಲಾರ್ಡ ಭಿಸ್ಸರ ಮನೆಯ ಆ ಬಡ ಕಾವಲುಗಾರ ನನ್ನ ಆಪ್ತಕೋಟಿಯೊಳಗಿನವ. ನಾಳಿಗೆ ಆತನ ನೌಕರಿ ಹೋದರೆ, ತನ್ನ ಸಣ್ಣ-ಪುಟ್ಟ ಮಕ್ಕಳು-ಮರಿಗಳೊಡನೆ ಆತ ಬಿಕ್ಷೆಯನ್ನೇ ಬೇಡಬೇಕಾಗುವದು! ಆತನ ಆ ಭಾವೀ ವಿಪನ್ನಾವಸ್ಥೆ ನೆನಿಸಲು, ನನ್ನ ಕಣ್ಣಿಗೆ ನೀರು ಬರುವವು.

ಅದನ್ನು ಕೇಳಿ ಆರ್ಟಿನ್ನ ಒಳ್ಳೇ ದರ್ಪದಿಂದ ಅನ್ನುತ್ತಾನೆ:-ಮಿಕಿ, ಮೂರ್ಖಾ, ಈ ಕೆಲಸ ಈಗಲೇ ಮಾಡಿಕೊಂಡು ಬಾ; ನಂತರ ಆ ನಿನ್ನ ಬಂಧುವಿನ ಬಗ್ಗೆ ಕಣ್ಣು ತುಂಬ ಅಳು ಈಗಿನ ಈ ಸುಸಂಧಿ ಮುಂದೆ ದೊರೆಯಲಾರದು. ಲೇಡೀ ಭಿಸ್ಸಳು ಇನ್ನೂ ಆ ನಾಚಿನ ಭರದಲ್ಲಿಯೇ ಇರುತ್ತಾಳೆ. ಆಕೆ ಈಗಲೆ ಮನೆಗೆ ಹೊರಡುವದಿಲ್ಲ. ಆಕೆ ಮನೆಗೆ ತಲುಪುವಷ್ಟರಲ್ಲಿ ನೀನು ನಿನ್ನ ಕೆಲಸ ಪೂರೈಸಿಕೊಂಡು ಬಾ ಆಕೆ ಮನೆಗೆ ಬಂದ ಮೇಲೆ ನಿನ್ನ ಕೆಲಸವಾಗಲಾರದು ಹೂಂ, ಹೊರಡು ಬೇಗ; ಎಂದು ಹೇಳಲು,

'ಧಣಿಯರೇ, ತಾವಿನ್ನು ಆ ಬಗ್ಗೆ ಯಾವ ಆಲೋಚನೆಗೂ ಒಳಗಾಗಬೇಡಿರಿ. ನಾನು ಈ ಕೆಲಸ ಮುಗಿಸಿಕೊಂಡು ಒಂದು ತಾಸಿನೊಳಗೇ ಹಿಂದಿರುಗುವೆ. ಆ ಹತ್ತು ಸಾವಿರ ಪೌಂಡಿನ ಬೆಲೆಯ ರತ್ನ ಖಚಿತ ಗೊಂಚಲು ನನ್ನ ಜೇಬಿನ ಗೌರವವನ್ನು ಬಲಪಡಿಸುವದು.'

'ನಿನಗೆ ಯಾರ ನೆರವಿನದಾದರೂ ಆವಶ್ಯಕತೆಯಿದೆಯೇ?'

"ಒಡೆಯರೇ, ನನಗೆ ಯಾರ ಸಹಾಯವೂ ಬೇಕಿಲ್ಲ. ಈ ಬಗೆಯ ಸಾಮಾನ್ಯ ಕೆಲಸಕ್ಕೂ ಹಿಂಡುಗಟ್ಟಿಕೊಂಡು ಹೋಗುವದಕ್ಕಿಂತ ನಮ್ಮ ಪವಿತ್ರ ವ್ಯವಸಾಯವನ್ನೇ ಬಿಟ್ಟು ಬಿಡುವದು ಲೇಸಲ್ಲವೆ?"

० ० ०

ಅತ್ತ ಹ್ಯಾಮನ್ ಆರ್ಟನ್ನ ಹೊರಟು ಹೋಗಲು, ಇತ್ತ ರಾಬರ್ಟ ಬ್ಲೇಕ ಲಾರ್ಡ ಬೋರ್ಲರ ಮನೆಯ ಪರಿಚಾರಕ ಜನರನ್ನು ಕಂಡು, ಅವರೊಡನೆ ಹಲಕೆಲವು ಮಾತುಗಳನ್ನಾಡುವಷ್ಟರಲ್ಲಿಯೇ ಅವರಾರಿಂದಲೂ ಲಾರ್ಡ ಬೋರ್ಲರ ಮನೆಯ ಗುಪ್ತ ರಹಸ್ಯಗಳು ಪರಿಸ್ಫೋಟವಾಗಲಾರವೆಂಬದು ಅವನಿಗೆ ತಿಳಿಯಿತು. ಬಳಿಕ ಆತ ಮಿಕ್ಕವರ ಕಣ್ಣು ತಪ್ಪಿಸಿ ಅಲ್ಲಿಂದ ಹೊರಬಿದ್ದು, ರಾಜಮಾರ್ಗ ಹಿಡಿದು ಕಾಲು ನಡಿಗೆಯಿಂದಲೇ ಸಾಗಿದ. ಲಾರ್ಡ ಬೋರ್ಲರ ಮನೆಯ ಗುಪ್ತರಹಸ್ಯಗಳು ಹೇಗೆ ಹೊರಬಿದ್ದಿದ್ದವೋ ಅವೆಲ್ಲವೂ ಅವನಿಗೆ ಕಲ್ಪನಾತೀತವಾಗಿ ತೋರಿದವು. ಯಾವಾತ ಆ ಎಲ್ಲ ಗುಪ್ತ ರಹಸ್ಯಗಳನ್ನು ಪ್ರಕಟಗೊಳಿಸುತ್ತಿದ್ದನೋ, ಆತ ಪತ್ತೇದಾರಿಕೆಯಲ್ಲಿ ತನಗಿಂತಲೂ ಶ್ರೇಷ್ಠನಿರಬೇಕೆಂಬದನ್ನು ಬ್ಲೇಕ ಒಡಂಬಡಬೇಕಾಯಿತು. ಅದುವರೆಗೆ ಅಂಥ ಯಾವ ಮಹತ್ವದ ಗುಪ್ತ ರಹಸ್ಯಗಳ ಭೇದವಾಗಿರದಿದ್ದರೂ, ಬೇಗನೆ ಯಾವದೊಂದು ಮಹತ್ವದ ಗುಪ್ತ ಸಂಗತಿ ಸ್ಫೋಟವಾಗಿ, ಶತ್ರು ಪಕ್ಷದವರಿಂದ ಇಂಗ್ಲಂಡದ ರಾಜಕಾರಣಕ್ಕೆ ಅನಿಷ್ಟವೊದಗುವದೆಂದು ಬ್ಲೇಕನಿಗನಿಸಿತು. ಆತ ಈ ಮೊದಲೇ ಲಾರ್ಡರ ಮಂತ್ರಣಾಗಾರವನ್ನೂ ಲಾಯಬ್ರರಿಯನ್ನೂ ಸೂಕ್ಷ್ಮವಾಗಿ ಪರೀಕ್ಷಿಸಿ ನೋಡಿದ್ದ. ಅಲ್ಲಿ ಅವನಿಗೆ ಯಾವ ಛಿದ್ರ-ಕಿಂಡಿಗಳಾಗಲಿ, ಮತ್ತೆ ಯಾವ ಬಗೆಯ ಸಂಶಯವಾಗಲಿ ಕಂಡು ಬಂದಿರಲಿಲ್ಲ. ಆದರಿಂದ ಅಂದು ಯಾರ ಮೇಲೆಯೂ ಯಾವ ಬಗೆಯಿಂದಲೂ ಸಂಶಯ ತಕ್ಕೊಳ್ಳುವ ಯಾವ ಸಾಧನವೂ ಆತನಿಗೆ ಅಲ್ಲಿ ದೊರೆಯಲಿಲ್ಲ.

ಮೇಲೆ ಹೇಳಿದಂತೆ ಆಲೋಚಿಸುತ್ತ ರಾಬರ್ಟ ಬ್ಲೇಕ ಆ ರಾಜಮಾರ್ಗದಲ್ಲಿ ಬಹು ದೂರದ ವರೆಗೆ ನಡೆದು ಹೋದ. ಅಷ್ಟರಲ್ಲಿ ಮುಗಿಲಲ್ಲಿ ಸ್ವಲ್ಪ ಸ್ವಲ್ಪಾಗಿ ಮೋಡಗಳುದ್ಭವಿಸ ತೊಡಗಿದವು; ಹಾಗು ಕ್ಷಣಾರ್ಧದಲ್ಲಿ ಮಳೆಗೂ ಪ್ರಾರಂಭವಾಯಿತು. ಅವನು ದಾರಿಯೊಳಗಿನ ಒಂದು ವೃಕ್ಷದ ಕೆಳಗೆ ನಿಂತು ಬಾಡಿಗೆಯ ಮೋಟರ ಕಾರೇನಾದರೂ ಸಿಗುವದೇನೆಂದು ನಿರೀಕ್ಷಿಸಹತ್ತಿದ;

ಆದರೆ ಆ ಅಪರಾತ್ರಿಯಲ್ಲಿ ಅವನಿಗೊಂದೂ ಕಾರು ಸಿಗಲಿಲ್ಲ. ಅವನು ಹಾಸಿಯ ತೊಯ್ಸಿಸಿಕೊಳ್ಳುತ್ತ ಸಮೀಪದಲ್ಲಿರುವ ವ್ಹಿಕ್ಟೋರಿಯಾ ಸ್ಟೇಶನ್ನಿನ ಕಡೆಗೆ ಓಡಹತ್ತಿದ. ಆತ ಸ್ಟೇಶನ್ನಿಗೆ ತಲುಪಿದಾಗ ಅಲ್ಲಿಂದ ಹೊರಡತಕ್ಕ ಎಲ್ಲ ಬಂಡಿಗಳೂ ಹೊರಟು ಹೋಗಿದ್ದು, ಕಡೆಯದೊಂದೇ ಗಾಡಿ ಹೊರಡುವ ಸಿದ್ಧತೆಯಲ್ಲಿತ್ತು. ಬ್ಲೇಕ ಧಾವಿಸುತ್ತ ಹೋಗಿ ಆ ಗಾಡಿಯನ್ನೇರಲಿಕ್ಕೂ ಅದು 'ಕೊಂಯಿ' ಎಂದು ಹೊರಡಲಿಕ್ಕೂ ಗಂಟೇ ಬಿತ್ತು. ಆ ಗಾಡಿ ನೆಲದ ಮೇಲೆ ಹೋಗತಕ್ಕದ್ದಿದ್ದಿಲ್ಲ; ಭೂಮಿಯೊಳಗಿನ ಸುರಂಗದ ಮಾರ್ಗದಿಂದ ಹೋಗುವದಾಗಿತ್ತು.

ರಾಬರ್ಟ ಬ್ಲೇಕ ಮುಂದಿನ ಸ್ಟೇಶನ್ನಿಗಿಳಿದು, ನೆಲಮನೆಯ ರೇಲ್ವೇ ಸ್ಟೇಶನ್ನಿನಿಂದ ಮೇಲಕ್ಕೇರಿ ಬರುತ್ತಿರಲು, ಅವನ ಘ್ರಾಣೇಂದ್ರಿಯವನ್ನು ಒಂದು ಬಗೆಯ ಅಪ್ರತಿಮ ಸುಗಂಧವು ಪ್ರವೇಶಿಸಿತು. ಆ ಬಗೆಯ ಸುಗಂಧವನ್ನು ಲಾರ್ಡ ಬೋರ್ಲರ ಮನೆಯ ನಾಚಿನ ಪ್ರಸಂಗದಲ್ಲಿಯೂ ಒಮ್ಮೆ ಆಘ್ರಾಣಿಸಿದಂತೆ ಬ್ಲೇಕನಿಗೆ ಸ್ಮರಣೆಯಾಯಿತು. ಅಲ್ಲಿಯ ಆ ವಾಸನೆಯೂ ಈ ವಾಸನೆಯೂ ಒಂದೇ ಎಂಬದು ಅವನಿಗೆ ಗೊತ್ತಾಯಿತು. ಆವೆರಡೂ ಸುಗಂಧಗಳು ರಮಣಿಯರಿಗೆ ಅತ್ಯಂತ ಪ್ರಿಯವಾದ ಕಸ್ತೂರಿ ಮಿಶ್ರಿತ ಪಾವುಡರನವೆಂಬದನ್ನು ಆತ ತರ್ಕಿಸದಿರಲಿಲ್ಲ. ಆಗ ಬ್ಲೇಕ ಅತ್ತಿತ್ತ ಹೊರಳಿ ನೋಡಲು, ಸಮೀಪದಲ್ಲಿಯೇ ಒಬ್ಬ ವೃದ್ಧ ಸ್ತ್ರೀ ಕುಳಿತಿದ್ದಳು. ಆಕೆಯ ವಯಸ್ಸು ಹಾಗು ವಸ್ತ್ರ ಭೂಷಣಗಳ ಮೇಲಿಂದ ಆಕೆ ಅಷ್ಟೊಂದು ವಿಲಾಸಿನಿಯಿರಬಹುದೆಂದು ಬ್ಲೇಕನಿಗೆ ಅನಿಸಲಿಲ್ಲ. ಯಾಕಂದರೆ ಆವಳ ಮುಖಕ್ಕೆ ಪಾವುಡರಿನ ಲೇಪವಿರದೆ, ಒಂದು ಬಗೆಯ ಸಾಮಾನ್ಯ ಗಂಧದ ಲೇಪವಿದ್ದಿತು. ಆ ವೃದ್ಧ ರಮಣಿಯ ಪಕ್ಕದಲ್ಲಿ ಇಬ್ಬರು ಯುವಕರು ಕುಳಿತಿದ್ದರು. ಆವರ ಸಂಭಾಷಣವನ್ನು ಕೇಳಿಕೊಳ್ಳಲು, ಅವರು ಯಾವುದೊಂದು ಕಚೇರಿಯ ಗುಮಾಸ್ತರೆಂಬದು ಬ್ಲೇಕನಿಗ ತಿಳಿಯಿತು. ಅದರಿಂದ ಆ ಸಾಮಾನ್ಯ ಕರಣಿಕರು ಅಷ್ಟೊಂದು ಉತ್ತಮ ತರಗತಿಯ ಸುಗಂಧ ಧರಿಸಲಾರರೆಂಬು ಆತ ತರ್ಕಿಸಿದ. ಆ ಗುಮಾಸ್ತರ ಬಳಿಯಲ್ಲೇ ಒಬ್ಬ ಗಿಡ್ಡ ಮನುಷ್ಯ ಕುಳಿತಿದ್ದ ಆತನ ಮುಖ ದುಂಡಗಿದ್ದು, ದೃಷ್ಟಿ ಚಂಚಲವಾಗಿತ್ತು; ಆತನ ವಸ್ತ್ರ-ಪ್ರಾವರಣಗಳ ಠೀವು ಶ್ರೀಮಂತರಂತಿತ್ತು. ಆ ಗಿಡ್ಡ ಮನುಷ್ಯ ಒಳ್ಳೇ ಚತುರನಿರಬೇಕೆಂದು ಬ್ಲೇಕನಿಗನಿಸಿತು.

ಅಲ್ಪಾವಕಾಶದಲ್ಲಿಯೇ ಬ್ಲೇಕ ತನ್ನ ನಿರ್ದಿಷ್ಟ ಸ್ಥಳಕ್ಕೆ ಹೊರಟು ಹೋಗಲು, ಅವನಿಗೆ ಆ ಅಪ್ರತಿಮ ಸುಗಂಧದ ನೆನಪು ಕೂಡ ಉಳಿಯಲಿಲ್ಲ. ದೈವಾನುಕೂಲದಿಂದ ಅವನಿಗೆ ಅಂಥ ಆ ಅಪರಾತ್ರಿಯಲ್ಲೂ ಒಂದು ಬಾಡಿಗೆಯ ಕಾರು ದೊರೆಯಲು, ಮುಂದೆ ಹತ್ತೇ ನಿಮಿಷಗಳಲ್ಲಿ ಆತ ತನ್ನ ಬಿಡಾರ ತಲುಪಿ, ಇದುವರೆಗೆ ತೊಯ್ದು ತಪ್ಪಡೆಯಾಗಿದ್ದ ತನ್ನ ಉಡಿಗೆ-ತೊಡಿಗೆಗಳನ್ನೆಲ್ಲ ತೆಗೆದಿಟ್ಟು ವಿರಮಿಸಿದ.

ಮರು ದಿನ ಬೆಳಿಗ್ಗೆ ಬ್ಲೇಕ ತನ್ನ ನ್ಯಾರಿ ತೀರಿಸಿಕೊಂಡು ವರ್ತಮಾನ ಪತ್ರಗಳನ್ನೋದ ಹತ್ತಿದ. ಇಷ್ಟರಲ್ಲಿ ಲೇಡೀ ಕ್ಲಾರೆ ಧಾವಿಸುತ್ತ-ಧಾವಿಸುತ್ತ, ಆತನೆಡೆಗೆ ಬಂದಳು. ಆಗ ಆಕೆಯ ಮುಖ ಚಿಂತೆಯಿಂದ ಬಿಳುಪೇರಿತ್ತು; ವಸ್ತ್ರ-ಪ್ರಾವರಣಗಳು ಅಸ್ತವ್ಯಸ್ತವಾಗಿದ್ದವು; ಕಣ್ಣುಗಳೊಳಗಿಂದ ಅಶ್ರುಗಳು ದುರುತ್ತಿರುವಂತೆ ತೋರುತ್ತಿತ್ತು; ತಲೆಯ ಕೂದಲುಗಳೆಲ್ಲ ಅತ್ತಿತ್ತ ಹಾರಾಡುತ್ತಿದ್ದವು. ಕ್ಲಾರೆ ಬಂದವಳೇ ವ್ಯಗ್ರ ಭಾವದಿಂದ ಬ್ಲೇಕನನ್ನು ಕುರಿತು:— ರಾಬರ್ಟ ಬ್ಲೇಕರೇ, ಈ ವಿಪತ್ತಿನೊಳಗಿಂದ ನನ್ನನ್ನು ಪಾರು ಮಾಡಿರಿ. ನನ್ನ ಈ ಗಂಡಾಂತರವನ್ನು ನಿಮ್ಮ ಹೊರತು ಬೇರೆಯವರಿಗೆ ತಿಳಿಸುವದರಿಂದ ಪ್ರಯೋಜನವಿಲ್ಲೆಂಬದನ್ನು ನಾನು ಚೆನ್ನಾಗಿ ಬಲ್ಲೆ. ಈ ಪ್ರಸಂಗದಲ್ಲಿ ನಿಮ್ಮನ್ನು ಬಿಟ್ಟರೆ ಮತ್ತಾರೂ ನನಗೆ ಸಹಾಯಕರ್ತರಿರುವದಿಲ್ಲ. ಆದಕ್ಕೆಂದೇ ನಾನು ನಿಮ್ಮ ಬಳಿಗೆ ಹೀಗೆ ಧಾವಿಸುತ್ತ ಬಂದಿರುತ್ತೇನೆ.

ಕ್ಲಾರೆಯ ಆಗಿನ ಆ ಗಾಬರಿ ಕಂಡು ಬ್ಲೇಕನ ವಿಸ್ಮಯಕ್ಕೆ ಮೇರೆಯೇ ಉಳಿಯಲಿಲ್ಲ. ಆತ ತಟ್ಟನೆ ಎದ್ದು ನಿಂತು, ಅವಳನ್ನ ಭಿವಂದಿಸಿ, ಒಂದು ಕುರ್ಚಿಯ ಮೇಲೆ ಕೂಡ್ರ ಹೇಳಿದ. ಬಳಿಕ ಆತ:—ಲೇಡಿ ಭಿಸ್ಸರೇ, ತಾವು ಯಾವ ಉದ್ದೇಶದಿಂದ ಇಷ್ಟು ಬೆಳಿಗ್ಗೆ ನನ್ನ ಬಳಿಗೆ ಬಂದಿರುತ್ತೀರಿ? ತಮ್ಮ ಈ ಪರಿ ವ್ಯಾಕುಲತೆಯ ಕಾರಣ ತಿಳಿಸಿರಿ; ಸಾಧ್ಯವಾದ ಮಟ್ಟಿಗೂ ನಾನು ನಿಮಗೆ ಸಹಾಯಕನಾಗುವೆ.

ಕ್ಲಾರೆ ಆವೇಶದಿಂದ ಅನ್ನುತ್ತಾಳೆ:-ಇಂಥ ಕೆಲಸ ಅವನೇಕೆ ಮಾಡಿದನು? ಹೇಗೆಯೋ ಮಾಡಿರಲೊಲ್ಲನೇಕೆ; ಬ್ಲೇಕರೇ, ನೀವು ಅವನನ್ನು ಬೇಗನೆ ಪತ್ತೆ ಹಚ್ಚಿರಿ. ಆತನ ಸಾಲ ತೀರಿಸಲಿಕ್ಕೆಂದು ನಾನು ನನ್ನ ಎಲ್ಲ ವಸ್ತ-ಒಡವೆಗಳನ್ನೂ ಮಾರಲಿಕ್ಕೆ ಸಿದ್ಧಳಾಗಿರುವೆನು. ಆತನು ಈಗ ಯಾವದನ್ನು ಕದ್ದೊಯ್ದಿರುವನೋ ಅದನ್ನು ತಂದು ಕೊಡಲಿ.

ಬ್ಲೇಕ ಅನ್ನುತ್ತಾನೆ:– ತಾವು ತಮ್ಮ ಅಣ್ಣನ ವಿಷಯವಾಗಿಯೇ ಮಾತಾಡುತ್ತಿರುವಿರಾ?

'ಅದು ನಿಮಗೆ ತಿಳಿದುದು ಹೇಗೆ? ನಾನು ಆ ರೆನ್‌ಹ್ಯಾಮನ ಸಂಬಂಧವಾಗಿಯೇ ಹೀಗೆ ಹೇಳುತ್ತಿರುವೆನೆಂಬದನ್ನು ನೀವು ಕಲ್ಪಿಸಿದ ಬಗೆ ಹೇಗೆ? ನಮ್ಮ ಪರಿವಾರದೊಳಗಿನ ಕಲಂಕಗಳು ಸರ್ವಸಾಧಾರಣ ಜನರ ಆಲೋಚನೆಯ ವಿಷಯಗಳಾಗಿಲ್ಲ. ಆತನ ಈ ದುಷ್ಕರ್ಮದ ಸಂಗತಿ ಇದುವರೆಗೆ ನಾನಾರ ಮುಂದೂ ಹೇಳಿಲ್ಲವಲ್ಲ?'

'ಲೇಡಿಯವರೇ, ತುಸ ಶಾಂತರಾಗಿರಿ. ನಾನು ನಿಮಗೆ ಎಲ್ಲವನ್ನೂ ವಿವರಿಸಿ ಹೇಳುತ್ತೇನೆ. ನಾನು ಒಂದು ವಿಶಿಷ್ಟ ಕೆಲಸದಲ್ಲಿ ತೊಡಗಿರುವೆ. ಅದರಲ್ಲಿ ನಿಮ್ಮ ಅಣ್ಣನ-ರೆನ್‌ಹ್ಯಾಮನ-ಅಲ್ಪ ಸಂಬಂಧವಿದ್ದುದು ನನಗೆ ಗೊತ್ತಾಯಿತು. ಇದು ನನ್ನ ಮೊದಲನೇ ಮಾತು. ಆತನ ವಿರುದ್ಧವಾದ ಯಾವ ಸಂಗತಿಯೂ ಇದುವರೆಗೆ ನನ್ನ ಕರ್ಣಗೋಚರವಾಗದಿರುವದು ನನ್ನ ಎರಡನೇ ಮಾತಾಗಿದೆ. ನನ್ನ ಮೂರನೇ ಮಾತೇನೆಂದರೆ, ನಿಮ್ಮ ಅಣ್ಣಾ ಇದುವರೆಗೆ ನಿಮಗಾಗಲಿ, ಬೇರೆ ಯಾರಿಗೇ ಆಗಲಿ, ಲಜ್ಜೆ-ಅವಮಾನಗಳುಂಟಾಗುವಂತಹ ಯಾವ ನಿಂದ್ಯ ಕೆಲಸವನ್ನೂ ಮಾಡಿರುವದಿಲ್ಲ.'

ಅದನ್ನು ಕೇಳಿ ಕ್ಲಾರೆ ಒಳ್ಳೇ ಸಿಟ್ಟಿನಿಂದ:-ನಿಮ್ಮ ಈ ಮಾತು ದಿಟವೆಂಬವನ್ನು ಪ್ರಮಾಣಸಹಿತವಾಗಿ ಸಿದ್ಧಗೊಳಿಸಿದರೆ, ನಾನು ನನ್ನ ಪತಿಯ ಲ್ಲಿಯ ಪ್ರೇಮದ ವಿನಃ ಸಕಲ ಐಹಿಕ ಸಂಪತ್ತನ್ನೂ ತೊರೆಯುಲಿಕ್ಕೆ ಸಿದ್ಧಳಿರುತ್ತೇನೆ ನಮ್ಮ ಅಣ್ಣ-ತಂಗಿಯರಲ್ಲಿ ಇದುವರೆಗೆ ಎಂದೂ ವಿತುಷ್ಟತೆಯುಂಟಾಗಿರಲಿಲ್ಲ. ನಾವು ಪರಸ್ಪರರಲ್ಲಿ ಒಳ್ಳೇ ನಂಬಿಗೆಯುಳ್ಳವರಾಗಿದ್ದೆವು. ನಮ್ಮ ಅಣ್ಣನಲ್ಲಿ ಒಂದಾದರೂ ದುರ್ಗುಣವಿದ್ದೀತೆಂಬದು ಕಲ್ಪನಾತೀತವಾಗಿದ್ದಿತು! ಆದರೆ-ಆದರೆ-ಅವನಿಗೆ ಆಕಸ್ಮಾತ್ತಾಗಿ ಈ ಬಗೆಯ ದುರ್ಬುದ್ಧಿಯೇಕುಂಟಾಯಿತೋ ಅದಾರು ಹೇಳಬೇಕು?....ಎಂದು ನುಡಿಯುವಾಗ ಆಕೆಯ ಕಂಠ ಶೋಕಭರದಿಂದ ತುಂಬಿ ಬಂದುದರಿಂದ ಆಕೆ ಅಳಹತ್ತಿದಳು.

ಬ್ಲೇಕ ಅವಳನ್ನು ಸಾಂತ್ವನಗೊಳಿಸಿ:–ಲೇಡಿಯವರೇ, ತಾವೇನೆನ್ನುವಿರೋ ಅದನ್ನೆಲ್ಲ ಬಿಚ್ಚಿ ಒಡನುಡಿಯಿರಿ. ತಮ್ಮ ಮಾನಸಿಕ ಉದ್ವೇಗದ ಕಾರಣವು ನನಗಿದುವರೆಗೂ ಸ್ಪಷ್ಟವಾಗಿ ತಿಳಿದಿಲ್ಲ. ತಾವೇನನ್ನಾದರೂ ಕಳೆಕೊಂಡಿರುತ್ತೀರಾ?

'ನಾನು ನನ್ನ ಹೀರಕ ಹಾರದ ರತ್ನ ಖಚಿತವಾದ ಗೊಂಚಲು ಕಳೆ ಕೊಂಡಿರುತ್ತೇನೆ. ಆ ರತ್ನ ಖಚಿತವಾದ ಗೊಂಚಲು ಲಾರ್ಡ ಭಿಸ್ಸರ ಮನೆ ತನದ ಸರ್ವಶ್ರೇಷ್ಠ ಕುರುಹಾಗಿರುತ್ತದೆ. ಅದು ಅವರ ಮನೆತನದ ಗೌರವದ ಸರ್ವ ಶ್ರೇಷ್ಠ ಸಾಮಗ್ರಿಯಾಗಿರುತ್ತದೆ; ಆದರೆ ನನ್ನ ಮೂರ್ಖತನದ ಮೂಲಕ ಅದನ್ನು ನಾನಿಂದು ಕಳೆಕೊಂಡು ಕುಳಿತಿರುತ್ತೇನೆ.'

'ನಿಮ್ಮ ಅಣ್ಣನೇ ಅದನ್ನು ಕದ್ದಿರುತ್ತಾನೆಂಬದನ್ನು ನೀವು ಕಲ್ಪಿಸಿ ಕೊಂಡ ಕಾರಣವೇನು?'

'ರೆನ್‌ಹ್ಯಾಮನಲ್ಲಿ ಸಂಶಯ ತಾಳುವ ಪ್ರಸಂಗವೊದಗದಿದ್ದರೆ ನನಗೆಷ್ಟು ಸಂತೋಷವಾಗುತ್ತಿತ್ತೆಂಬದನ್ನು ಆ ಭಗವಂತನೇ ಬಲ್ಲ. ನಾನು ಅದನ್ನು ನನ್ನ ಮನೆಯೊಳಗೆ ಎಲ್ಲಿ ಬಚ್ಚಿಟ್ಟು ನಿನ್ನಿನ ಆ ಲಾರ್ಡ ಬೋರ್ಲರ ಮನೆಯ ಬಾಲಿಗೆ ಬಂದಿದ್ದೆನೆಂಬದು ಆತನ ಹೊರ್ತು ಇನ್ನಾರಿಗೂ ಗೊತ್ತಿರಲಿಲ್ಲ; ಇಷ್ಟೇ ಅಲ್ಲ, ನಾನು ಬಚ್ಚಿಟ್ಟ ಆ ಗುಪ್ತ ಸ್ಥಳವನ್ನಾರೂ ಎಂದೂ ತರ್ಕಿಸ ದಂತಹದು. ನಿನ್ನೆ ರಾತ್ರಿ ಲಾರ್ಡ ಬೋರ್ಲರ ಮನೆಯಲ್ಲಿ ನನಗೆ ನನ್ನ ಅಣ್ಣನ ಭೆಟ್ಟಿಯಾಗಲು, ಆತ ನನ್ನನ್ನು ಬೋರ್ಲರ ಮನೆಯ ಆ ಮಂತ್ರಣಾಗಾರಕ್ಕೆ ಕರೆದೊಯ್ದ. ಆಗ ಅಲ್ಲಿ ನಮ್ಮಿಬ್ಬರ ಹೊರತು ಅನ್ಯರಾರೂ ಇರಲಿಲ್ಲ. ಆತ ತನ್ನ ಮಿತ್ರನೊಬ್ಬನ ೨೦೦ ಪೌಂಡಿನ ಸಾಲ ಇಂದು ಬೆಳಿಗ್ಗೆ ೧೦ ಗಂಟೆ ಯೊಳಗಾಗಿ ತೀರಿಸುವ ಹವಾಲಿ ಹೊತ್ತಿದ್ದ. ಅದಕ್ಕಾಗಿ ಆತ ನನ್ನಲ್ಲಿ ೨೦೦ ಪೌಂಡು ಸಾಲ ಕೇಳಿದ. ನನ್ನ ಬಳಿಯಲ್ಲಿ ರೋಖ ಹಣವಿರದ್ದರಿಂದ ನನ್ನೀ ಹೀರಕ ಹಾರ ಅವನೆದುರಿಗೆ ಇಟ್ಟು, ಇದನ್ನು ಯಾರಲ್ಲಾದರೂ ಒತ್ತೀ ಇಟ್ಟು ನಿನ್ನೀ ಪ್ರಸಂಗ ನೀಗಿಕೊಳ್ಳೆಂದು ನಾನು ಆತನಿಗೆ ಹೇಳಿದೆ; ಆದರೆ ಆತ ಅದ ಕ್ಕೊಪ್ಪಲಿಲ್ಲ-'

'ನೀವು ಸ್ವೇಚ್ಛೆಯಿಂದ ಕೊಡ ಹೋದ ಪದಾರ್ಥ ತಕ್ಕೊಳ್ಳಲಾರದ ಆತ ನಿಮ್ಮ ಬೇರೆ ಜೀನಸು ಕದ್ದೊಯ್ದನೆಂಬ ಅಸಂಭವ ಸಂಗತಿ ನೀವು ನಂಬಿದ ಬಗೆ ಹೇಗೆ?'

'ನೀವು ಮೊದಲು ನನ್ನ ಮಾತನ್ನಾದರೂ ಪೂರ್ಣ ಕೇಳಿಕೊಳ್ಳುವಿರಾ? ನಾನು ನನ್ನ ಹೀರಕ ಹಾರ ಆತನೆದುರಿಗೆ ಚಲ್ಲಿ ಕೊಡಲು, ಆತ ಅದನ್ನು ಸ್ವೀಕರಿಸದೆ, ರತ್ನ ಖಚಿತವಾದ ಅದರ ನಡುವಿನ ಗೊಂಚಲವೆಲ್ಲೆಂದು ಕೇಳಿದ. ಅದರ ಕಟ್ಟು ಸಡಿಲಾದ್ದರಿಂದ ಅದು ಎಲ್ಲಿಯಾದರೂ ಬಿದ್ದು ಹೋದೀತೆಂದು

ತಿಳಿದು, ನಾನು ಅದನ್ನು ಮನೆಯಲ್ಲೇ ತೆಗೆದಿಟ್ಟು ಬಂದಿರುತ್ತೇನೆಂದು ಹೇಳಿದೆ. ಆಗ ಆತ ನನಗೆ ಕಳ್ಳರ ಬೆದರಿಕೆ ತೋರಿಸಿ, ಅದನ್ನು ಎಲ್ಲಿ ತೆಗೆದಿಟ್ಟಿರುವೆನೆಂಬದನ್ನು ತಿಳಿಸುವದಕ್ಕಾಗಿ ಒತ್ತಾಯಪಡಿಸಿದ. ಆಗ ನಾನು ಆತನಿಗೆ ಹೇಳಿದ್ದೇನಂದರೆ:–ನನ್ನ ಮೇಜಿನ ಡ್ರಾದೊಳಗಿನ ನನ್ನ ಪಾವುಡರಿನ ಡಬ್ಬಿಯಲ್ಲಿ ಕಾಗದದೊಳಗೆ ಬಚ್ಚಿಟ್ಟಿರುತ್ತೇನೆಂದು.'

'ಸರಿ-ಸರಿ ತಾವು ಅದನ್ನು ಅಂಥ ಸಾಮಾನ್ಯ ಸ್ಥಳದಲ್ಲಿಟ್ಟಿರುವದನ್ನು ಯಾವ ಕಳ್ಳನೂ ಅನುಮಾನಿಸಲಾರ. ಅದಿರಲಿ. ತಾವೀರ್ವರೂ ಆ ಸಂಗತಿ ಎಲ್ಲಿ ಕುಳಿತು ಮಾತಾಡಿದಿರಿ?'

'ಲಾರ್ಡ ಬೋರ್ಲರ ಮನೆಯ ಮಂತ್ರಣಾಗಾರದ ಕೋಣೆಯಲ್ಲಿ'

'ತಾವು ಅಲ್ಲಿಯೇ ಮಾತಾಡಿರಬಹುದೆಂದು ನನಗನಿಸುತ್ತಲೇ ಇತ್ತು.' ಎಂದು ಬ್ಲೇಕ ವಿಸ್ಮಯಭರದಿಂದ ನುಡಿದ.

ಕ್ಲಾರಿ ಬ್ಲೇಕನ ಆ ವಿಸ್ಮಯಪೂರ್ಣ ಪ್ರಶ್ನೆ ಕೇಳಿ:–ಅದೇಕೆ? ಅಲ್ಲಿ ಮಾತಾಡಿದರೆ ಅನ್ಯಾಯವೇನಾಯಿತು? ಆಗಂತೂ ಅಲ್ಲಿ ಯಾರೂ ಇರಲಿಲ್ಲ.

'ಬೇರೆ ಯಾರೂ ಇರಲಿಕ್ಕಿಲ್ಲ; ಆದರೆ ರೆನ್‌ಹ್ಯಾಮು ಮಾತ್ರ ಈ ಕೆಲಸ ಮಾಡಿರುವದಿಲ್ಲೆಂಬದನ್ನು ನಾನು ದೃಢವಾಗಿ ಹೇಳಬಲ್ಲೆ. ಬೇರೆ ಯಾವನೋ ಒಬ್ಬ ನಿಮ್ಮ ಆ ರತ್ನಖಚಿತವಾದ ಗೊಂಚಲು ಕದ್ದಿರಬಹುದಾಗಿದೆ. ನನ್ನ ಈ ಸಿದ್ಧಾಂತ ವಾಕ್ಯದ ವಿವರಣ ಮಾತ್ರ ನೀವು ಈಗಲೆ ನನಗೆ ಕೇಳಬೇಡಿರಿ. ಆ ಗೊಂಚಲು ಕಳವಾಯಿತೆಂಬದನ್ನು ನೀವು ತಿಳಿದುದಾವಾಗ?'

'ನಿನ್ನೆ ರಾತ್ರಿ ನಾಚಿನ ತರುವಾಯ ಮನೆಗೆ ಹೋದ ನಾನು ಅತಿ ಶ್ರಮದಿಂದ ಬಿದ್ದುಕೊಂಡುಬಿಟ್ಟೆ. ಬೆಳಗ್ಗೆ ಎದ್ದವಳೇ ಮೋರೆ ತೊಳೆಕೊಂಡು, ಮೋರೆಗೆ ಪಾವುಡರ ಹಚ್ಚಿಕೊಳ್ಳತೊಡಗಲು, ಆ ಡಬ್ಬಿಯಲ್ಲಿ ಆ ಗೊಂಚಲು ಇರಲಿಲ್ಲ!'

'ಆ ಮೇಲೇನಾಯಿತು?'

'ಪೋಲೀಸರಿಗೆ ವರದಿ ಮುಟ್ಟಿಸಲಿಕ್ಕೆಂದು ನಾನು ನನ್ನ ಪರಿಚಾರಕ ನನ್ನು ಕೂಗತಕ್ಕವಳು; ಪ್ಪರಲ್ಲಿ ಅದನ್ನು ಬಚ್ಚಿಟ್ಟ ಸಂಗತಿ ನನ್ನ ಅಣ್ಣನ ಹೊರತು ಇನ್ನಾರಿಗೂ ಗೊತ್ತಿಲ್ಲೆಂಬದು ನನ್ನ ನೆನಪಿಗೆ ಬಂತು. ಪೋಲೀಸರಿಗೆ ಈ ಸಂಗತಿ ತಿಳಿಸಿದರೆ, ಅವರು ಎಲ್ಲಕ್ಕೂ ಮೊದಲು ನನ್ನ ಅಣ್ಣನನ್ನೇ

ಕಳ್ಳನೆಂದು ಅನುಮಾನಿಸುವರು. ನನ್ನ ಅಣ್ಣನೇ ಕಳ್ಳನೆಂಬದನ್ನು ಕೇಳಿ ಕೊಳ್ಳುವದಕ್ಕಿಂತಲೂ ಬೇರೆ ಹೆಚ್ಚಿನ ಅವಮಾನವಾವದಿರುವದು? ಆದ ಕಾರಣ ನಾನು ಆಗಲೆ ಪೋಲಿಸರಿಗೆ ವರದಿ ಮುಟ್ಟಿಸದೆ, ನೆಟ್ಟಗೆ ನಿಮ್ಮ ಬಳಿಗೆ ಬಂದು ನಿಮಗೀ ಸಂಗತಿ ನಿವೇದಿಸಿರುವೆ. ನಾನು ಹೀಗೆ ಹುಚ್ಚ ಳಂತೆ ಒಮ್ಮೆಲೆ ಮನೆ ಬಿಟ್ಟು ಹೊರಟದ್ದನ್ನು ಕಂಡು, ನನ್ನ ಪರಿಚಾರಕ ವರ್ಗವೆಲ್ಲವೂ ದಂಗು ಬಡಿದು ನಿಂತಿದೆ.

'ತಮ್ಮ ಸಂಗತಿಯನ್ನೆಲ್ಲ ಕೇಳಿಕೊಂಡಂತಾಯಿತು. ಇನ್ನು ನೀವು ನನಗೆ ಏನು ಮಾಡ ಹೇಳುವಿರಿ?' ಎಂಬ ಬ್ಲೇಕನ ಪ್ರಶ್ನೆಗೆ,

'ನಿಮ್ಮಂತೆ ನನ್ನ ಅನುಮಾನವಾದರೂ ನಮ್ಮಣ್ಣನ ಕೆಲಸವಿದ ಲ್ಲೆಂದು, ಅದನ್ನು ಬೇರೆ ಯಾರೋ ಕದ್ದಿರುತ್ತಾರೆ. ಈಗ ತಾವು ನನ್ನ ಆ ಅಲಂಕಾರವನ್ನು ಹುಡುಕಿಕೊಡುವದಲ್ಲದೆ ನಮ್ಮ ಅಣ್ಣನ ನಿರ್ದೋಷತೆ ಯನ್ನು ಸಪ್ರಮಾಣವಾಗಿ ಸಿದ್ಧಪಡಿಸಬೇಕು.'

'ನಿಮ್ಮಣ್ಣನ ನಿರ್ಮಲ ಚಾರಿತ್ರ್ಯಕ್ಕೆ ಈ ಒಗೆಯು ಕಲಂಕವೆಂದೂ ತಟ್ಟದು. ನಾನು ಆತನ ನಿರ್ದೋಷಿತ್ವವನ್ನು ಸಪ್ರಮಾಣವಾಗಿ ಸಿದ್ಧಪಡಿಸ ಬಹುದಾದರೂ ಆ ಅಲಂಕಾರವು ದೊರೆಯುವದೋ ಇಲ್ಲವೋ ಎಂಬದನ್ನು ನಾನೀಗಲೆ ಹೇಳಲಾರೆ; ಆದರೆ ಅದನ್ನು ಶೋಧಿಸುವ ವಿಷಯದಲ್ಲಿ ನಾನು ಹೆಚ್ಚಾಗಿ ಪ್ರಯತ್ನಿಸುವದಿಲ್ಲೆಂತಲ್ಲ.'

'ನನ್ನ ಆ ಹೀರಕ ಹಾರದ ರತ್ನಖಚಿತವಾದಾ ಗೊಂಚಲದ ಬೆಲೆ ೧೦ ಸಾವಿರ ಪೌಂಡುಗಳಿಗೆ ಮೀರಿದ್ದಾಗಿದೆ. ಈ ಬಗೆಯ ಅಮೂಲ್ಯ ರತ್ನಗಳು ಸಮ್ರಾಟರ ಭಂಡಾರದಲ್ಲಿಯೂ ಹೆಚ್ಚಾಗಿಲ್ಲ. ವಂಶಪರಂಪರೆಯಿಂದ ಅದು ನಮ್ಮ ಮನೆತನದ ಗೌರವದ ವಸ್ತುವಾಗಿದೆ; ಆದರೆ ಅದನ್ನು ನಮ್ಮ ಅಣ್ಣ ಕದ್ದಿಲ್ಲವೆಂಬದು ವಿಶ್ವಾಸಾರ್ಹವಾಗಿ ತಿಳಿದರೆ, ಅದು ಹೋದ ಬಗ್ಗೆ ನನಗಾಗಲಿ ನನ್ನ ಗಂಡನಿಗಾಗಲಿ ಅಷ್ಟೊಂದು ಕೆಡಕೆನಿಸಲಿಕ್ಕಿಲ್ಲ.'

'ಈಗ ನಿಮ್ಮ ಅಣ್ಣನೆಲ್ಲಿರುತ್ತಾನೆಂಬದನ್ನು ಬಲ್ಲಿರೋ?'

'ಇಲ್ಲ; ನಾನು ಆತನನ್ನು ಕಾಣುವ ಬಗ್ಗೆ ಪ್ರಯತ್ನಿಸಿಲ್ಲ; ಯಾಕಂ ದರೆ ನಾನು ಬೇರೆ ಯಾವ ವಿಚಾರವನ್ನೂ ಮಾಡದೆ ಒಮ್ಮೆಲೆ ನಿಮ್ಮ ಬಳಿಗೇ ಹೊರಟು ಬಂದೆ. ಈ ನೀಚ ಕೆಲಸವನ್ನು ಅವನೇ ಮಾಡಿರುತ್ತಾನೆಂಬ

ಅನುಮಾನವುಂಟಾದ್ದರಿಂದ, ಅವನನ್ನು ಕಾಣಬೇಕೆಂಬ ಇಚ್ಛೆಯೇ ನನಗಾಗ ಲಿಲ್ಲ; ಆದರೆ ಈಗ ಆತ ನಿರ್ದೋಷಿಯೆಂಬದು ತಿಳಿದದ್ದರಿಂದ, ಇನ್ನು ಆತ ನನ್ನು ನಿಃಶಂಕೆಯಿಂದ ಕಾಣಲಿಚ್ಛಿಸುವೆ. ರಾಬರ್ಟ ಬ್ಲೇಕ, ನೀವು ಆತನ ನಿರ್ದೋಷತೆಯನ್ನು ಸಪ್ರಮಾಣವಾಗಿ ಸಿದ್ಧಗೊಳಿಸುವ ಹಾಗು ಕಳೆದು ಹೋಗಿರುವ ಆ ನನ್ನ ಅಲಂಕಾರವನ್ನು ಪತ್ತೆ ಹಚ್ಚುವ ಕೆಲಸಕ್ಕೆ ಒಪ್ಪಿ ಕೊಂಡಂತಾಯಿತಷ್ಟೆ?'

'ಹೂಂ, ಆ ಕಾರ್ಯಗಳನ್ನು ವಹಿಸಲಿಕ್ಕೆ ಅಡ್ಡಿಯಿಲ್ಲ; ಆದರೆ ನೀವು ಆ ಬಗ್ಗೆ ನನ್ನಲ್ಲಿ ಸಂಪೂರ್ಣ ನಂಬಿಗೆಯಿಟ್ಟರೆ ಹಾಗು ನಾನು ಹೇಳುವಂತೆ ಕೇಳಿದರೆ ಮಾತ್ರ ನಾನು ಅವುಗಳಿಗೆ ಒಪ್ಪಿಕೊಳ್ಳತಕ್ಕವ.'

'ನಿಮ್ಮ ಈ ಕರಾರುಗಳಿಗೆ ನಾನು ಸಂಪೂರ್ಣವಾಗಿ ಸಮ್ಮತಿಸುತ್ತೇನೆ ಈಗ ನಾನು ಮಾಡಬೇಕಾದುದೇನು?' ಎಂದು ಕ್ಲಾರೆ ಉತ್ಸುಕತೆಯಿಂದ ಪ್ರಶ್ನೆಮಾಡಲು,

'ನಡೆಯಿರಿ. ಮೊಟ್ಟಮೊದಲು ನಿಮ್ಮ ಅಣ್ಣನ ಭೇಟಿ ತಕ್ಕೊಂಡು, ಆತನೊಡನೆ ನಿಮ್ಮ ಮನೆಗೆ ಹೋಗಿ, ಎಲ್ಲಿ ಆ ಕಳವಾಗಿದೆಯೋ ಆ ಸ್ಥಳ ವನ್ನು ನಿರೀಕ್ಷಿಸೋಣ' ಎಂದು ಹೇಳಿ, ಬ್ಲೇಕನು ಕ್ಲಾರೆಯೊಡನೆ ಕ್ಯಾಪ್ಟನ್ ರೆನ್‌ಹ್ಯಾಮನ ಮನೆಗೆ ನಡೆದ. ರೆನ್‌ಹ್ಯಾಮನ ಪರಿಚಾರಕ ಆಗ ಅವ ರಿಗೆ ಹೇಳಿದುದೇನಂದರೆ:— ಪೂರ್ವ ರಾತ್ರಿಯಲ್ಲಿ ಲಾರ್ಡ ಬೋರ್ಲರ ಮನೆಯ ಬಾಲಿಗೆ ಹೋದ ರೆನ್‌ಹ್ಯಾಮರು ಮಧ್ಯರಾತ್ರಿಯ ಸುಮಾರಕ್ಕೆ ಅವಸರಾವಸರದಿಂದ ಮನೆಗೆ ಬಂದು, ಪೋಷಾಕು ಬದಲಿಸಿಕೊಂಡು, ಒಂದು ಟ್ರಾವ್ಹಲಿಂಗ ಬ್ಯಾಗ್ ತಕ್ಕೊಂಡು, ಯಾವ ಮೋಟಾರ ಕಾರಿನಿಂದ ಮನೆಗೆ ಬಂದಿದ್ದರೋ ಅದೇ ಕಾರಿನಿಂದ ಹೊರಟು ಹೋದರು. ಎಲ್ಲಿಗೆ ಹೋದ ರೆಂಬದನ್ನು ಇಲ್ಲಿಯವರಾರ ಮುಂದೂ ಹೇಳಿ ಹೋಗಲಿಲ್ಲ.'

ಅದನ್ನು ಕೇಳಿ ಕ್ಲಾರೆ ಭಯಚಕಿತಳಾಗಿ:—ಬ್ಲೇಕರೇ, ಅಂಥ ಅಪ ರಾತ್ರಿಯಲ್ಲಿ ಆತ ಹಾಗೆ ಹೇಳದೆ-ಕೇಳದೆ ಹೊರಟು ಹೋದುದರ ಅರ್ಥ ವೇನು?

'ಲೇಡಿಯವರೇ, ನಿಮ್ಮ ಶಂಕೆ ನಿರರ್ಥಕವಾದದ್ದು. ನಿಮ್ಮ ಅಣ್ಣ ಯಾವ ಚಾಕರಿ ವಹಿಸಿರುವನೋ, ಅದಕ್ಕಾಗಿ ಆತ ಒತ್ತಟ್ಟಿಗೆ ಸ್ಥಿರವಾಗಿ

ನಿಲ್ಲಲಾರೆ. ಪರರಾಷ್ಟ್ರ ವಿಭಾಗದ ಯಾವದೊಂದು ಅತ್ಯವಸರದ ಕೆಲಸಕ್ಕಾಗಿ ಆತ ನಿನ್ನೆ ರಾತ್ರಿಯೇ ಯಾವುದೊಂದು ಪರದೇಶಕ್ಕೆ ಹೊರಟಿರಬಹುದಾಗಿದೆ. ತಾನು ಹೊರಡುವದೆಲ್ಲಿಗೆಂಬದನ್ನು ಅನ್ಯರಿಗೆ ತಿಳಿಸುವದು ಅಸಂಗತವೆಂದು ಆಗ ಅವನಿಗೆ ತೋರಿರಬಹುದಾಗಿದೆ.'

ಬ್ಲೇಕನ ಆ ಮಾತಿನಿಂದ ಕ್ಲಾರೆಗೆ ನಿಜವಾಗಿ ಸಮಾಧಾನವಾಯಿತೋ ಇಲ್ಲವೋ ಹೇಳಲಶಕ್ಯ; ಆದರೂ ಆಕೆ ಆ ಬಗ್ಗೆ ಏನೆಂದೂ ಎದುರು ಮಾತನಾಡಲಿಲ್ಲ. ಬಳಿಕ ಬ್ಲೇಕ ಅವಳೊಡನೆ ಅವಳ ಮನೆಗೆ ನಡೆದ.

ಕ್ಲಾರೆಯ ಶಯನಾಗಾರ ಬಹು ಮೂಲ್ಯ ಸಾಮುಗ್ರಿಗಳಿಂದ ಸುಸಜ್ಜಿತವಾದುದು. ಮೇಜಿನ ಮೇಲೆ ಬಂಗಾರದ ಹಣಿಗೆ, ಬಂಗಾರದ ಮುಲಾಮು ಮಾಡಿದ ಹಿಡಿಕೆಯ ಬ್ರಶ್ ಮತ್ತು ನಾಲ್ಕಾರು ಸಣ್ಣ ಪುಟ್ಟ ಚಿನ್ನದ ಅಲಂಕಾರ ಮುಂತಾದವುಗಳು ಬಿದ್ದಿದ್ದವು; ಆದರೆ ಕಳ್ಳರು ಅವುಗಳನ್ನು ಮುಟ್ಟಿದ್ದಿಲ್ಲ ಸಹ. ಅವರು ಕೇವಲ ಆ ರತ್ನ ಖಚಿತವಾದ ಗೊಂಚಲನ್ನಷ್ಟೇ ಎತ್ತಿಕೊಂಡೊಯ್ಯಲಿಕ್ಕೆ ಬಂದಿದ್ದು, ಅದನ್ನಷ್ಟೇ ತಕ್ಕೊಂಡು ಹೋಗಿದ್ದರು. ಕಳ್ಳರ ಆ ಬಗೆಯ ನಿಸ್ಪೃಹತೆ ವಿಸ್ಮಯಜನಕವಾದದ್ದೇ ಸರಿ! ಕ್ಯಾಪ್ಟನ್ ರೆನ್‌ಹ್ಯಾಮ ತೀರ ನಿರಪರಾಧಿಯೆಂದು ಇದುವರೆಗೆ ಬ್ಲೇಕನಿಗೆ ಅನಿಸುತ್ತಿದ್ದರೂ, ಕ್ಲಾರೆಯ ಕೋಣೆಯೊಳಗಿನ ಆ ಸ್ಥಿತಿ ಕಂಡು ಅವನ ಭಾವನೆ ತುಸ ಶಿಥಿಲವಾಯಿತು; ಆದರೆ ತನ್ನ ಮನಸ್ಸಿನ ಆ ಸಂದೇಹವನ್ನು ಆತ ಕ್ಲಾರೆಗೆ ತಿಳಿಸಲಿಲ್ಲ. ಬಳಿಕ ಕ್ಲಾರೆಯ ಯಾವಳೊಬ್ಬ ವಿಲಾಸಿನಿಯಾದ ಸಖಿ ಕ್ಲಾರೆ ಮನೆಯಲ್ಲಿಲ್ಲದಾಗ ಆ ಸೌಗಂಧಿಕ ಪಾವುಡರನ್ನು ತನ್ನ ಮೋರೆಗೆ ಹಚ್ಚಿಕೊಳ್ಳ ಹೋಗಿ, ಅದರಲ್ಲಿಯ ಆ ರತ್ನಖಚಿತ ಗೊಂಚಲನ್ನು ಅಕಸ್ಮಾತ್ತಾಗಿ ಕಂಡು, ತನ್ನ ಲೋಭ ಹತ್ತೋತ್ತಿಕ್ಕಲಾರದೆ ಅದನ್ನು ಎತ್ತಿಹಾಕಿರಬಹುದೆಂದು ಬ್ಲೇಕನಿಗನಿಸಿತು. ಧನಾಢ್ಯರ ಪರಿವಾರದಲ್ಲಿ ಇಂಥ ದೃಷ್ಟಾಂತಗಳು ಅಪರೂಪವಲ್ಲೆಂಬದನ್ನು ಆತ ಚೆನ್ನಾಗಿ ಬಲ್ಲವನಾಗಿದ್ದ.

ಕ್ಲಾರೆ ಆ ಮೇಜಿನ ಹತ್ತರ ನಿಂತು ಆ ಪಾವುಡರಿನ ಡಬ್ಬಿಯ ಕಡೆಗೆ ಬೊಟ್ಟು ಮಾಡಿ ತೋರಿಸುತ್ತ:-ಬ್ಲೇಕರೇ, ಆ ಗೊಂಚಲನ್ನು ಒಂದು ಕಾಗದದಲ್ಲಿ ಮಡಚಿ, ಈ ಡಬ್ಬಿಯಲ್ಲೇ ಪಾವುಡರಿನ ಕೆಳಗೆ ಮುಚ್ಚಿಟ್ಟಿದ್ದೆ, ಎಂದು ಹೇಳಿದಳು.

ಮೇಜಿನ ಒಂದು ಡ್ರಾದೊಳಗೆ ಒಂದು ಒಳ್ಳೇ ಹೊಳಪಿನ ಸುಂದರ ವಾದ ದುಂಡನ್ನ ಜಪಾನೀ ಡಬ್ಬಿಯಿದ್ದು, ಅದರ ಮುಚ್ಚಳದ ಮೇಲೆ ಒಂದು ಮನೋಹರವಾದ ಚಿತ್ರ ಕೊರೆಯಲ್ಪಟ್ಟಿತ್ತು. ಡಬ್ಬಿಗೆ ಚಿನ್ನದ ಮುಲಾಮು ಮಾಡಲ್ಪಟ್ಟಿತ್ತು.

ಕ್ಲಾರೆ ಅದನ್ನು ಡ್ರಾರದೊಳಗಿಂದ ಹೊರಗೆ ತೆಗೆಯು ಹೋಗಲು, ಬ್ಲೇಕ ವ್ಯಗ್ರಭಾವದಿಂದ:—ಈ ಮೇಜಿನ ಮೇಲಿನ ಯಾವ ಒಡವೆಗೂ ಕೈಹಚ್ಚಬೇಡಿರಿ. ನಾನು ಇವುಗಳನ್ನು ಇದ್ದ ಸ್ಥಿತಿಯಲ್ಲೇ ಪರೀಕ್ಷಿಸಬೇಕಾ ಗಿದೆ; ಹೀಗೆಂದು ಹೇಳಿ, ಅವನೂ ಯಾವ ಒಡವೆಗೂ ಕೈಹಚ್ಚದೆ ದೂರಿ ನಿಂದಲೇ ಪ್ರತಿಯೊಂದನ್ನೂ ಸೂಕ್ಷ್ಮವಾಗಿ ನೋಡಹತ್ತಿದನು. ಬಳಿಕ ಅವನು ತನ್ನ ಮನಸ್ಸಿನಲ್ಲಿ ಏನನ್ನೋ ಯೋಚಿಸಿ, ಆ ಪಾವುಡರಿನ ಡಬ್ಬಿ ಯನ್ನು ಕೈಯಲ್ಲಿ ಹಿಡಿದು ಆದರ ಮುಚ್ಚಳವನ್ನು ತೆಗೆದನು; ಮತ್ತು ಎರಡೆ ರಡು, ಮೂರು ಮೂರು ಸಾರೆ ಆ ಪಾವುಡರನ್ನು ಅಘ್ರಾಣಿಸಿದನು. ಆ ಡಬ್ಬಿಯ ಮೂರರಲ್ಲೊಂದು ಭಾಗವು ತೆರವಿತ್ತು. ಕ್ಲಾರೆಯು ತೀಕ್ಷ್ಣ ದೃಷ್ಟಿಯಿಂದ ಬ್ಲೇಕನ ಮುಖಭಾವವನ್ನು ನಿರೀಕ್ಷಿಸುತ್ತಿದ್ದಳು. ಆ ಪಾವು ಡರನ್ನು ಮೂಸಿ ನೋಡಿನೋಡಿದಂತೆ ಯಾವುದೊಂದು ನೆಲೆಯಿಲ್ಲದ ಸಮು ದ್ರದ ನೆಲೆಹತ್ತಿದರೆ ಹೇಗಾಗುವದೋ, ಹಾಗೆಯೇ ಆತನ ದೃಷ್ಟಿ ಪ್ರದೀಪ್ತ ವಾಗಹತ್ತಿತು; ಮುಖಚರ್ಯೆ ಪರಿವರ್ತನಗೊಳ್ಳಲಾರಂಭಿಸಿತು.

ಆಗ ಕ್ಲಾರೆ ಕೇಳುತ್ತಾಳೆ:—ನಿಮಗೆ ರಹಸ್ಯವೇನೋ ಗೊತ್ತಾಗಿರು ವಂತೆ ತೋರುವದಲ್ಲ?

ಬ್ಲೇಕ ತನ್ನ ಮೋರೆಯನ್ನೆತ್ತಿ ಕ್ಲಾರೆಯ ಮುಖದ ಕಡೆಗೆ ಟಕ ಮಕ ವೆಂದು ನೋಡುತ್ತ:—ನಿನ್ನೆ ರಾತ್ರಿಯಲ್ಲಿ ಹನ್ನೆರಡರ ನಂತರ ಕೆಲ ನಿಮಿಷ ಗಳಲ್ಲೇ ನಾನೂ ನಿಮ್ಮ ಮನೆಯ ಅಲಂಕಾರಗಳನ್ನು ಕದ್ದೊಯ್ದ ಕಳ್ಳನೂ ರೈಲಗಾಡಿಯಲ್ಲಿ ಒಂದೇ ಡಬ್ಬಿಯಲ್ಲಿ ಒಂದೇ ಬೆಂಚಿನ ಮೇಲೆ ಒಬ್ಬರ ಹತ್ತ ರೊಬ್ಬರು ಕುಳಿತು ಭೂಗರ್ಭದೊಳಗಿನ ರೈಲ ಮಾರ್ಗದಿಂದ ಪ್ರವಾಸ ಮಾಡಿರುತ್ತೇವೆ. ಈ ಬಗೆಯ ಸೌಗಂಧಿಕ ಪಾವುಡರನ್ನು ಬೇರೆ ಕೆಲ ಜನ ರಮಣಿಯರಲ್ಲೂ ಕಾಣಬಹುದೆಂಬದೇನೋ ನಿಜ; ಆದರೆ ಯಾವ ಮೈಮೇಲೆ ಈ ಪಾವುಡರದ ವಾಸನೆಯಿದ್ದಿತೋ, ಆತ ಪುರುಷ! ದೊಡ್ಡ ಮನೆತನದ

ಮಹಿಳೆಯರೇ ಉಪಯೋಗಿಸಬಹುದಾದ ಈ ಪಾವುಡರನ್ನುಪಯೋಗಿಸುವ ಅಧಿಕಾರಿ ಆತನಲ್ಲ; ಅಲ್ಲದೆ ಆತನ ದರ್ಜೆಯೂ ಶ್ರೇಷ್ಠವಾಗಿರಲಿಲ್ಲ.

'ಬ್ಲೇಕರೇ, ಈ ಪಾವುಡರು ಪೇಟೆಯಲ್ಲೆಲ್ಲಿಯೂ ದೊರೆಯುವದಿಲ್ಲ. ನನ್ನ ಗಂಡ ನೇಪಾಳವೆಂಬ ಪೌರ್ವಾತ್ಯ ಗುಡ್ಡಗಾಡು ಪ್ರದೇಶದೊಳಗಿನ ಬ್ರಿಟಿಶ ರೆಸಿಡೆಂಟನ ಮುಖಾಂತರ ಅತ್ಯುತ್ಕೃಷ್ಟವಾದ ಕಸ್ತೂರಿಯನ್ನು ತರಿಸಿ, ಪಾರೀಸ ಪಟ್ಟಣದೊಳಗಿನ ಯಾವನೋ ಒಬ್ಬ ಸುಪ್ರಸಿದ್ಧ ಸೌಗಂಧಿಕ ಕಾರಖಾನೆಯವನಿಂದ ಇದನ್ನು ಸ್ಪೆಶಲ್ಲಾಗಿ ಮಾಡಿಸಿ ತಂದು ನನಗೆ ಕಾಣಿಕೆಯಾಗಿ ಕೊಟ್ಟಿರುತ್ತಾನೆ. ಇದರ ಸುಗಂಧದ ವಿಶಿಷ್ಟತೆಯೇ ಇದರ ನಿಜತ್ವದ ದ್ಯೋತಕವಾಗಿದೆ.'

ಆ ಶಯನಾಗಾರದ ಒಂದು ಪಕ್ಕದ ಕಿಟಕಿಯ ಕೆಳಬದಿಗೇ ಉದ್ಯಾನ ವಿದ್ದಿತು. ಬ್ಲೇಕ ಕಿಟಕಿಯ ಹುಕ್ಕು-ಬೋಲ್ಟುಗಳನ್ನು ಪರೀಕ್ಷಿಸಿ ನೋಡಿದ. ಉದ್ಯಾನದ ಕಡೆಯಿಂದಲೇ ಚೂರಿಯಿಂದ ಒಳಗಿನ ಹುಕ್ಕನ್ನು ತಪ್ಪಿಸಿ. ಆ ಕಿಟಕಿ ತೆರೆದಿರುವಂತೆ ಅವನಿಗೆ ಕಾಣಿಸಿತು; ಮತ್ತು ಅತ್ತ ಕಡೆಗೆ ಬೊಗ್ಗಿ ನೋಡಹತ್ತಲು, ಆ ಉದ್ಯಾನದ ಕಡೆಯ ಕೋಣೆಯ ಗೋಡೆಯ ಛಡಿಯ ಮೇಲಿಟ್ಟದ್ದ ಹೂವಿನ ಗಿಡಗಳ ಕುಂಡೆಗಳಲ್ಲಿಯ ಕಿಟಕಿಯ ಕೆಳಗಿನ ಕುಂಡೆಯೊಂದು ಒಡೆದು ಬಿದ್ದಿತ್ತು; ಹಾಗು ಆ ಕಿಟಕಿಯ ದ್ವಾರದಲ್ಲಿ ಆ ಪಾವುಡರಿನ ಕಣಗಳು ಅಲ್ಲಲ್ಲಿ ಉದುರಿಬಿದ್ದಿರುವದು ಸ್ಪಷ್ಟವಾಗಿ ಕಾಣಿಸುತ್ತಿತ್ತು. ಕಳ್ಳನು ಆ ಅಲಂಕಾರ ಹಾಕಿದ ಕಾಗದದ ಪೊಟ್ಣವನ್ನು ಜೇಬಿನಲ್ಲಿ ತುರಿಕಿಕೊಳ್ಳುವಾಗ ಪೊಟ್ಣಕ್ಕೆ ಹತ್ತಿದ ಆ ಸೌಗಂಧಿಕ ಪಾವುಡರು ಅಲ್ಲಲ್ಲಿ ಬಿದ್ದಿರುವದೆಂದೇ ಬ್ಲೇಕನಿಗನಿಸಿತು. ಆತ ತನ್ನ ಆ ಅನುಮಾನವನ್ನು ಕ್ಲಾರೆಗೂ ತಿಳಿಸಿದ.

ಆಗ ಕ್ಲಾರೆ ಅನ್ನುತ್ತಾಳೆ:—ಹೀಗೆ ಎತ್ತರದ ಮೇಲಿನ ಕಿಟಕಿಯ ಬಾಗಿಲ ಹೊರಗಿನಿಂದ ತೆಗೆದು, ಒಳಸೇರಿ ಕಳವು ಮಾಡುವದು ಯಾವನೊಬ್ಬ ನಿಷ್ಣಾತ ಕಳ್ಳನ ಕೆಲಸವೇ ಅಹುದು. ನಮ್ಮಣ್ಣನಾದ ರೆನ್‌ಹ್ಯಾಮು ಇಷ್ಟು ಉದ್ಧ ನೀರಿನವನಲ್ಲ.

'ನಿಮ್ಮಣ್ಣನ ಗುಣಪರೀಕ್ಷೆ ನನಗಿಂತಲೂ ನಿಮಗೆ ಹೆಚ್ಚಾಗಿರಬೇಕು; ಆದರೆ ದುರ್ಭಾಗ್ಯದಿಂದ ಎಲ್ಲಕ್ಕೂ ಮೊದಲು ನೀವೇ ಆತನಲ್ಲಿ ಸಂಶಯ.

ತಾಳಿರುತ್ತೀರಿ. ಅದು ಹೇಗೆಯೇ ಇರಲಿ, ನೀವು ಸಮ್ಮತಿಯನ್ನಿತ್ತರೆ ನಾನು ನಿಮ್ಮ ಉದ್ಯಾನವನ್ನೊಮ್ಮೆ ಚೆನ್ನಾಗಿ ಪರೀಕ್ಷಿಸಬೇಕೆಂದಿರುತ್ತೇನೆ.'

'ಅವಶ್ಯವಾಗಿ ಪರೀಕ್ಷಿಸಿರೆ'ಂದು ಕ್ಲಾರೆ ಹೇಳಲು, ಬ್ಲೇಕ ಆ ಉದ್ಯಾನದಲ್ಲಿ ನಾಲ್ಕಾರು ಸಾರೆ ಅಡ್ಡಾಡಿ ನೋಡಿದ. ಒತ್ತಟ್ಟಿಗಿನ ಒಂದು ಪಾದದ ಗುರ್ತಿನ ಹೊರತು ಅಲ್ಲಿ ಅವನಿಗೇನೂ ಕಾಣಿಸಲಿಲ್ಲ. ಅದು ಯಾವನೊಬ್ಬ ಪರಿಚಾರಕನ ಪದಚಿಹ್ನವಿರಬಹುದೆಂದು ತಿಳಿದು, ಅವನು ಹೆಚ್ಚು ಪೃಚ್ಛಾಪೃಚ್ಛ ಮಾಡದೆ ಅಲ್ಲಿಂದ ಹೊರಟ. ಹೊರಡುವಾಗ ಆತ ಕ್ಲಾರೆಯ ಬಳಿಯಿಂದ ತುಸ ಆ ಸೌಗಂಧಿಕ ಪಾವುಡರನ್ನು ಇಸಕೊಂಡು ಹೋಗಲಿಕ್ಕೆ ಮರೆಯಲಿಲ್ಲ.

ಬಳಿಕ ಬ್ಲೇಕ ಕ್ಲಾರೆಯ ಸಮ್ಮತಿಯ ಮೇರೆಗೆ ಆ ಓಣಿಯೊಳಗಿನ ಪೋಲೀಸ ಚೌಕಿಗೆ ಹೋಗಿ, ಆ ಕಳವಿನ ಫಿರ್ಯಾದಿ ದಾಖಲು ಮಾಡಿದ. ನಂತರ ಆತ ಲಾರ್ಡ ಬೋರ್ಲರ ಮರೆಗೆ ಬಂದ. ಅಲ್ಲಿಂದ ಅರ್ಧಗಂಟೆಯ ಮೇಲೆ ತನ್ನ ಮನೆಗೆ ಹೋಗಿ ನೋಡುತ್ತಾನೆ, ಅಲ್ಲಿ ಸ್ಮಿತ್ಥ ತನ್ನ ಹಾದಿಯನ್ನೇ ಕಾಯುತ್ತಿದ್ದ. ನಂತರ ಆತ ಸ್ಮಿತ್ಥನಿಗೆ ನಡೆದ ಸಂಗತಿಯನ್ನೆಲ್ಲ ತಿಳಿಸಿದ. ಲಾರ್ಡ ಬೋರ್ಲರ ಮನೆಯ ಆ ಸುರಕ್ಷಿತವಾದ ಮಂತ್ರಣಾಗಾರದೊಳಗಿನ ಸುದ್ದಿಗಳೆಲ್ಲ ಒಮ್ಮೆಲೆ ಬಹಿರಂಗವಾಗುತ್ತಿರುವದನ್ನು ಕೇಳಿ, ಸ್ಮಿತ್ಥ ಕೆಲ ಹೊತ್ತು ಆಲೋಚಿಸಿ, ಬಳಿಕ:— 'ಒಡೆಯರೇ, ಇದೊಂದು ಭೂತಾಟಿಕೆಯೆಂದೆನಿಸುತ್ತಿದೆ; ಅಥವಾ ಯಾವನೊಬ್ಬ ಮಾಂತ್ರಿಕನು ಲಾರ್ಡ ಬೋರ್ಲರ ಮನೆಯಲ್ಲಿ ತನ್ನ ಹಸ್ತಕವಾದ ಭೂತವನ್ನಿರಿಸಿ, ಅದರ ಸಹಾಯದಿಂದ ಅಲ್ಲಿಯ ಸಂಗತಿಗಳನ್ನು ತಿಳಿದು ಪ್ರಸಿದ್ಧಿಸುತ್ತಿರಲಿಕ್ಕಿಲ್ಲಷ್ಟೇ? ಇಲ್ಲವೆ ಅಲ್ಲ ಯಾರಾದರೂ 'ಒಂದು ಡಿಕ್ಟೋಫೋನ (Dictaphone) ನ್ನೊಯ್ದು ಬಚ್ಚಿಟ್ಟು, ಅದರ ರೆಕಾರ್ಡುಗಳ ಮೇಲಿಂದ ಅಲ್ಲಿಯ ಸಂಗತಿಯನ್ನು ಪ್ರಸಿದ್ಧಿಸುವರೇ? ಇಲ್ಲವೆ ತಂತಿಯಿಲ್ಲದ 'ಟೆಲಿಗ್ರಾಫ (ರೆಡಿಯೋ) 'ದಿಂದ ಪ್ರಸಿದ್ಧಿಸುತ್ತಿರಬಹುದಾಗಿದೆಯೋ?'

ಸ್ಮಿತ್ಥಾ, 'ಹುಚ್ಚರ ಹಾಗೆ ಇದೇನೆನ್ನುತ್ತಿರುವೆ? ಹಾಗಾಗುವದು ಅಶಕ್ಯ. ನಾನು ಲಾರ್ಡ ಬೋರ್ಲರ ಮಂತ್ರಣಾಗಾರವನ್ನೂ ಲಾಯಬ್ರರಿಯ ಕೋಣೆಯನ್ನೂ ಬಹು ಸೂಕ್ಷ್ಮವಾಗಿ ಪರೀಕ್ಷಿಸಿರುತ್ತೇನೆ; ಆದರೆ ಅಲ್ಲಿ ನನಗೆ ಅಂಥದಾವದೂ ಕಂಡು ಬರಲಿಲ್ಲ.'

‘ಆ ಕಳವಿನ ಬಗ್ಗೆ ತಮ್ಮ ಅಭಿಪ್ರಾಯವೇನು? ತಾವು ಆ ಬಗ್ಗೆ ಮುಂದೇನು ಮಾಡಬೇಕೆಂದಿರುವಿರಿ?’

‘ನಾನು ಆ ಓಣಿಯ ಪೋಲೀಸರಲ್ಲಿ ವರದಿ ಕೊಟ್ಟು ಬಂದಿರುತ್ತೇನೆ. ಆ ಅಲಂಕಾರ ಇಂಗ್ಲಂಡ ದೇಶದಿಂದ ಹೊರಡುವಷ್ಟರಲ್ಲಿ ಅದರ ಪತ್ತೆಯ ವ್ಯವಸ್ಥೆಯಾಗಬೇಕೆಂಬದೇ ನಾನು ಪೋಲೀಸರಿಗೆ ವರದಿ ಕೊಟ್ಟ ಕಾರಣ. ಅಯ್ಯೋ! ನಿನ್ನೆ ರಾತ್ರಿ ಆ ಕಳ್ಳನನ್ನು ಹಿಡಿಯುವ ಆ ಸುಸಂಧಿಯನ್ನು ನಾನು ವ್ಯರ್ಥವಾಗಿ ಕಳಿಕೊಂಡೆನಲ್ಲ! ಆ ಕಳ್ಳ ನನ್ನ ಬಳಿಯಲ್ಲೇ ಕುಳಿತಿದ್ದ. ಆದರೂ ನಾನು ಅವನನ್ನು ಹಿಡಿಯಲಿಲ್ಲ’ ಹೀಗೆಂದು ಹೇಳಿ, ಬ್ಲೇಕ ತನ್ನ ಪೂರ್ವ ರಾತ್ರಿಯ ಪರಿಭ್ರಮಣದ ವೃತ್ತಾಂತವನ್ನೆಲ್ಲ ಸ್ಮಿತ್ಥನಿಗೆ ತಿಳಿಸಿದ; ಹಾಗು ಆತನೊಡನೆ ಆ ಕಳ್ಳನನ್ನು ಹಿಡಿಯುವ ಬಗ್ಗೆ ಯುಕ್ತಿ-ಪ್ರಯುಕ್ತಿಗಳಿಂದ ಯೋಚಿಸ ಹತ್ತಿದ.

ಆಗ ಸ್ಮಿತ್ಥ:—ಈ ನಮ್ಮ ಟೆಪು ನಾಯಿ ಆ ಸುಗಂಧವನ್ನು ಸಹಜವಾಗಿ ಅನುಸರಿಸಬಲ್ಲದು. ಒಡೆಯರೇ, ಈ ಕೆಲಸದಲ್ಲಿ ನಮಗೆ ಟೆಪುವಿನ ಸಹಾಯವಾಗಲಿಕ್ಕಿಲ್ಲವೇ? ತಾವು ಹೇಗೂ ತುಸ ಪಾವುಡರನ್ನು ತಂದೇ ತಂದಿರುತ್ತೀರಿ. ಅತ್ಯಲ್ಪ ಪಾವುಡರನ್ನು ತಾವು ಕೋಟಿಗೆ ಹಚ್ಚಿಕೊಳ್ಳಬೇಕು; ಆ ಮೇಲೆ ಟೆಪುವನ್ನು ತಂದು ಅದಕ್ಕೆ ಆ ಸುಗಂಧವನ್ನು ಆಘ್ರಾಣಿಸೋಣ; ಹಾಗು ಮುಂದೆ ಅದು ಏನು ಮಾಡುತ್ತದೋ ನೋಡೋಣ.

‘ಸ್ಮಿತ್ಥಾ, ನೀನಂದಂತೆ ಪರೀಕ್ಷಿಸಲಿಕ್ಕೆ ಅಡ್ಡಿಯಿಲ್ಲ.’

ಬಳಿಕ ಸ್ಮಿತ್ಥ ತನ್ನ ಟೆಪು ನಾಯಿಯನ್ನು ನಡುಮನೆಗೆ ಕರೆದುಕೊಂಡು ಹೋಗಿ, ಅದಕ್ಕೆ ಆ ಪಾವಡರಿನ ವಾಸನೆ ತೋರಿಸಿದ. ಬಳಿಕ ಅದನ್ನು ಬ್ಲೇಕನ ಕೋಣೆಗೆ ತಂದುಬಿಟ್ಟ. ಅಷ್ಟರಲ್ಲಿ ಬ್ಲೇಕ ತನ್ನ ಕೋಟಿಗೆ ತುಸ ಪಾವುಡರು ಹಚ್ಚಿಕೊಂಡು ಕುಳಿತಿದ್ದ. ಆ ನಾಯಿ ಆ ಕೋಣೆಗೆ ಬಂದದ್ದೇ ಬ್ಲೇಕನ ಕೋಟಿಗೆ ಮೂಗು ಹಚ್ಚಿ ವಾಸನೆ ತಕ್ಕೊಂಡು, ಒಮ್ಮೆಲೆ ‘ಭೊಂ-ಭೊಂ’ ಎಂದು ಒದರಿ, ಆ ಕೋಣೆಯಲ್ಲೆಲ್ಲ ಪ್ರತಿಧ್ವನಿಯನ್ನುಂಟು ಮಾಡಿತು.

ಬಳಿಕ ಸ್ಮಿತ್ಥ ಹುರುಪುಗೊಂಡವನಾಗಿ:— ಒಡೆಯರೇ, ನಾನಿನ್ನು ನನ್ನ ಟಿಪ್ಪುವಿನೊಡನೆ ಆ ಕಳ್ಳನೆಲ್ಲಿದ್ದನೋ ಅಲ್ಲಿಗೇ ಹೊರಡುವೆನು. ಅವನು ಇಲ್ಲಿಂದ ಪೂರ್ವಕ್ಕೆ ಹೋದನೋ-ಪಶ್ಚಿಮಕ್ಕೋ?

'ಇಲ್ಲಿಂದ ಪಶ್ಚಿಮಕ್ಕೇ ಹೋದನು. ಪೂರ್ವಭಾಗದಲ್ಲಿಯೂ ಕಳ್ಳರದೊಂದು ಉಗ್ರಾಣವಿದೆ; ಆದರೆ ನಾನು ನೋಡಿದಂಥ ಕಳ್ಳ ಪೂರ್ವಭಾಗದಲ್ಲಿರಲಾರ. ಪೂರ್ವಭಾಗದ ಕಳ್ಳರ ಗುಂಪಿನಲ್ಲಿ ಉದ್ಧುದ್ಧನ್ನ ಜನರೇ ಇರುವರು. ನಾನು ನೋಡಿದ ಪ್ರಾಣಿ ತೀರ ಕುಳ್ಳ. ಮೇಲಾಗಿ ಆ ಕಳ್ಳ ಕ್ಲಾರೆಯ ಕೋಣೆಯೊಳಗಿನ ಬೇರೆ ಯಾವ ಜೀನಸಿಗೂ ಕೈಹಚ್ಚಿಲ್ಲ. ಆತ ಆ ರತ್ನ ಖಚಿತ ಅಲಂಕಾರವನ್ನು ಕಳವು ಮಾಡಲಿಕ್ಕೆಂದು ಅಲ್ಲಿಗೆ ಹೋಗಿ, ಅವನ್ನಷ್ಟೇ ಎತ್ತಿಕೊಂಡು ಹೋಗಿರುತ್ತಾನೆ. ಆ ಕಳ್ಳ ಸಾಮಾನ್ಯ ತರಗತಿಯವನಾಗಿದ್ದರೆ, ಆತ ಅಲ್ಲಿದ್ದ ಬೇರೆ ಚಿನ್ನ-ಬೆಳ್ಳಿಯ ಸಾಮಾನುಗಳನ್ನೂ ಕದ್ದೊಯ್ಯಬಹುದಾಗಿತ್ತು.

ಕೂಡಲೆ ಸ್ಮಿತ್ಥ ಟಿಪ್ಪುವಿನೊಡನೆ ಬ್ಲೇಕನ ಮನೆಯಿಂದ ಪಶ್ಚಿಮ ದಿಕ್ಕಿನ ಮಾರ್ಗ ಹಿಡಿದು ನಡೆದ.



## ಆನೇ ತೆರೆ. ಟಿಪ್ಪುವಿನ ಭ್ರಮ.

ಬ್ಲೇಕ ತನ್ನ ಕೋಣೆಯಲ್ಲೇ ಕುಳಿತು ಆಲೋಚಿಸಹತ್ತಿದ. ಕ್ಯಾಪ್ಟನ್ ರೆನ್‌ಹ್ಯಾಮ ಸಂಪೂರ್ಣ ನಿರ್ದೋಷಿಯೆಂಬದು ಆತನಿಗೆ ಈ ಮೊದಲೇ ಅನಿಸಿತ್ತಾದರೂ, ಬೋಲ್ಡರ ಆ ಮಂತ್ರಣಾಗಾರದೊಳಗಿನ ಗುಪ್ತರಹಸ್ಯ ಭೇದಕರ ಪತ್ರ ಹಸ್ತಗತವಾಗಲು, ಬ್ಲೇಕನಿಗೆ ರೆನ್‌ಹ್ಯಾಮನ ವಿಷಯದಲ್ಲಿ ಮತ್ತೊಂದು ಬಗೆಯ ಸಂಶಯ ಪ್ರಾದುರ್ಭವಿಸಿತು. ಕ್ಯಾಪ್ಟನ್ನ ಸ್ವತಃ ಕಳವು ಮಾಡಿರದಿದ್ದರೂ, ಆ ಅಲಂಕಾರ ಸಂಬಂಧದ ಸಂಗತಿಯನ್ನು ಮತ್ತಾರ ಮುಂದಾದರೂ ಹೇಳಿರಲಿಕ್ಕಿಲ್ಲೆಂಬದನ್ನು ನಂಬುವ ಬಗೆ ಹೇಗೆ? ಯಾವ ಸಂಗತಿ ಅವನ ಹೊರತು ಅನ್ಯರಾರಿಗೂ ತಿಳಿಯಲಿಕ್ಕೆ ಶಕ್ಯವಿದ್ದಿಲ್ಲವೋ, ಅದನ್ನು ಆತ ಪರಿಸ್ಫೋಟಗೊಳಿಸದಿದ್ದರೆ, ಆ ರತ್ನಖಚಿತವಾದ ಗೊಂಚಲು ಇಷ್ಟು ಆಶ್ಚರ್ಯಕರವಾಗಿ ಕಳೆದು ಹೋದೀತೆಂದು ಅನಿಸುವದಿಲ್ಲ.

ಲಾರ್ಡ ಬೋರ್ಲರ ಮನೆಯ ಗುಪ್ತ ರಹಸ್ಯ ಸ್ಫೋಟನದ ವಿಷಯವಾಗಿಯೂ ಆಗ ಆತನು ತನ್ನ ಮನಸ್ಸಿನಲ್ಲಿ ಯೋಚಿಸಲಾರಂಭಿಸಿದ:-ಅವರ ಮನೆಯ ಗುಪ್ತ ಸಂಗತಿಗಳೆಲ್ಲ ಬಹುತರವಾಗಿ ಕ್ಯಾಪ್ಟನ್ ರೆನ್‌ಹ್ಯಾಮನಿಗೆ ಕೆಲವು, ಡ್ಯೂಕ ವಿಲ್ಯಮ್ಸನಿಗೆ ಕೆಲವು ಹೀಗೆ ಗೊತ್ತಿರಬೇಕು. ಅವರಿಬ್ಬರ ಹೊರತು ಅನ್ಯರಾರಿಗೂ ಅವು ಒಮ್ಮೆಲೆ ತಿಳಿಯಲಶಕ್ಯ. ಅವರಿಬ್ಬರಲ್ಲಿ ಒಬ್ಬರಿಗಾದರೂ ತಿಳಿಯದಿದ್ದ ಯಾವ ಗುಪ್ತ ಸಂಗತಿಯೂ ಇದುವರೆಗೆ ಪ್ರಕಟವಾಗಿರುವದಿಲ್ಲ. ನಾನು ಬೋರ್ಲರ ಮನೆಯ ಮಂತ್ರಣಾಗಾರ ಮತ್ತು ಲಾಯಬ್ರರಿಗಳ ಸಂದು ಮೂಲೆಗಳನ್ನು ಚೆನ್ನಾಗಿ ಪರೀಕ್ಷಿಸಿಯೇ ಯಾವ ವೈಜ್ಞಾನಿಕ ಯಂತ್ರಾದಿಗಳ ಸಹಾಯದಿಂದಾಗಲಿ, ಯಾರಾದರೂ ಮರೆಗೆ ನಿಂತು ಕೇಳಿಯಾಗಲಿ ಆ ಗುಪ್ತ ರಹಸ್ಯಗಳನ್ನು ಪ್ರಕಟಗೊಳಿಸಿಲ್ಲೆಂಬದನ್ನು ನಿರ್ಧರ ಮಾಡಿಕೊಂಡಿರುವೆನು. ಯಾರಿಗೆ ಆ ಸಂಗತಿ ಪ್ರತ್ಯಕ್ಷವಾಗಿ ಗೊತ್ತಿದ್ದವೋ ಅವರೇ ಅವುಗಳನ್ನು ಏನಕೇನ ಪ್ರಕಾರದಿಂದ ಪ್ರಕಟಗೊಳಿಸಿರಲಿಕ್ಕೆ ಸಾಕು. ಲಾರ್ಡ ಬೋರ್ಲರ ಯಾವ ಯಾವ ಗುಪ್ತ ಸಂಗತಿ ಇದುವರೆಗೆ ಪ್ರಕಟವಾಗಿದ್ದವೋ ಅವೆಲ್ಲವುಗಳನ್ನು ಬ್ಲೇಕ ಪುನಃ ಪುನಃ ಚಿಂತಿಸಹತ್ತಿದ. ಅವರ ಯಾವ ಭೃತ್ಯನನ್ನೂ ಆ ಬಗ್ಗೆ ದೋಷಿಯೆಂದು ಆತ ಗ್ರಹಿಸಲಾರದವನಾಗಿದ್ದ. ಸ್ವತಃ ಲಾರ್ಡ ಬೋರ್ಲರ ಮುಖದಿಂದಾಗಲಿ, ಲೇಡೀ ಎಲೀಸೆಯ ಮುಖದಿಂದಾಗಲಿ ಆ ಗುಪ್ತ ಸಂಗತಿ ಪ್ರಕಟವಾಗಿರಬಹುದೆಂದು ನಂಬಲಿಕ್ಕೂ ಆಧಾರವಿರಲಿಲ್ಲ. ಆದುದರಿಂದ ಆ ಗುಪ್ತ ರಹಸ್ಯಸ್ಫೋಟನದ ಬಗ್ಗೆ ಯಾವನಲ್ಲಾದರೂ ಸಂದೇಹ ತಾಳಬೇಕಾದರೆ, ಆತ ಡ್ಯೂಕ ವಿಲ್ಯಮ್ಸನೆಂದಾಗಲಿ ಕ್ಯಾಪ್ಟನ್ ರೆನ್‌ಹ್ಯಾಮನೆಂದಾಗಲಿ ಊಹಿಸಬಹುದಾಗಿದೆ. ಅವರಿಬ್ಬರ ಹೊರತು ಬೇರೆ ಯಾರಾರೂ ಅವನಿಗೆ ದೊರೆಯಲಿಲ್ಲ. ಅವರೀರ್ವರಲ್ಲಿ ಸಂದೇಹ ತಾಳಲಿಕ್ಕೂ ಆತನ ಪ್ರವೃತ್ತಿಯಾಗಲಿಲ್ಲ. ಲಾರ್ಡ ಬೋರ್ಲರು ನಡುವೆ ಕೆಲ ದಿವಸ ಹವೆ ಬದಲಿಸಲಿಕ್ಕೆಂದು ಫ್ರಾನ್ಸ ದೇಶಕ್ಕೆ ಹೋದಾಗ, ತಮ್ಮ ಮನೆಯನ್ನು ಅಮೇರಿಕನ್ ಕೋಟ್ಯಾಧೀಶನಾದ ಮಾರ್ಕ್ವಿಸ ಹ್ಯಾಮನ್ ಆರ್ಟನ್ನನಿಗೆ ಕೊಟ್ಟು ಹೋಗಿದ್ದರೆಂಬದನ್ನು ಬ್ಲೇಕ ಪತ್ತೆ ಹಚ್ಚಿದ್ದ; ಆದರೆ ಆರ್ಟನ್ನನ ವಿಷಯವಾಗಿ ಬೋರ್ಲರ ಮನಸ್ಸಿನಲ್ಲಿ ಉಚ್ಚಭಾವನೆಯಿರದ ಹೊರತು ಅವರು ತಮ್ಮ ಮನೆಯನ್ನು ಆತನಿಗೆಂದೂ ಕೊಡುತ್ತಿರಲಿಲ್ಲ. ಆದರೂ ಬ್ಲೇಕ ಆರ್ಟನ್ನನ ಪೂರ್ವಚರಿತ್ರ ತಿಳಿಯುವ ಸಲುವಾಗಿ ಪ್ರಯತ್ನಿಸಬೇಕೆಂದ,

ಅಲ್ಲದೆ ಆತನ ಮೇಲೆ ಚನ್ನಾಗಿ ದೃಷ್ಟಿಯಿರಿಸಬೇಕೆಂದೂ ಮನಸ್ಸಿನಲ್ಲಿ ನಿರ್ಧರಿಸಿದ. ತಾನು ಹೇಗೂ ಇಂದು ಆರ್ಟೆನ್ನನ ನಿಮಂತ್ರಣದ ಮೇರೆಗೆ ಮಿಲಾನ ಹೋಟಲ್ಲಿಗೆ ಅವನೊಡನೆ ಊಟಕ್ಕೆ ಹೋಗಬೇಕಾದುದರಿಂದ ಆತನ ಸ್ವಭಾವ ಪರೀಕ್ಷೆ ಮಾಡಲಿಕ್ಕೆ ಇದೊಳ್ಳೇ ಸುಸಂಧಿಯೆಂದೂ ಆತ ತಿಳಕೊಂಡ.

ಸ್ಮಿತ್ಥ ಟಿಪು ನಾಯಿಯನ್ನು ಕರೆಕೊಂಡು ಲಂಡನ್ನಪಟ್ಟಣದ ಪಶ್ಚಿಮ ಭಾಗದಲ್ಲಿ ಸಂಚರಿಸುತ್ತ ಒಂದು ದೊಡ್ಡ ಸರ್ಕಲ್ಲಿನಲ್ಲಿ ನಿಂತುಕೊಂಡ. ಅಲ್ಲಿ ಪ್ರಯೋಜನವೇನೂ ಆಗದಿರಲು ಆತ ಅಲ್ಲಿಂದ ಪಶ್ಚಿಮಕ್ಕಿರುವ ಹೈಡನ್ ಪಾರ್ಕಿನೊಳಗಿಂದ ಹಾಯ್ದು ಮತ್ತಿಷ್ಟು ಪಶ್ಚಿಮದಿಕ್ಕಿಗೆ ನಡೆದ; ಮತ್ತು ಯಾವ ಭಾಗದಲ್ಲಿ ಹೆಚ್ಚಾಗಿ ಕ್ಲಬ್ಬುಗಳಿದ್ದವೋ ಅಲ್ಲಿಗೆ ಸಾಗಿದ. ಆತ ಅಲ್ಲಿಯ ಒಂದು ದೊಡ್ಡದಾದ ಕ್ಲಬ್ಬಿನ ಬಾಗಿಲ ಬಳಿಗೆ ಹೋಗಲಿಕ್ಕೂ ಒಂದು ಸುಂದರವಾದ ಮೊಟರ ಅಲ್ಲಿಗೆ ಬಂದು ನಿಲ್ಲಲಿಕ್ಕೂ ಗಂಟೇ ಬಿದ್ದಿತು. ಆ ಕಾರಿನೊಳಗಿಂದ ಮೂವರು ಪ್ರವಾಸಿಗಳು ಇಳಿದರು. ಸ್ಮಿತ್ಥನಿಗೆ ಅವರೊಳಗಿನ ಇಬ್ಬರ ಗುರ್ತು ಹತ್ತಿತು. ಅವರಲ್ಲಿಯ ಒಬ್ಬ ಡ್ಯೂಕ ವಿಲ್ಯಮ್ಸ, ಇನ್ನೊಬ್ಬರು ಲಾರ್ಡ್ ಜೋರ್ಲ ಆಗಿದ್ದರು. ಆ ಮೂರನೇ ವ್ಯಕ್ತಿ ಧಷ್ಟಪುಷ್ಟನೂ, ಬಲಿಷ್ಠನೂ, ದುಂಡು ಮೊಗದವನೂ ಆಗಿದ್ದು, ಮುಖದ ಬಣ್ಣ ತೀರ ಕೆಂಪಾಗಿತ್ತು.

ಆ ಮೂವರೂ ಆಗಂತುಕರು ಆ ಕ್ಲಬ್ಬಿನ ಪ್ರಶಸ್ತಾದ ಪಾವಟಿಗೆಗಳನ್ನೇರಿ ಹೋಗುತ್ತಿದ್ದರು. ಇಷ್ಟರಲ್ಲಿ ಟಿಪು ನಾಯಿಯು ಮೆಲ್ಲ ಮೆಲ್ಲನೆ ಒದರ ಹತ್ತಿತು; ಹಾಗು ಆ ಆಗಂತುಕರನ್ನು ಕಚ್ಚಬೇಕೆಂದು ಸ್ಮಿತ್ಥನ ಕೈಯೊಳಗಿನ ಸರಪಳಿಯನ್ನು ಒಳ್ಳೇ ಬಲದಿಂದ ಕೊಸರಿಕೊಳ್ಳಲು, ಸ್ಮಿತ್ಥ ಅದನ್ನು ಗಟ್ಟಿಯಾಗಿ ಹಿಡಿಯುವಾಗ ಬೀಳತಕ್ಕವನೇ. ಹೇಗಾದರೂ ಮಾಡಿ ಆತ ಸಾವರಿಸಿಕೊಂಡ. ಟಿಪುವು ಸ್ಮಿತ್ಥನನ್ನು ಜಗ್ಗುತ್ತ ಜಗ್ಗುತ್ತ ಆ ಕ್ಲಬ್ಬಿನ ಪಾವಟಿಗೆಗಳ ಬಳಿಗೆ ಒಯ್ದಿತು; ಮತ್ತು ಸ್ಮಿತ್ಥನಿಗೆ ಅಪರಿಚಿತನಾದ ಆ ಮೂರನೇ ವ್ಯಕ್ತಿಯನ್ನು ಕಚ್ಚುವದಕ್ಕಾಗಿ ಆತನ ಹಿಂದೆಯೇ ಹೋಯಿತು. ಆ ನಾಯಿ ಆತನ ಕೋಟಿನ ಹಿಂಬದಿಯನ್ನು ಕಚ್ಚತಕ್ಕದ್ದೇ; ಅಷ್ಟರಲ್ಲಿ ಆ ಗೃಹಸ್ಥ ತುಸ ಬೇರೆ ಕಡೆಗೆ ಸರಿದು ನಿಂತ; ಹಾಗು ಒಮ್ಮೆಲೆ ತನ್ನ ಜಾಕೀಟಿನ ಜೇಬಿಗೆ ಕೈ ಹಾಕಿ, ಒಂದು ಪಿಸ್ತೂಲ ಹೊರಗೆ ತೆಗೆದು, ಕ್ರೂರ ದೃಷ್ಟಿಯಿಂದ ಸ್ಮಿತ್ಥನ ಕಡೆಗೆ ನೋಡುತ್ತ:-ಎಲೆ ಪೋರಾ, ನಿನಗೆ ಬುದ್ಧಿಯಿಲ್ಲವೇ? ಇಷ್ಟು ದೊಡ್ಡ ಕೊಬ್ಬೇ

ರಿದೆ-ನಾಯಿಯನ್ನು ಸಂಬಾಳಿಸಿ ಹಿಡಕೊಂಡು ಹೋಗುವ ಶಕ್ತಿಯಿರದ ನೀನು ಇದನ್ನು ನಿನ್ನ ಸಂ ಡ ತಂದುದ್ದಾದರೂ ಏಕೆ? ಎಂದು ಗದ್ದರಿಸಿ ಕೇಳಿದ.

ಡ್ಯಾಕ ವಿಸ್ಮಯನ್ನು ಅತ್ತ ತಿರುಗಿ ಉಭಯತರ ಕಡೆಗೂ ವಿಸ್ಮಯ ಭರ ದಿಂದ ನೋಡುತ್ತ: ಓಹೋ! ಈತ ರಾಬರ್ಟ ಬ್ಲೇಕರ ಸಹಕಾರಿಯಾದ ಸ್ಮಿತ್ಥ. ಬಹು ಸೂಕ್ಷ್ಮ ವಾಸನೆಯನ್ನು ಹಿಡಿಯುವ ಬ್ಲೇಕರ ಈ ಟಿಪು ನಾಯಿಯನ್ನು ಸಂಗಡ ಕರೆಕೊಂಡು ಈತ ಅಡ್ಡಾಡ ಬಂದಿರಬಹುದಾಗಿದೆ, ಹೀಗೆಂದು ನುಡಿದು, ಟಿಪು ನಾಯಿಯ ತಲೆಯ ಮೇಲೆ ಪ್ರೇಮದಿಂದ ಕೈ ಯಾಡಿಸುತ್ತ:-ಯಾಕಲೇ ಟಿಪ್ಪ್ಯಾ, ಈ ಸಭ್ಯ ಗೃಹಸ್ಥರನ್ನು ಕಂಡು ನಿನ್ನ ಪಿತ್ಥವಿಷ್ಟೆ ಕೆರಳಿದೆ? ಎಂದು ಕೇಳಿದ.

ಡ್ಯಾಕನ ಆ ಭಾಷಣ ಕೇಳಿ ಟಿಪು ತನ್ನ ಈ ಮೊದಲಿನ ಉಗ್ರಭಾವ ವನ್ನು ಬಿಟ್ಟು, ಸಂತೋಷಗೊಂಡು ಆತನ ಕೈಗಳನ್ನು ನೆಕ್ಕಹತ್ತಿದರೂ ಆ ಮೂರನೇ ವ್ಯಕ್ತಿಯ ಗಂಭೀರ ಮುಖವನ್ನೂ ರಕ್ತವರ್ಣದ ನೇತ್ರಗಳನ್ನೂ ನೋಡಿ, ಅದು ಗುರುಗುಟ್ಟುವದನ್ನು ಬಿಡಲಿಲ್ಲ.

ಆಗ ಲಾರ್ಡ ಬೋರ್ಲರು ಆ ನಾಯಿಯ ಮುಖಭಾವವನ್ನು ಕಂಡು: ಏನಿರಿ ಆರ್ಟನ್ನರೇ, ನಿಮ್ಮ ಮೇಲೆ ಈ ಪತ್ತೆದಾರೀ ನಾಯಿಯ ಸಿಟ್ಟೆ ಇಷ್ಟೇಕೆ? ಇಂಥ ನಾಯಿಗಳು ಸಂಸ್ಕಾರ ಬಲದಿಂದ ಕಳ್ಳರು-ಕಾಕರನ್ನು ಕಂಡೊಡನೆಯೇ ಅನೇಕ ಜನಸಮೂಹದೊಳಗಿಂದ ಅವರನ್ನು ಗುರ್ತಿಸಿ, ಪತ್ತೆ ಹಚ್ಚಿ ಕೊಡುವವಲ್ಲವೆ? ಆದರೆ ನೀವು ಒಳ್ಳೇ ಸಭ್ಯಗೃಹಸ್ಥರಾಗಿದ್ದು, ಈ ಈ ನಾಯಿ ನಿಮ್ಮನ್ನು ಕಂಡು ಹೀಗೇಕೆ ಮಾಡುವದು? ಎಂದು ಕೇಳಿದರು.

ಶುಷ್ಕ ನಗೆ ನಗುತ್ತ ಆರ್ಟನ್ನ:-ಅಹುದು; ಅದು ಕಳ್ಳರು-ಕಾಕರನ್ನು ಹಿಡಿಯುವ ಶಕ್ತಿಯುಳ್ಳದ್ದು ನನ್ನನ್ನು ಕಂಡು ಒದರ ಹತ್ತಿದ್ದಕ್ಕಾದರೂ ಅದೇ ಕಾರಣ. ಈ ಚತುಷ್ಪಾದ ಪತ್ತೆದಾರ ನನ್ನನ್ನು ಬದಮಾಷ್ ಜನರ ಯಾವ ವರ್ಗಕ್ಕೆ ಸೇರಿಸುವನೆಂಬದನ್ನು ತಿಳಿಯಲೇ ಬೇಕಾಗಿದೆ. ಈ ನಾಯಿಯ ಒಡೆಯನಾದರೂ ಇದರಂತೆ ಸರ್ವಜ್ಞನೇ ಆಗಿರಲಿಕ್ಕೆಬೇಕು!

-ಮಹಾಶಯರೇ, ನಾನೀ ನಾಯಿಯನ್ನು ಕೇವಲ ಸುತ್ತಾಡಿಸಿಕೊಂಡು ಬರಲಿಕ್ಕೆಂದು ತಂದಿದ್ದೆನೇ ಹೊರತು, ಯಾವ ಕಳ್ಳರು-ಕಾಕರ ಸಂಧಾನಕ್ಕಾ ಗಿಯೂ ತಂದಿರುವದಿಲ್ಲ; ಆದರೆ ಈ ಬಗೆಯಾಗಿ ಇದು ಒಮ್ಮೆಲೆ ನಿಮ್ಮ ಮೈ ಮೇಲೇರಿ ಹೋಗಿ, ತನ್ನ ಬಹದ್ದೂರಿಕೆ ವ್ಯಕ್ತಪಡಿಸೀತೆಂದು ಅನಿಸಿರಲಿಲ್ಲ.

ಇದರಿಂದ ನಿಮ್ಮ ಪರಿಚಯ ಮಾತ್ರ-ಆಗಬೇಕಾದ ಅವಧಿಯ ಮುಂಚೆಯೇ-ಆದಂತಾಯಿತು' ಹೀಗೆಂದು ಸ್ಮಿತ್ಥ ಆರ್ಟೆನ್ನನನ್ನುದ್ದೇಶಿಸಿ ನುಡಿದ. ಆರ್ಟೆನ್ನನೂ ಟಿಪ್ಪುವಿನ ತಲೆಯ ಮೇಲೆ ಪ್ರೇಮಭರದಿಂದ ಕೈಯಾಡಿಸ ಹತ್ತಿದ; ಆ ನಾಯಿ ಮಾತ್ರ ಸುಮ್ಮನಾಗದೆ, ತನ್ನ ಮೋರೆಯನ್ನು ಸೊಟ್ಟಸೊಟ್ಟಾಗಿ ಮಾಡಿ ಗೋಣನ್ನೂ ನಾಲಿಗೆಯನ್ನೂ ಹೊರಿಯುತ್ತಿತ್ತು. ಆಗ ಅದರ ಕುತ್ತಿಗೆಯ ಮೇಲಿನ ಕೂದಲು ಕದಂಬ ಕೇಶರದಾಕಾರ ಧರಿಸಿದ್ದವು!

ಕೂಡಲೆ ಆರ್ಟೆನ್ನ ಅಂಜಿ ತನ್ನ ಕೈಯನ್ನು ಹಿಂದೆಗೆದುಕೊಂಡು:-ಈ ಪಿಕನಾಶಿ ನಾಯಿಗೆ ಆದರ-ಪ್ರೇಮಗಳೆಂಬವು ಗೊತ್ತೇ ಇಲ್ಲ; ಇದು ಬಹು ಅಸಭ್ಯವಾಗಿದೆ, ಎಂದೆನ್ನುತ್ತ ಆ ಕ್ಲಬ್ಬಿನೊಳಗೆ ಸೇರಿದ-

ಬಳಿಕ ಸ್ಮಿತ್ಥ ಟಿಪ್ಪುವನ್ನು ಕರೆಕೊಂಡು ಹಿಂದಿರುಗಿದ. ದಾರಿಯಲ್ಲಿ ಆತ ಆ ನಾಯಿಯನ್ನುದ್ದೇಶಿಸಿ:-ಟಿಪ್ಪು, ಇಂದು ನೀನು ನನ್ನನ್ನೊಳ್ಳೇ ಪೇಚಿಗೆ ಕೆಡವಿದ್ದೆ! ಟೀಪು, ನಿನಗಿಂಥ ಭ್ರಮ ಇದುವರೆಗೆಂದೂ ಆಗಿರಲಿಲ್ಲವಲ್ಲ! ಇಂದಿನ ಸಂದರ್ಭವಾದರೂ ಏನು? ಹೀಗೆಂದು ನುಡಿದು, ನಾಯಿಯೊಡನೆ ಮನೆಗೆ ಬಂದು, ಬ್ಲೇಕನಿಗೆ ಆ ನಾಯಿಯ ಆ ಅದ್ಭುತ ಭ್ರಮವನ್ನು ತಿಳಿಸಿದ. ಆತ ಅದನ್ನೆಲ್ಲ ಒಳ್ಳೇ ಗಂಭೀರ ಭಾವದಿಂದ ಸವಿಸ್ತರವಾಗಿ ಕೇಳಿಕೊಂಡನಂತರ ಹುಬ್ಬುಗಂಟಿಕ್ಕಿ ಸ್ಮಿತ್ಥನಿಗೆ ಹೇಳುತ್ತಾನೆ:-'ನಮ್ಮ ಟಿಪು ನಾಯಿಗೆ ಮಾತಾಡಲಿಕ್ಕೆ ಬರುತ್ತಿದ್ದರೆ ನಾವು ಅದರ ಬಾಯಿಂದ ಈ ವಿಚಿತ್ರ ಪ್ರಕಾರದ ಕಾರಣ ತಿಳಿಯಬಹುದಾಗಿತ್ತು. ದಾರಿಯೊಳಗಿನ ನೂರಾರು ಜನರನ್ನು ಬಿಟ್ಟು ಲಾರ್ಡ ಬೋರ್ಲರ ಸಂಗಡಿಗನನ್ನು ಇದು ಏಕೆ ಕಚ್ಚ ಹೋಯಿತು? ಇದು ಅದ್ಭುತ ವ್ಯಾಪಾರವೇನೋ ನಿಜ. ಮನುಷ್ಯನೇ ಹೀಗೆ ಮಾಡಿದ್ದರೆ, ಆತನಿಗೆ ಭ್ರಮವಾಗಿದೆಯೆಂದು ಸಹಜವಾಗಿ ನಂಬಬಹುದಾಗಿತ್ತು; ಆದರೆ ನಿನ್ನೆದುರಿಗೆ ಹೇಳಲಿಕ್ಕೆ ಅಡ್ಡಿಯಿಲ್ಲ. ಮಾರ್ಕ್ವಿಸ ಹ್ಯಾಮನ್ ಆರ್ಟೆನ್ನನು ಕೋಟ್ಯಾಧೀಶನೇ ಆಗಲೊಲ್ಲನೇಕೆ, ಲಾರ್ಡ ಬೋರ್ಲರ ಸನ್ಮಾನಿತ ಮಿತ್ರನೇ ಆಗಲೊಲ್ಲನೇಕೆ? ನಾನು ಯಾವ ದಿವಸ ಆತನನ್ನು ಎಲ್ಲಕ್ಕೂ ಮೊದಲು ನೋಡಿದೆನೋ, ಅಂದೇ ಅವನ ವಿಷಯವಾಗಿ ನನ್ನಲ್ಲಿ ಪ್ರತಿಕೂಲ ಭಾವನೆಯುಂಟಯಿತು; ಆದರೆ ನಾನು ಆತನೊಡನೆ ಸಂಭಾಷಿಸಿದ ಮೇಲೆ ನನ್ನಲ್ಲಿಯ ಆ ಭಾವನೆ ದೂರಾಯಿತು. ಏನೇ ಇರಲಿ, ಈ ದಿನ ರಾತ್ರಿ ಮಿಲಾನಾ ಹೋಟಲ್ಲಿಗೆ ಆತ ನನ್ನನ್ನು ಊಟಕ್ಕೆ ಕರೆದಿರುತ್ತಾನೆ; ಬರುತ್ತೇನೆಂದೂ ನಾನು ಅವನಿಗೆ ವಚನ

ಬದ್ಧನಾಗಿರುತ್ತೇನೆ. ಈ ಸುಯೋಗದಲ್ಲಿ ನಾನು ಆತನನ್ನು ಚೆನ್ನಾಗಿ ಪರೀಕ್ಷಿಸುವೆನು. ಲೇಡೀ ಭಿಸ್ಸಳ ಆ ಅಲಂಕಾರ ಈ ಆರ್ಟನ್ನನ ಹಸ್ತಗತವಾಗಿಲ್ಲೆಂಬದನ್ನಾದರೂ ಯಾರು ಹೇಳಬೇಕು? ಈ ಧನಕುಬೇರನು ಯಾವದೊಂದು ಪ್ರಾಚೀನ-ಐತಿಹಾಸಿಕ ವಸ್ತುವನ್ನು ನೋಡಿದೊಡನೆಯೇ ಅದು ತನ್ನಲ್ಲಿರಬೇಕೆಂದು ಹಾತೊರೆಯುವನು. ಯಾವದೊಂದು ಸಾಮಾನ್ಯ ಐತಿಹಾಸಿಕ ಜಿನಸನ್ನೂ ಆತ ಬಹು ಮೂಲ್ಯವೆಂದು ತಿಳಿದು, ಅದರ ಬೆಲೆಯನ್ನೇರಿಸಲಿಕ್ಕೆ ಹಿಂದು ಮುಂದೆ ನೋಡುವದಿಲ್ಲ. ಲೇಡೀ ಭಿಸ್ಸಳ ಆ ಅಲಂಕಾರದ ರತ್ನಖಣಿಗಳಿಗೂ ಯಾವದೊಂದು ಇತಿಹಾಸ ಅಂಟಿಕೊಂಡಿರಲಿಕ್ಕೆ ಸಾಕು. ಅದನ್ನು ಬೆಲೆ ಕೊಟ್ಟು ಕೊಳ್ಳುವಂತೆಯೂ ಇಲ್ಲ; ಬೇರೆ ಮಾರ್ಗದಿಂದಲೂ ಅದು ತನ್ನ ಹಸ್ತಗತವಾಗುವದು ಅಶಕ್ಯವಿದ್ದಾಗ ಅವನು ಅದನ್ನು ಹೀಗೆ ಅಪಹರಿಸಲಿಕ್ಕೇ ಬೇಕು. ಈ ಸಂಗತಿಯ ಬಗ್ಗೆ ವಿಸ್ಮಯಪಡುವ ಕಾರಣವಿಲ್ಲ.'

'ಹಾಗಾದರೆ ನಮ್ಮ ಟಿಪು ಮಿಕ್ಕವರನ್ನು ಬಿಟ್ಟು ಅವನನ್ನೇ ಕಚ್ಚ ಹೋಯಿತೇಕೆ? ಸ್ವತಃ ಆರ್ಟನ್ನ ಬೇರೆ ಕಳವು ಮಾಡಲಿಕ್ಕೆ ಹೋಗಿರಲಿಕ್ಕಿಲ್ಲವಷ್ಟೇ? ಯಾವಾತ ಆ ಕಳವು ಮಾಡಿರುವನೋ, ಅವನ ಮೈ-ಕೈಗಳಿಗೆ ಅಥವಾ ವಸ್ತ್ರಪ್ರಾವರಣಗಳಿಗೆ ಆ ಅಲಂಕಾರದ ಪೊಟ್ಟಣದ ಮೇಲಿನ ಪಾವುಡರಿನ ಲೇಪವಾಗಿದ್ದರೂ, ಆರ್ಟನ್ನನ ಮೈ-ಕೈಗಳಿಗಾಗಲಿ ಉಡಿಗೆ ತೊಡಿಗೆಗಳಿಗಾಗಲಿ ಅದು ಹತ್ತಿರುವ ಸಂಭವವಿಲ್ಲವಲ್ಲ?' ಎಂದು ಸ್ಮಿತ್ಥ ಪ್ರಶ್ನೆಮಾಡಲು,

ಆ ಅಲಂಕಾರವನ್ನು ಕಾಗದದಲ್ಲಿ ಸುತ್ತಿ ಆ ಪಾವುಡರಿನ ಡಬ್ಬಿಯಲ್ಲಿಟ್ಟದ್ದರಿಂದ, ಆ ಕಾಗದದ ಪೊಟ್ಟಣಕ್ಕೆ ಹೆಚ್ಚು-ಕಡಿಮೆಯಾದರೂ ಆ ಪಾವುಡರಿನ ಲೇಪವಾಗಿರಲಿಕ್ಕೇ ಬೇಕು; ಹಾಗು ಆ ಅಲಂಕಾರದ ಸಂದು-ಸಂದುಗಳಲ್ಲಿಯೂ ಕೆಲವು ಸೌಗಂಧಿಕ ಕಣಗಳು ಸೇರಿರುವದು ವಿಚಿತ್ರವಾಗಿಲ್ಲ. ಆತ ಆ ಅಲಂಕಾರವನ್ನು ಆ ಕಳ್ಳನಿಂದ ಇಸಕೊಂಡು ತೆಗೆದಿಡುವಾಗ ಆ ಸೌಗಂಧಿಕ ಕಣಗಳು ಆರ್ಟನ್ನನಿಗೂ ಲೇಪಿಸಿರಬಹುದಾಗಿವೆ. ಆ ಅಣು ಮಾತ್ರ ಪಾವುಡರಿನ ಸುಗಂಧ ನಮ್ಮ ಮಾನವರ ಘ್ರಾಣೇಂದ್ರಿಯಗಳನ್ನು ಜಾಗ್ರತಗೊಳಿಸದಿದ್ದರೂ, ಅದು ನನ್ನ ಟಿಪೂನ ನಾಸಿಕವನ್ನು ಅಜಾಗ್ರತಪಿಸಲಾರದು ಅಂತೆಯೇ ಅದು ಇಂದು ಆತನನ್ನು ಹಾಗೆ ಭೀಷಣವಾಗಿ ಕಚ್ಚ ಹೋಗಿದೆ. ಇರಲಿ. ನಾವು ಇನ್ನು ಆ ಆರ್ಟನ್ನನ ಮೇಲೆ ಚೆನ್ನಾಗಿ ನಜರಿಡಲಿಕ್ಕೆ ಮನಸ್ಸು ಮಾಡಿದರೆ ಘಡೆಯಲಾರದು.'

ಈ ಬಗೆಯಾಗಿ ಆಲೋಚಿಸಿದ ನಂತರ ೨-೩ ತಾಸುಗಳ ಮೇಲೆ ಬ್ಲೇಕ ಆರ್ಟನ್ನನ ನಿಮಂತ್ರಣದ ಮೇರೆಗೆ ಮಿಲಾನ ಹೋಟಲ್ಲಿಗೆ ನಡೆದ. ಅಲ್ಲಿಗೆ ತಲುಪುತ್ತಲೆ ಆರ್ಟನ್ನ ಅವನನ್ನು ಬಹು ಆದರದಿಂದ ಬೀಳ್ಕೊಂಡು, ಅವನೊಡನೆ ಸುಸಜ್ಜಿತವಾದ ಭೋಜನದ ಟೇಬಲ್ಲಿಗೆ ಹೋದ; ಹಾಗು ಉಭಯತರೂ ಊಟಕ್ಕೆ ಪ್ರಾರಂಭಿಸಿದರು.

ಉಣ್ಣುವಾಗ ಆರ್ಟನ್ನ ಮುಗುಳ್ನಗೆಯಿಂದ:-ಬ್ಲೇಕರೇ, ನೀವು ನಿಮ್ಮ ನಾಯಿಗೆ ಪತ್ತೇದಾರಿಕೆಯನ್ನು ಕಲಿಸಿಲ್ಲವೆ? ಆ ನಾಯಿ ಬಹು ಧೂರ್ತವಾಗಿರುವಂತೆ ತೋರುತ್ತಿದೆ; ಆದರೆ ನಾನು ಅದರಲ್ಲಿ ಒಂದು ವಿಶಿಷ್ಟ ಗುಣ ಕಂಡು ಹಿಡಿದೆ. ಕಳವು ಮಾಡಿರದಿದ್ದವರನ್ನೂ ಅದು ಕಳ್ಳನೆಂದೇ ಹಿಡಿದು ಕೊಡುವದು! ಇಂದು ಅಪರಾಹ್ಣ ಕಾಲದಲ್ಲಿ ಅದು ನನಗೆ ಕಳ್ಳನ ಸನ್ಮಾನ ಮಾಡಿತೆಂಬದನ್ನು ನೀವಾದರೂ ತಿಳಿದಿರಬಹುದಾಗಿದೆ. ನಾನೇನು ಕಳವು ಮಾಡಿರುವೆನೆಂಬದನ್ನು ಅದು ಬಾಯಿಂದ ಹೇಳಲಿಕ್ಕೆ ಶಕ್ತವಾಗಿದ್ದರೆ, ಆ ನಿಮ್ಮ ಟಿಪು ನಾಯಿ ಒಂದು ಅವತಾರಿಕ ವಿಭೂತಿಯೆಂದೇ ಪ್ರಸಿದ್ಧಿ ಪಡೆಯುತ್ತಿತ್ತು; ಹಾಗು ಬೇರೆ ಪಾಷಾಣ, ಕಾಷ್ಠ ನಿರ್ಮಿತ ಕಾಲ್ಪನಿಕ ದೇವ-ದೇವತೆಗಳಂತೆ, ಈ ನಿಮ್ಮ ನಾಯಿಯೂ ಮೂರ್ತಿಪೂಜಕ ಸಾಮಾಜಿಕರಿಂದ ಪ್ರತಿ ನಿತ್ಯ ಪೂಜೆಗೊಳ್ಳುತ್ತಿತ್ತು.

ಬ್ಲೇಕ ಖೊಖ್ಖೊಕ್ಕೆಂದು ನಗುತ್ತ:-ಮಾರ್ಕ್ವಿಸ ಆರ್ಟನ್ನರೇ, ಪೌರ್ವಾತ್ಯ ದೇಶಗಳೊಳಗಿನ ಮೂರ್ತಿ ಪೂಜಕರ ಧರ್ಮಜ್ಞಾನವೂ ನಿಮ್ಮಲ್ಲಿ ಹೆಚ್ಚಾಗಿದೆಯೆಂದಂತಾಯಿತು. ನಿಮ್ಮಲ್ಲಿಯ ಜ್ಞಾನಭಾಂಡಾರದ ಪರಿಚಯು ನನಗೆ ಎಷ್ಟು ಹೆಚ್ಚಾಗುವದೊ, ಅಷ್ಟು ಮಿಗಿಲಾಗಿ ನಾನು ನಿಮ್ಮನ್ನು ಮೋಹಿಸುವೆ. ನಾನು ನಿಮ್ಮನ್ನು ಸಜೀವ ವಿಶ್ವಕೋಶವೆಂದೇ ಭಾವಿಸಿರುತ್ತೇನೆ. ಟಿಪುವನ್ನು ಕೇವಲ ಆಡ್ಡಾಡಿಸಲಿಕ್ಕೆಂದು ಕರೆದೊಯ್ದು ನಮ್ಮ ಸ್ನೇಹಿತ ಇಂದು ಬಹು ಅವಮಾನ ಹೊಂದಿರುವ. ಆ ಬಗ್ಗೆ ತಾವು ನಮ್ಮನ್ನು ಕ್ಷಮಿಸಬೇಕಾಗಿ ಪ್ರಾರ್ಥನೆ.

'ಆ ನಾಯಿಯು ಮೂಢತನದ ಬಗ್ಗೆ ನೀವು ಕ್ಷಮೆ ಯಾಚಿಸಬೇಕೆ? ನಾನು ಅದಾವುದನ್ನೂ ಮನಸ್ಸಿನಲ್ಲಿ ಹಿಡಿದೇ ಇಲ್ಲ' ಹೀಗೆ ಆರ್ಟನ್ನ ಹೇಳಿದ ಬಳಿಕ ಅವರೀರ್ವರಲ್ಲಿ ಬೇರೆ ಬಗೆಬಗೆಯ ಮಾತು-ಕಥೆಗಳಿಗಾರಂಭವಾಯಿತು. ಆರ್ಟನ್ನ ತನ್ನ ಪೂರ್ವಾಶ್ರಮದಲ್ಲಿಯ ಹಲವು ಅದ್ಭುತ ಘಟನೆಗಳನ್ನು

ಹೇಳಿದ. ಅಮೇರಿಕೆಯಿಂದ ಐದೇ ಡಾಲರು ಸಂಗಡ ತಕ್ಕೊಂಡು ಬಂದಿದ್ದ ತಾನು, ತುಸ ದಿನಗಳಲ್ಲೇ ಹೇಗೆ ಕೋಟ್ಯಾಧೀಶನಾದೆನೆಂಬದನ್ನು ಹೇಳಲಿಕ್ಕೂ ಆತ ಮರೆಯಲಿಲ್ಲ. ಬ್ಲೇಕ ಅವನ ಮಾತಿಗೆ ಸಂದೇಹಗೊಳ್ಳುವಂತೆಯೋ ಇರಲಿಲ್ಲ. ಆದರಿಂದ ಆ ಚತುರಚೂಡಾಮಣಿಯಾದ ಆರ್ಟಿನ್ನ ಕಳ್ಳನೆದುರಿಗೆ ಆ ಸುಪ್ರಸಿದ್ಧ ಪತ್ತೆದಾರನಾದ ರಾಬರ್ಟ ಬ್ಲೇಕ ಪರಾಜಯ ಹೊಂದಿದಂತೆಯೇ ಆಯಿತು.

ಮಾತು-ಮಾತಾಡುತ್ತ ಬ್ಲೇಕ ಇತಿಹಾಸ ಪ್ರಸಿದ್ಧ ವಸ್ತುಗಳ ವಿಷಯದಲ್ಲಿ ಮಾರ್ಕ್ವಿಸನ ಅಭಿಪ್ರಾಯವೇನೆಂದು ಕೇಳಿದ; ಹಾಗು ಸುಪ್ರಸಿದ್ಧಗಳಾದ ಎಷ್ಟೋ ಐತಿಹಾಸಿಕ ಮುತ್ತು-ರತ್ನಗಳ ವಿಷಯವೂ ಆಗ ಹೊಂಟಿತು. ತಾನು ಇಂಗ್ಲಂಡ ದೇಶದೊಳಗಿನ ಎಷ್ಟೋ ಇತಿಹಾಸ ಪ್ರಸಿದ್ಧ ರತ್ನಗಳನ್ನು ಸಂಗ್ರಹಿಸಿ ತನ್ನ ದೇಶಕ್ಕೆ ಕಳಿಸಿರುತ್ತೇನೆಂದು ಆರ್ಟಿನ್ನ ಕ್ರಮವಾಗಿ ಒಪ್ಪಿಕೊಂಡ. ಎಷ್ಟೋ ವಜ್ರ-ವೈಢೂರ್ಯಗಳನ್ನು ಸಾಧು ಮಾರ್ಗದಿಂದ ಸಂಗ್ರಹಿಸದೆ, ಅನ್ಯ ಉಪಾಯದಿಂದ ಪಡೆದೆನೆಂಬದನ್ನೂ ಆತ ನಿಸ್ಸಂಕೋಚವಾಗಿ ಹೇಳಿದ. ಅದನ್ನೆಲ್ಲ ಕೇಳಿಕೊಂಡನಂತರ, ಲೇಡೀ ಭಿಸ್ಸಳ ಆ ಪ್ರಾಚೀನ ರತ್ನ ಖಚಿತಾಲಂಕಾರವನ್ನು ಈ ಆರ್ಟಿನ ತಸ್ಕರನೇ ಹಸ್ತಗತ ಮಾಡಿಕೊಂಡಿರುತ್ತಾನೆಂದು ಬ್ಲೇಕ ನಿಶ್ಚಯಿಸಿದ.

ರಾತ್ರಿಯ ಹನ್ನೊಂದು ಗಂಟೆಯಾಗುತ್ತಲೆ ಆರ್ಟಿನ್ನ ಒಮ್ಮೆಲೆ ತಲೆನೋವಿನ ನೆವ ಹೇಳಿ ಬ್ಲೇಕನಿಗೆ ಮನೆಗೆ ಹೊರಡಲಿಕ್ಕೆ ಅಪ್ಪಣೆ ಕೊಟ್ಟ. ಬ್ಲೇಕ ತನ್ನ ಮನೆ ತಲುಪುವಷ್ಟರಲ್ಲಿಯೇ ನಿರ್ವಿಘ್ನವಾಗಿ ಈತನನ್ನು ತನ್ನ ಅನುಚರರ ಮುಖಾಂತರವಾಗಿ ಈ ಭವಸಾಗರದಿಂದ ಪಾರುಗಾಣಿಸುವೆನೆಂಬ ಭರವಸೆಯಿಂದ ಆಗ ಆತ ಒಳ್ಳೇ ಉತ್ಸುಕನಾದ.



## ೯ನೇ ತೆರೆ—ಎರಡನೇ ಸಾರೆ

ಕಳ್ಳರರಸನಾಗಿದ್ದ ಆರ್ಟೆನ್ನನ ಅನುಚರನಾದ ಡಚ್ಚ ವಿಲಾನಾ ಹೋಟಲ್ಲಿಗೆ ಸಮೀಪದಲ್ಲಿರುವ ಒಂದು ಗಿಡದ ಬೊಡ್ಡೆಯ ಮರೆಗೆ ನಿಂತು ಕೊಂಡು, ಬ್ಲೇಕನ ದಾರೀ ಕಾಯುತ್ತಿದ್ದ. ಬ್ಲೇಕ ರಾತ್ರಿಯ ಹನ್ನೊಂದು ಗಂಟೆಯಾಗುತ್ತಲಿ ಹೋಟಲ್ಲಿನಿಂದ ಹೊರಟು ಪೂರ್ವ ದಿಕ್ಕಿನ ದಾರಿ ಹಿಡಿದು ಸಾಗಿದ. ಆಗ ಆತನ ಮನಸ್ಸು ವಿಚಲಿತವಾಗಿತ್ತು. ಆತ ತುಸ ದೂರ ನಡೆ ಯಲು, ಡಚ್ಚ ಬೇರೆ ಕಡೆಯ ಕಾಲುದಾರಿಯಿಂದ ಅವನನ್ನನುಸರಿಸಲಿಕ್ಕೆ ಪ್ರವೃತ್ತಿಸಿದ. ಬ್ಲೇಕ ಯಾವಾಗ ಒಂದು ಸಂದಿಯ ಓಣಿಯನ್ನು ಹೊಕ್ಕನೋ, ಡಚ್ಚನೂ ಬೇರೊಂದು ಸಂದಿಯಿಂದ ಅವನ ಹಿಂದೆಯೇ ಬಂದ. ತನ್ನನ್ನಾರಾ ದರೂ ಅನುಸರಿಸುತ್ತಿರುವರೇನೆಂಬ ಬಗ್ಗೆ ಬ್ಲೇಕನಿಗೆ ಒಮ್ಮೆಯೂ ಅನು ಮಾನವಾಗಲಿಲ್ಲ. ಡಚ್ಚ ಕ್ರಮವಾಗಿ ಆತನಿಗೆ ಸಮೀಪಿಸುತ್ತ ನಡೆದ; ಹಾಗು ಕಡೆಗೆ ಆತ ತನ್ನ ಒಗಲೊಳಗೆ ಬಚ್ಚಿಟ್ಟಿದ್ದ ಒಂದು ಹದನಾದ ಮೊನೆಯ ನಿಡಿದಾದ ಚೂರಿ ಹೊರತೆಗೆದ. ಡಚ್ಚ ಇಡಿ ಮಾನವ ಜಾತಿಯನ್ನೇ ತನ್ನ ವೈರಿಗಳೆಂದು ಭಾವಿಸುತ್ತಿದ್ದ; ಆದರಲ್ಲಿಯೂ ಬ್ಲೇಕನ ವಿಷಯದ ಆತನ ಸಿಟ್ಟು ಎಲ್ಲಕ್ಕಿಂತಲೂ ಹೆಚ್ಚಾಗಿತ್ತು. ಬ್ಲೇಕನ ಪ್ರಯತ್ನದಿಂದಲೇ ಆತ ಐದು ವರ್ಷ ಗಳ ವರೆಗೆ ಜೇಲಿನಲ್ಲಿ ಕಠಿಣ ಶಿಕ್ಷೆಯನ್ನನುಭವಿಸಿದ್ದ. ಆ ಮಾತು ನೆನಪಾದಾ ಗೆಲ್ಲ ಡಚ್ಚ ಸಿಟ್ಟಿನಿಂದ ಉನ್ಮತ್ತನಂತಾಗುತ್ತಿದ್ದ. ಬ್ಲೇಕನ ರಕ್ತದಿಂದ ತನ್ನ ನಿಡಿದಾದ ಚೂರಿಗೆ ಇಂದು ಮಜ್ಜನ ಮಾಡಿಸುವದನ್ನು ಆತ ನಿರ್ಧರಿಸಿಕೊಂ ಡಿದ್ದ. ಇನ್ನು ತನ್ನ ಸೇಡು ತೀರಿಸಿಕೊಳ್ಳುವೆನೆಂದು ಆತ ಬಹಳ ಸಿಟ್ಟಿನಿಂದ ಬ್ಲೇಕನ ಸಮೀಪಕ್ಕೆ ಬಂದ.

ಇಷ್ಟರಲ್ಲಿ ಆ ಓಣಿಯೊಳಗಿನ ಒಂದು ವ್ಯಕ್ತಿ ಒಂದು ಮನೆಯೊಳಗಿಂದ ಅಕಸ್ಮಾತ್ತಾಗಿ ಹೊರಬಿತ್ತು. ಕೂಡಲೆ ಡಚ್ಚ ತನ್ನ ಆ ಹದನಾದ ಚೂರಿ ಅಡ ಗಿಸಿಕೊಂಡು, ಸರಿಗುಡುಕರಂತೆ ಜೋಲಿ ಹೊಡೆಯುತ್ತ ನಡೆಯಹತ್ತಿದ; ಹಾಗು ಸಮೀಪದಲ್ಲಿಯ ಒಂದು ಕಂದೀಲಿನ ಕಂಬದ ಕವಿನೆಳಲಲ್ಲಿ ಅವಿತು ಕೊಂಡು ನಿಂತ.

ಆ ದಾರಿಕಾರ ದೂರ ಹೊರಟು ಹೋಗಲು, ಡಚ್ಚ ಪುನಃ ಬ್ಲೇಕನ ನ್ನನುಸರಿಸಿದ; ಆದರೆ ಅಷ್ಟರಲ್ಲಿ ಬ್ಲೇಕ ಆ ಸಂದಿಯ ಓಣಿಯನ್ನು ದಾಟಿ ರಾಜಮಾರ್ಗಕ್ಕೆ ಹತ್ತಿದ್ದ. ಆ ಮಾರ್ಗದಲ್ಲಿ ಆಗಲೂ ಬಹು ಜನರ ರಹದಾರಿ

ಯಿತ್ತು. ಬ್ಲೇಕ ಆ ದಾರಿಯಿಂದ ಸಾಗುತ್ತ, ಆ ರಾಜಮಾರ್ಗದಲ್ಲಿರುವ ಒಂದು ಉದ್ಯಾನದ ಒಳಗೆ ಬಂದ. ಡಚ್ಚನೂ ಬೇಗ ಬೇಗನೆ ಕಾಲು ಹಾಕುತ್ತ ಬಂದು, ತನ್ನ ಚೂರಿಯಿಂದ ಅವನನ್ನು ತಿವಿಯುವ ಸುಸಂಧಿ ನಿರೀಕ್ಷಿಸ ತೊಡಗಿದ

ಆ ಉದ್ಯಾನದ ಒಂದು ಮೂಲೆಯಲ್ಲಿ ಒಬ್ಬ ಪೋಲೀಸ ಶಿಪಾಯಿ ನಿಂತುಕೊಂಡಿದ್ದ. ಬ್ಲೇಕ ಸಮೀಪಕ್ಕೆ ಬಂದ ಕೂಡಲೆ ಶಿಪಾಯಿ ಅವನನ್ನು ಗುರ್ತಿಸಿ ಅಭಿವಂದಿಸಿದ. ಬ್ಲೇಕ ಹಾಗೆಯೇ ಮಾತ್ರಿಷ್ಟು ಮುಂದಕ್ಕೆ ಹೋಗಲು ಆ ಶಿಪಾಯಿಯ ದೃಷ್ಟಿ ಡಚ್ಚನ ಮೇಲೆ ಬಿತ್ತು. ಇವನಾವನೋ ಸಾಮಾನ್ಯ ಪಥಿಕನೆಂದು ಭಾವಿಸಿ ಆತ ಡಚ್ಚನನ್ನೇನೂ ಮಾತಾಡಿಸಲಿಲ್ಲ. ಡಚ್ಚ ಥಟ್ಟನೆ ಅವನ ಕಣ್ಣಿಗೆ ಮರೆಯಾದ; ಆದರೆ ಈಗ ನಾನು ಬ್ಲೇಕನನ್ನು ಕೊಂದರೆ, ನಾನು ಆತನನ್ನನುಸರಿಸಿಕೊಂಡು ನಡೆದಿರುವೆನೆಂಬದನ್ನು ತಿಳಿದಿದ್ದ ಈ ಶಿಪಾಯಿ ನನ್ನಲ್ಲೇ ಸಂದೇಹಗೊಂಡು, ನನ್ನನ್ನು ಹಿಡಿಯುವ ಪ್ರಯತ್ನಕ್ಕೆ ಹತ್ತುವನೆಂದು ಡಚ್ಚ ತಿಳಕೊಂಡ. ಈ ಒಳಗಾಗಿ ಬ್ಲೇಕನೂ ಒಂದೆರಡು ಸಾರೆ ಸಹಜವಾಗಿ ಹಿಂಪೆ ಹೊರಳಿ ಹೊರಳಿ ನೋಡಿದ್ದ. ಅದರಿಂದ ತಾನು ಅನುಸರಿಸಿ ನಡೆದಿರುವದು ಬ್ಲೇಕನಿಗೂ ಗೊತ್ತಾಗಿದೆಯೆಂದು ಡಚ್ಚನಿಗನಿಸಿತು. ಹೀಗೆ ವಿಘ್ನಪರಂಪರೆಗಳುಂಟಾಗಲು, ಡಚ್ಚ ಹತಬುದ್ಧನಾದ; ಆದರೂ ಆತ ತನ್ನ ಆ ಸಾಧುಸಂಕಲ್ಪದಿಂದ ಪರಾವೃತ್ತನಾಗಲಿಲ್ಲ. ಅಷ್ಟರಲ್ಲಿ ಬ್ಲೇಕ ಮಾತ್ರೊಂದ ತೀರ ಇಕ್ಕಟ್ಟಿನ ಸಂದಿಯನ್ನು ಪ್ರವೇಶಿಸಲು, ಅದನ್ನು ಕಂಡು ಉತ್ಸಾಹಗೊಂಡ ಡಚ್ಚ ಭರ್ರನೆ ಅವನ ಹಿಂದೆಯೇ ಹೋದ ಆಗ ಆತನ ಮನಸ್ಸಿನಲ್ಲಿ ಆತನ ಪೂರ್ವಸಂಕಲ್ಪ ಒಳ್ಳೇ ಭರದಿಂದ ಜಾಗ್ರುತವಾಯಿತು.

ಹೇಳಿ ಕೇಳಿ ಅದು ಇಕ್ಕಟ್ಟಿನ ಸಂದಿ. ಆ ಸಂದಿಯ ಒಂದು ಕಡೆಗೆ ಒಂದು ಕಾರಖಾನೆಯ ಬಹು ದೊಡ್ಡ ಗೋಡೆ. ಬೇರೆ ಕಡೆಗೆ ವಿಕ್ಷಿಪ್ತಗಳಾದ ಸಣ್ಣ ಪುಟ್ಟ ಗುಡಿಸಲುಗಳು. ಹೀಗಿದ್ದುದರಿಂದ, ಆ ದಾರಿ ತೀರ ನಿರ್ಜನವಾಗಿದ್ದಿತು. ಆ ಸರಿರಾತ್ರಿಯಲ್ಲಿ ಆ ದಾರಿಯಿಂದ ಯಾರೂ ಸಂಚರಿಸುತ್ತಿರಲಿಲ್ಲ ಆ ಓಣಿಯಲ್ಲಿ ದೀಪವೊಂದೂ ಇರಲಿಲ್ಲ. ಆದರಿಂದ ಅಲ್ಲಿ ಕಾರ್ಗತ್ತಲೆ ತನ್ನ ಅವಿಚ್ಛಿನ್ನ ಸಾಮ್ರಾಜ್ಯ ನೆಲೆಗೊಳಿಸಿಬಿಟ್ಟಿತ್ತು. ಆ ಸುಯೋಗದಲ್ಲಿ ಡಚ್ಚ ಒಮ್ಮೆಲೆ ಒಂದೇ ಕಾಲಿನಿಂದ ಹಾರಿ, ಬ್ಲೇಕನ ಹತ್ತಿರಕ್ಕೆ ಹೋದ; ಮತ್ತು ತನ್ನ ಕೈಯೊಳಗಿನ ನಿಡಿದಾದ ಚೂರಿಯನ್ನು ಮೇಲಕ್ಕೆತ್ತಿ, ಅಸ್ಫುಟ ದನಿ

ಯಿಂದ:-ಎಲ್ಹೈ ಘಟಿಂಗ ಪತ್ತೆದಾರನ ಮಗನೇ, ಇನ್ನು ನೀನು ನನ್ನ ಕೈಯಿಂದ ಪಾರಾಗು ನೋಡೋಣ, ಎಂದಂದು, ಇನ್ನು ಚೂರಿ ಹಿರಿಯುತ್ತಿರುವ

ಡಚ್ಚನ ಕೈಯೊಳಗಿನ ಚೂರಿ ಬ್ಲೇಕನ ಮೈಗೆ ತಾಕುವ ಮೊದಲೇ ಡಚ್ಚನ ಬೆನ್ನಮೇಲೆ ಯಾರೋ ಒಳ್ಳೇ ಬಲನಾಗಿ ದೂಡಿದ್ದರಿಂದ ಆತ ನೆಲಕ್ಕೆ ದೊಪ್ಪೆಂದು ಬೊಕ್ಕಬೋರ್ಲಾಗಿ ಬಿದ್ದುಬಿಟ್ಟ! ಚೂರಿ ಸಹಿತವಾದ ಆತನ ಬಲಗೈ ದಾರಿಯೊಳಗಿನ ಕಲ್ಲ ಹಾಸಿಗೆಯ ಮೇಲೆ ವೇಗದಿಂದ ಅಪ್ಪಳಿಸಲು, ಅದರ ಹದನಾದ ಮೊನೆ ಮೊಂಡವಾಗಿ, ಮುಂಭಾಗ ಹಿಡಿಕೆಯ ಕಡೆಗೆ ಮಡಚಿ ಬಿಟ್ಟಿತು.

ತನಗುಂಟಾದ ಆತಂಕದಿಂದ ವಿಸ್ಮಯ ವಿಸ್ಫೂರಿತನಾದ ಡಚ್ಚ, ಮೆಲ್ಲ ಮೆಲ್ಲನೆ ತಲೆಯನ್ನೆತ್ತಿ ನೋಡಲಾಗಿ, ಕೆರಳಿದ ಹುಲಿಯಂತಹ ಒಂದು ಬಹು ದೊಡ್ಡದಾದ ನಾಯಿ ನಾಲಿಗೆ ಹಿರಿದುಕೊಂಡು ತನ್ನ ತಲೆಯ ಹತ್ತರ ನಿಂತು ಕೊಂಡಿತ್ತು. ಆ ಭಯಂಕರವಾದ ಅಂಧಕಾರದಲ್ಲಿಯೂ ಸಿಟ್ಟಿನಿಂದ ಕೆಂಪಡ ರಿದ ಅದರ ಕಣ್ಣು ಹುಲಿಯ ಕಣ್ಣುಗಳಂತೆ ಹೊಳೆಯುತ್ತಿದ್ದವು. ಅದರ ಇಷ್ಟಗಲಾದ ಬಾಯೊಳಗೆ ಡಚ್ಚನ ಕ್ಷುದ್ರವಾದ ಮಸ್ತಕ ಮೂಗು ಕಿವಿ ಸಹಿತ ವಾಗಿ ಹಿಡಿಸಬಹುದಾಗಿತ್ತು. ಬಿದ್ದಸ್ಥಳದಲ್ಲಿಯೇ ಬಿದ್ದು, ಎದ್ದೇಳುವ ಪ್ರಯ ತ್ನಕ್ಕೆ ಪ್ರಾರಂಭಿಸಲು, ಆ ನಾಯಿಯ ಸ್ಫಟಿಕದಂತಹ ಶುಭ್ರವಾಗಿರುವ ಹಲ್ಲುಗಳು ಅವನ ಕುತ್ತಿಗೆಯನ್ನು ಕಚ್ಚುವದಕ್ಕೆ ಪ್ರಾರಂಭಿಸಿದವು. ಕೂಡಲೆ ಡಚ್ಚ ಆರ್ತನಾದನಿಯಿಂದ ಒದರುತ್ತ ಮತ್ತೆ ಬಿದ್ದುಕೊಂಡ. ಆಗ ಆ ನಾಯಿ ತನ್ನ ಮುಂಗಾಲುಗಳೆರಡನ್ನೂ ಆತನ ಬೆನ್ನಿನ ಮೇಲಿಟ್ಟು ಹತ್ತಿಕ್ಕಿ, ಭೊಂ ಭೊಂ ಎಂದು ಒದರಹತ್ತಿತು. ಡಚ್ಚನ ಪ್ರಾಣ ಭಯದಿಂದ ಗುಟುಕು ನೀರು ಕುಡಿಯ ಲಾರಂಭಿಸಿತು. ಆಗ ಆತ ಅಸ್ಫುಟದನಿಯಿಂದ ಅನ್ನುತ್ತಾನೆ:-ಪತ್ತೆದಾರರಾದ ನನ್ನ ಹಡೆದಪ್ಪಾ, ಇನ್ನು ನಾನು ಈ ಬಗೆಯ ನೀಚ ಕೆಲಸವನ್ನೆಂದೂ ಮಾ- ಡೆನು. ಈಗ ಮಾಡಿದ್ದೇ ಶೆಗಣಿ ತಿನ್ನುವ ಕೆಲಸವಾಗಿದೆ. ದಯವಿಟ್ಟು ನೀವು ನಿಮ್ಮ ನಾಯಿಯನ್ನು ಕರೆಕೊಳ್ಳಿರಿ; ತಡ ಮಾಡಿದರೆ ಇದು ನನ್ನ ಶಿರವನ್ನು ಕಚ್ಚಿ ನುಂಗಿ ಬಿಡುವದು!

ಬ್ಲೇಕ ಡಚ್ಚನ ಆ ಪ್ರಾಣಾಂತಿಕ ಆರ್ತ ನಾದದ ಕಡೆಗೆ ಲಕ್ಷ್ಯಗೊಡದೆ: ಟಿಪು, ಈ ಬದಮಾಷ್ ಕೊಲೆಗಡಕ ತಲೆಯೆತ್ತುತ್ತಲೆ ಅದನ್ನು ಕೆಕ್ಕರ್ಲ ಹಣ್ಣಿ ನಂತೆ ಮಾಡಿ ಬಿಡು. ಈ ನೀಚನ ಬಳಿಯಲ್ಲಿ ಮತ್ತೇನಾದರೂ ಶಸ್ತ್ರಗಳಿವೆ

ಯೇನೆಂಬವನ್ನು ಮೊದಲು ನೋಡೋಣ, ಎಂದೆಂದು, ನೆಲದ ಮೇಲೆ ಬೊಕ್ಕ ಬೋರ್ಲಾಗಿ ಬಿದ್ದಿದ್ದ ಡಚ್ಚನ ಅಂಗಝಡತಿಗೆ ಪ್ರಾರಂಭಿಸಿದ ಅವನ ಅಂಗಿಯ ಒಳಕಿಸೆಯಲ್ಲಿ ಒಂದು ಪುಟ್ಟ ಪಿಸ್ತೂಲು ದೊರೆಕಿತು. ಬಳಿಕ ಆತ ಡಚ್ಚನನ್ನು ದ್ದೇಶಿಸಿ:-ಮಹನೀಯರೇ, ನೀವಿನ್ನು ಎದ್ದು ನಿಲ್ಲಿರಿ ನೋಡೋಣ; ನಿಮ್ಮ ಮುಖಚರ್ಯೆಯನ್ನಷ್ಟು ನೋಡಿಕೊಳ್ಳಬೇಕಾಗಿದೆ. ಎದ್ದವನೇ ಓಡಿ ಹೋ-ಗುವ ಪ್ರಯತ್ನಕ್ಕೆ ಹತ್ತಬೇಡ. ನೀನು ಓಡಹತ್ತಿದರೆ, ನನ್ನೀ ನಾಯಿ ನಿನ್ನನ್ನು ಹರಿದೇ ತಿಂದೀತು.

ಬ್ಲೇಕ ಹೀಗೆ ನುಡಿಯುತ್ತಿರುವಾಗಲೇ ಸ್ಮಿತ್ಥ ಅಲ್ಲಿಗೆ ಬಂದು ನಿಂತ. ಆತ ಇದುವರೆಗೆ ತುಸ ದೂರದಲ್ಲಿಯೇ ನಿಂತುಕೊಂಡು, ಅಲ್ಲಿಯ ನೋಟ ನಿರೀಕ್ಷಿಸುತ್ತಿದ್ದ. ಡಚ್ಚ ಸಾವಕಾಶವಾಗಿ ನೆಲದ ಮೇಲಿಂದ ಎದ್ದು ನಿಂತ. ಆತನಿಗೆ ಭಯಭೀತಿಗಳಿಂದ ಉಸುರು ಹಿಡಿದಂತಾಗಿ, ನಡುಗಲಾರಂಭಿಸಿದ.

ಬಳಿಕ ಬ್ಲೇಕ ಬಾಯಿಂದೇನೂ ಮಾತನಾಡದೆ, ಅವನ ಕೈಯನ್ನು ಹಿಡಿದು ಅವನನ್ನು ಎಳೆದೊಯ್ಯಹತ್ತಿದ. ಟಿಪು ನಾಯಿ ಡಚ್ಚನ ಹಿಂದಿಂದೆಯೇ ಸಾಗಿ, ಆತನ ಮೇಲೆ ಚನ್ನಾಗಿ ಪಹರೆ ಮಾಡುತ್ತಿತ್ತು. ಆ ಸಂದಿಯ ಕೂಟನಲ್ಲಿ ಲಾಟೀನಿನ ಕಂಬವಿತ್ತು ಅದರ ಬಳಿಗೆ ಕರೆತಂದು, ಆ ಬೆಳಕಿನಲ್ಲಿ ಬ್ಲೇಕ ಡಚ್ಚನ ಕಡೆಗೆ ಟಕಮಕನೆ ನೋಡ ಹತ್ತಿದ. ಕೆಲ ಕ್ಷಣಗಳ ನಂತರ ಆತ:-ಎಲೋ ನಿನ್ನನ್ನೆಲ್ಲಿಯೋ ನೋಡಿರುವಂತೆ ಕಾಣುತ್ತಿದೆ, ಎಂದಂದ.

ಡಚ್ಚ ನಡುಗುವ ದನಿಯಿಂದ:-ಅಪ್ಪನವರೇ, ಇಲ್ಲ; ಈ ಮೊದಲು ತಾವು ನನ್ನನ್ನೆಂದೂ ನೋಡಿರುವದಿಲ್ಲ. ನಾನು ಈ ಲಂಡನ್ನ ಪಟ್ಟಣಕ್ಕೆ ಹೊಸದಾಗಿ ಬಂದಿರುತ್ತೇನೆ. ನಾನಾದರೂ ತಮ್ಮನ್ನು ಇಂದೇ ಕಂಡದ್ದು, ಎಂದೆನಲು;

‘ಹಾಗಾದರೆ ಈ ಊರಲ್ಲಿರುವ ಇಷ್ಟು ಜನರನ್ನು ಬಿಟ್ಟು, ನನ್ನನ್ನೇ ಕೊಲ್ಲಲುದ್ಯುಕ್ತನಾದ ನಿನ್ನ ಉದ್ದೇಶವೇನು?’

‘ಒಡೆಯರೇ, ನಾನು ತಮ್ಮನ್ನು ಕೊಲ್ಲ ಬಯಸಿರಲಿಲ್ಲ. ತಮ್ಮನ್ನು ಹೆದರಿಸಿ, ತಮ್ಮ ಜೇಬಿನೊಳಗಿನ ಹಣವನ್ನೆತ್ತ ಬಂದಿದ್ದೆ. ತಾವು ನನ್ನನ್ನು ಹಿಡಿಯಲೆತ್ನಿಸಹತ್ತಿದರೆ ಮಾತ್ರ ನಾನು ಈ ಚೂರಿಯನ್ನು ನಿಮ್ಮ ಮೇಲೆ ಪ್ರಯೋಗಿಸಬೇಕೆಂದಿದ್ದೆ.’

'ಆ ಘ ಹಾದಿಬಡಕರನ್ನ ನೇಕರನ್ನು ನಾನು ಬಲ್ಲೆ. ಅವರನ್ನು ಹಿಡಿಯದೆ ಹೋಗದ ಹೊರತು ಅವರು ತಮ್ಮಲ್ಲಿಯ ಶಸ್ತ್ರಗಳನ್ನು ಪಯೋಗಿಸುತ್ತಿರುವದಿಲ್ಲ; ಆದರೆ ನೀನು ಮಾತ್ರ ನನ್ನ ಬಳಿಯ ಯಾವ ವಸ್ತುವನ್ನೂ ಕಳವು ಮಾಡದೆ ಹಾಗು ನಾನು ನಿನ್ನನ್ನು ಹಿಡಿಯುವ ಪ್ರಯತ್ನಕ್ಕೆ ಹತ್ತುವ ಮೊದಲೇ ನಿನ್ನೀ ಚೂರಿಯನ್ನು ನನ್ನ ಮೇಲೇಕೆ ಎತ್ತಿದ್ದೆ? ಗಲ್ಲಿಗೇರಿಸಲ್ಪಡುವ ಮನುಷ್ಯನಂತೆ ನೀನು ಮೊದಲಿನಿಂದಲೂ ಇಷ್ಟೇಕೆ ಗಾಬರಿಗೊಂಡಿರುವೆ?'

ತನ್ನ ಕಣ್ಣುಗಳಲ್ಲಿಯ ಅಶ್ರುಗಳನ್ನೊರೆಸಿಕೊಳ್ಳುತ್ತ:-'ಹೊಟ್ಟೆ ಹಸಿವಿನಿಂದ ಕಂಗೆಟ್ಟ ನಾನು, ಹುಚ್ಚನಂತೆ ನಿಮ್ಮ ಮೇಲೆ ಆ ಚೂರಿಯನ್ನೆತ್ತಿದ್ದೆ; ಆದರೂ ಆ ಚೂರಿಯನ್ನು ನಾನು ಇದುವರೆಗೆ ನಿಮಗೆ ಮುಟ್ಟಿಸಿಲ್ಲ ಸಹ'

'ನನ್ನೆದುರಿಗೆ ನಿನ್ನ ಒದಮಾಷಗಿರಿ ನಡೆಯಲಾರದು. ನಿನ್ನ ಮನೀಷೆಯನ್ನು ನಾನು ಚೆನ್ನಾಗಿ ಬಲ್ಲೆ. ನೀನು ಈ ಲಂಡನ್ನಿನಲ್ಲಿ ಯಾರ ಹಸ್ತಕನಾಗಿರುವೆ? ನಿಮ್ಮ ದಳಪತಿ ಯಾರು? ಆತನ ಹೆಸರೇನು? ಇವನ್ನೆಲ್ಲ ಹೇಳು. ನೀನು ಬದುಕಿರಬೇಕಾಗಿದ್ದರೆ, ಯಾವ ಸಂಗತಿಯನ್ನೂ ಬಚ್ಚಿಡಲಿಕ್ಕೆ ಪ್ರಯತ್ನಿಸಬೇಡ'

'ನನ್ನನ್ನು ಬೇಕಾದರೆ ಜೇಲಿಗೆ ಕಳಿಸಿರಿ; ಇಲ್ಲವೆ ಗಲ್ಲಿಗೇರಿಸಿದರೂ ಅಡ್ಡಿಇಲ್ಲ; ಆದರೆ ನಿಮಗಾವ ಸಂಗತಿಯನ್ನೂ ತಿಳಿಸುವದಿಲ್ಲ. ಇನ್ನು ಮೇಲೆ ನೀವು ನಿಮ್ಮ ಮನಸ್ಸಿಗೆ ಬಂದಂತೆ ಮಾಡಬಹುದು.' ಹೀಗೆಂದು ಡಚ್ಚ ಸ್ಪಷ್ಟವಾಗಿ ತಿಳಿಸಿಬಿಟ್ಟ.

'ಹಾಗಾದರೆ ನಿನ್ನನ್ನು ಇಂದಿನ ರಾತ್ರಿ ಜೇಲಿನಲ್ಲೇ ಇರಿಸುತ್ತೇನೆ; ಹಾಗು ನಾಳೆ ಬೆಳಿಗ್ಗೆ ನೀನು ಯಾರು? ನಿನ್ನ ದಳವಾಯಿ ಯಾರು? ಮುಂತಾದವುಗಳನ್ನು ಕಂಡುಕೊಳ್ಳುತ್ತೇನೆ' ಹೀಗೆಂದು ಹೇಳಿ, ಬ್ಲೇಕ ಸಮೀಪದ ಚೌಕಿಯೊಳಗಿನ ಪೋಲೀಸನನ್ನು ಕರೆಯುವದಕ್ಕೆಂದು ದೊಡ್ಡ ದನಿ ತೆಗೆದು, ಕೂಡಲೆ ಏನನ್ನೋ ಯೋಚಿಸಿ ಸುಮ್ಮನಾದ. ಬಳಿಕ ಆತ ಡಚ್ಚನನ್ನುದ್ದೇಶಿಸಿ: 'ಬೇಡ, ನಿನ್ನನ್ನು ಜೇಲಿಗೆ ಕಳಿಸುವ ಅವಶ್ಯಕತೆಯಿಲ್ಲ. ನಿನ್ನನ್ನು ಹಿಡಿಯುವ ಅವಶ್ಯಕತೆಯೇ ಉಂಟಾದರೆ, ಈಗ ನಿನ್ನನ್ನು ಬಿಟ್ಟರೂ ಸಹಜವಾಗಿ ಹಿಡಿಯಬಲ್ಲೆ. ಹೊರಡು, ನೀನಿನ್ನು ನಿನ್ನ ಸ್ಥಳಕ್ಕೆ ಹೊರಟು ಹೋಗು.'

ಬ್ಲೇಕ ಹೀಗೆಂದು ಹೇಳಿ ಡಚ್ಚನ ಕೈಬಿಟ್ಟಕೂಡಲೆ, ಆತ ಭಯಕಂಪಿತನಾಗಿ ಟಿಪುನಾಯಿಯ ಕಡೆಗೊಮ್ಮೆ ನೋಡಿದ; ಹಾಗು ಊರ್ಧ್ವಶ್ವಾಸದಿಂದ

ಓಡಲಾರಂಭಿಸಿದ. ಆ ನಾಯಿ ಆಗ್ರಹಪೂರ್ಣದೃಷ್ಟಿಯಿಂದ ತನ್ನ ಒಡೆಯನ ಕಡೆಗೆ ನೋಡಿತು; ಆದರೆ ಬ್ಲೇಕ ಆದಕ್ಕೆ ಡಚ್ಚನನ್ನನುಸರಿಸುವ ಸಂಜ್ಞೆ ಮಾಡಲಿಲ್ಲ.

ಡಚ್ಚ ಕಾಣದಾಗಲು, ಬ್ಲೇಕ ಸ್ಮಿತ್ಥನಿಗೆ ಹೇಳುತ್ತಾನೆ:-ಸ್ಮಿತ್, ಇನ್ನು ನೀನು ಟಿಪುವಿನೊಡನೆ ಆತನ ಅನುಸರಣ ಮಾಡು. ಆ ಬದಮಾಷ್ ಈಗ ನಮ್ಮ ಕಣ್ಣಿಗೆ ಕಾಣದಾಗಿದ್ದರೂ ಈ ನಾಯಿ ಆತನ ಸಂಧಾನ ಹಚ್ಚಬಲ್ಲದು. ಆ ಬದ್‌ಮಾಷ ಜನರ ಟೋಳಿ ಎಲ್ಲಿರುತ್ತದೆಂಬದನ್ನು ತಿಳಿಯುವದು ಆವಶ್ಯಕ. ಇದಕ್ಕಾಗಿಯೇ ನಾನು ಆತನನ್ನು ಬಿಟ್ಟುಬಿಟ್ಟಿರುತ್ತೇನೆ.

ಒಂದು ಕ್ಷಣಮಾತ್ರ ಕೂಡ ನಿಲ್ಲದೆ ಸ್ಮಿತ್ಥ ನಾಯಿಯೊಡನೆ ಡಚ್ಚನ ಅನುಸರಣಕ್ಕೆ ನಡೆದ. ಡಚ್ಚ ಎಷ್ಟೇ ದೂರ ಹೋದರೂ, ತಮ್ಮ ನಾಯಿ ಆತನನ್ನು ಅನುಸರಿಸಿಯೇ ಅನುಸರಿಸುತ್ತದೆಂಬದು ಸ್ಮಿತ್ಥನಿಗೆ ಗೊತ್ತಿತ್ತು.

ಬ್ಲೇಕ ಯಾವನೊಬ್ಬನನ್ನು ಒಮ್ಮೆ ನೋಡಿದರೂ ಸಾಕು; ಎಷ್ಟೋ ವರ್ಷಗಳ ನಂತರವೂ ಅವನು ಆ ವ್ಯಕ್ತಿಯನ್ನು ಸಹಜವಾಗಿ ಗುರ್ತಿಸುತ್ತಿದ್ದ. ಬ್ಲೇಕನೇ ಟರ್ಕಿಯ ಪೋಲೀಸರ ವಿನಂತಿಯ ಮೇರೆಗೆ ಡಚ್ಚನನ್ನು ಹಿಡಿದು ಜೇಲಿಗೆ ಕಳಿಸಿದ್ದ. ಡಚ್ಚನನ್ನು ಆಗಲೆ ಈತ ನೋಡಿದ್ದ. ಆದರೂ ಬ್ಲೇಕ ಅವನನ್ನು ಇಂದು ಒಮ್ಮೆಲೆ ಗುರ್ತಿಸದಾದ; ಈ ಮನುಷ್ಯನನ್ನೆಲ್ಲಿ ನೋಡಿರುವೆನೆಂಬ ಬಗ್ಗೆ ಆತನಿಗೆ ಬಹಳ ಹೊತ್ತಿನವರೆಗೆ ಸ್ಮರಣವಾಗಲಿಲ್ಲೆಂಬದನ್ನು ಯಾರಾದರೂ ನಂಬಬಹುದೋ? ಆತ ಆ ಕಳ್ಳನನ್ನು ನೋಡಿದ ಕೂಡಲೆ ಗುರ್ತಿಸಿದ; ಹಾಗು ಈತ ಈ ಲಂಡನ್ನ ಪಟ್ಟಣಕ್ಕೆ ಬಂದು, ಯಾವನೋ ಒಬ್ಬ ಅಸಾಧಾರಣ ಶಕ್ತಿಸಂಪನ್ನ ಭೀಷಣ ಪ್ರಕೃತಿಯ ಸೊಕ್ಕಿನ ದಸ್ಯುವಿನ ಅಥವಾ ಕಳ್ಳರರಸನ ಇಂಗಿತದಂತೆ ನಡೆಯುತ್ತಿರುವನೆಂಬದೂ, ಇಂದು ಆ ತನ್ನ ಒಡೆಯನ ಅಪ್ಪಣೆಯಿಂದಲೇ ಈತ ತನ್ನನ್ನು ಕೊಲೆಗೆಯ್ಯ ಬಂದಿರುವನೆಂಬದೂ ಬ್ಲೇಕನಿಗೆ ತಿಳಿಯಿತು; ಆದರೆ ಆ ಕಳ್ಳರರಸನಾರು? ಆತನ ಉದ್ದೇಶವೇನು? ಯಾವ ಗುಪ್ತ ಕಾರಣಕ್ಕಾಗಿ ಆತ ತನ್ನ ವಿನಾಶಕ್ಕೆಂದು ಈ ಡಚ್ಚನನ್ನು ನಿಯೋಜಿಸಿರುವ? ಇದನ್ನೆಲ್ಲ ಆವಶ್ಯವಾಗಿ ತಿಳಿಯಲೇಬೇಕೆಂದು ಆವನಿಗನಿಸಿತು. ಆತ ಡಚ್ಚನ ಮಾತುಗಳನ್ನು ಕೇಳಿ ಹಾಗು ಅವನ ಮುಖಭಾವವನ್ನು ಕಂಡು, ನಾವು ಏನು ಮಾಡಿದರೂ ಈತ ಆ ಗುಪ್ತ ಸಂಗತಿ ತಿಳಿಸು

ಲಾರನೆಂಬದನ್ನು ತಿಳಿದ. ಈ ಅವಸ್ಥೆಯಲ್ಲಿ ಈತನನ್ನು ಸಾಯುವವರೆಗೆ ಜೇಲಿನಲ್ಲಿರಿಸಿದರೆ ಇವನಿಗೆ ತಕ್ಕ ಶಿಕ್ಷೆಯಾಗುವದೇನೋ ನಿಜ; ಆದರೆ ಈತನ ಮುಖ್ಯಸ್ಥ ಮಾತ್ರ ಜಾಗರೂಕನಾಗುವ; ಆದರಿಂದ ಆ ನೀಚ ಯಾರ ಸರ್ವ ನಾಶದ ಪ್ರಯತ್ನಕ್ಕೆ ತೊಡಗಿರುವನೆಂಬದನ್ನು ತಿಳಿಯುವದವಶ್ಯವಾಗುವದು. ಗಭೀರತರವಾದ ರಹಸ್ಯಭೇದವನ್ನು ತಿಳಿಯುವ ಸುಯೋಗ ಬಿಟ್ಟು ಬಿಟ್ಟು, ಯಾವನೊಬ್ಬ ಘಾತಕಿ ಮನುಷ್ಯನನ್ನು ಜೇಲಿಗೆ ಸೇರಿಸಿ, ಆತ್ಮಪ್ರೌಢಿಮೆ ಮೆರಿಸುವದು ಬ್ಲೇಕನ ಪ್ರಕೃತಿಗೆ ತೀರ ವಿರುದ್ಧವಾಗಿತ್ತು. ಡಚ್ಚನನ್ನು ಹಾಗೆಯೇ ಬಿಟ್ಟುಬಿಟ್ಟರೆ, ಆತನ ಮುಖ್ಯಸ್ಥನ ಸಂಧಾನ ಹತ್ತಬಹುದೆಂದು ಬಗೆದೇ ಆತ ಅವನನ್ನು ಅಷ್ಟು ಸಹಜವಾಗಿ ಬಿಟ್ಟಿದ್ದ.

ತನ್ನನ್ನು ಹೀಗೆ ಆಕಸ್ಮಿಕವಾಗಿ ಮುಕ್ತಗೊಳಿಸಿದ ಬ್ಲೇಕ ಪುನಃ ತನ್ನನ್ನು ಅನುಸರಿಸುವನೆಂದೂ ಸ್ಮಿತ್ಥನನ್ನು ತನ್ನನ್ನನುಸರಿಸಲಿಕ್ಕೆ ಕಳಿಸಬಹುದೆಂದೂ ಡಚ್ಚನ ಮನಸ್ಸಿನಲ್ಲಿ ಒಮ್ಮೆ ಕೂಡ ಬರಲಿಲ್ಲ. ತನ್ನನ್ನು ಮತ್ತೆ ಹಿಡಿಯುವ ಮನಸ್ಸೇ ಆಗಿದ್ದರೆ, ತನ್ನ ಆ ಟಿಪು ನಾಯಿಗೆ ತುಸ ಸನ್ನೆ ಮಾಡಿದ್ದರೆ ಅದು ನಾಲ್ಕಾರು ಜಿಗಿತದಲ್ಲೇ ತನ್ನನ್ನು ಹಿಡಿದೆಳೆದು ಆತನೆದುರಿಗೆ ಒಯ್ದು ಬಿಡುತ್ತಿತ್ತೆಂಬದರ ಕಡೆಗೆ ಡಚ್ಚನ ಲಕ್ಷ್ಯವಿದ್ದಿತು. ಹಾಗೇನೂ ಆಗದ್ದರಿಂದ, ಡಚ್ಚ ಸಂಪೂರ್ಣ ನಿಶ್ಚಿಂತತೆಯಿಂದ ಆಕ್ಸಫರ್ಡ ಓಣಿ ದಾಟಿ, ಒಂದು ಸಂದಿಯನ್ನು ಪ್ರವೇಶಿಸಿದ; ಹಾಗು ತದನಂತರ ಅತ್ತಿತ್ತ ಅಲೆದಾಡಿ, ಕಡೆಗೆ ಹ್ಯಾಮನ್ ಆರ್ಟನ್ನನ ಮನೆಯ ಬಳಿಗೆ ಬಂದ.

ಅಲ್ಲಿಗೆ ಬಂದ ಬಳಿಕ ಡಚ್ಚ ನಾಲ್ಕೂ ಕಡೆಗೊಮ್ಮೆ ತೀಕ್ಷ್ಣದೃಷ್ಟಿಯಿಂದ ಅವಲೋಕಿಸಿದ. ಎಲ್ಲಿಯೂ ಒಂದು ಹುಟ್ಟುಹುಳವೂ ಕಾಣಿಸಲಿಲ್ಲ. ಧೂರ್ತನಾದ ಸ್ಮಿತ್ಥ ಆತನ ಇಂಗಿತವನ್ನು ಮೊದಲೇ ತಿಳಿದು ಜಾಗರೂಕನಾಗಿದ್ದ. ಆದರಿಂದ ಆತ ಆ ಓಣಿಯ ಕೂಟಿನಲ್ಲಿದ್ದ ಒಂದು ಮೇಲುಪ್ಪರಿಗೆಯ ಮನೆಯ ಗೋಡೆಯ ಮರೆಗೆ ನಿಂತುಕೊಂಡು, ಡಚ್ಚನ ಮಾರ್ಗದ ಕಡೆಗೆ ನಜರಿಟ್ಟಿದ್ದ. ಡಚ್ಚ ಮೇಲೆ ಹೇಳಿದಂತೆ ಎಲ್ಲ ಕಡೆಗೂ ಟಕಮಕವೆಂದು ನೋಡುತ್ತ ಬಹು ತತ್ಪರತೆಯಿಂದ ಆ ಪ್ರಾಸಾದ ಪ್ರವೇಶಿಸಿದ್ದನ್ನು ಸ್ಮಿತ್ಥ ಅವನಿಗೆ ಕಾಣದ ಹಾಗೆ ನಿಂತೇ ನೋಡಿದ. ಡಚ್ಚ ಆ ಪ್ರಾಸಾದದ ಬಾಗಿಲ ಒಳಗೆ ಹೋಗಿ, ಅಲ್ಲಿಯದೊಂದು ಗುಪ್ತ ಕೀಲವನ್ನೊತ್ತಿದ ಕೂಡಲೆ ಆ

ಬಾಗಿಲು ತೆರೆಯಿತು; ಹಾಗು ಆತ ಒಳಸೇರುತ್ತಲೆ, ಆ ಬಾಗಿಲು ತನ್ನಷ್ಟಕ್ಕೆ ತಾನೇ ಮುಚ್ಚಿಕೊಂಡು ಬಿಟ್ಟಿತು.

ಡಚ್ಚ ಆ ಪ್ರಾಸಾದದ ಒಳಂಗಳದೊಳಗಿನ ಒಂದು ಸಂದಿಯಿಂದ ಮುಂದೆ ಸಾಗಿ, ಮತ್ತೊಂದು ಬಾಗಿಲ ತಲುಪಿದ. ಆ ಬಾಗಿಲ ಬಳಿಯಲ್ಲೊಬ್ಬ ಪಹರೆಯವನಿದ್ದ. ಆತ ಕುಂಟ. ಒಂದಾನೊಂದು ಕಾಲದಲ್ಲಿ ಆ ಕುಂಟ ಒಹು ಪುಂಡನಾಗಿದ್ದ. ಎಷ್ಟೋ ವರ್ಷಗಳ ಮುಂಚೆ ಆತ ರೈಲುಗಾಡಿಯೊಳಗಿನ ಒಬ್ಬ ಪ್ರವಾಸಿಯ ಕಿಸೆ ಕತ್ತರಿಸಿ ಭರದಿಂದ ನಡೆದಿರುವ ರೈಲಿನಿಂದ ಕೆಳಗೆ ಹಾರಿದ್ದ. ಆಗ ಆತನ ಕಾಲು ಮುರಿದಿತ್ತು. ಆದರಿಂದ ಆತ ಆಗ ಹಿಡಿಯಲ್ಪಟ್ಟು ಕೆಲ ವರ್ಷಗಳ ವರೆಗೆ ರಾಜರ ಅತಿಥಿಯಾಗಿದ್ದ. ಬಿಡುಗಡೆಯಾದ ಮೇಲೆ ತನ್ನ ಒಂದೂವರೆ ಕಾಲಿನಿಂದ ಇನ್ನು ಈ ಪುಂಡಾಟಿಕೆ ಚೆನ್ನಾಗಿ ಸಾಗದೆಂದು ತಿಳಿದ ಆತ ಇತ್ತೀಚೆಗೆ ಪಹರೆ ಮಾಡಿ ಹೊಟ್ಟೆಹೊರೆಯುತ್ತಿದ್ದ. ಡಚ್ಚನನ್ನು ಕಂಡ ಆ ಕುಂಟ ಪಹರೆಯವ ಕೇಳುತ್ತಾನೆ:-ಯಾಕೋ ಡಚ್ಯಾ, ಸುದ್ದಿಯೇನು? ಈ ಅಪರಾತ್ರಿಯಲ್ಲಿ ಎತ್ತ ಹೋಗಿದ್ದೆ?

ಒಣಗಿದ ಸೊಂಡೆಯಿಂದ ಡಚ್ಚ:-ಯಾಕೋ ಕುಂಟಾ. ನಿನಗಿದೆಲ್ಲ ಅತಿ ಪ್ರಸಂಗವೇಕೆ? ಮುನ್ನೋಡಿ ನಿನ್ನ ಕೆಲಸ ಮಾಡು. ಹೆಚ್ಚಿನ ಉಸಾಬರಿಗೆ ಬಂದರೆ, ನಿನ್ನ ಆ ಇನ್ನೊಂದು ಕಾಲೂ ಮುರಿದು ಹೋದೀತು, ಎಚ್ಚರಿಕೆ! ಎಂದಂದ.

'ಹಾಗೆಯೋ? ಆದರೆ ನಿನ್ನಂತಹ ಜಮಾನಿಯ ಹಂದಿಯಲ್ಲಿ ಆ ಶಕ್ತಿಯೆಲ್ಲಿಂದ ಬರಬೇಕು?'

'ಇದೆಯೋ-ಇಲ್ಲವೊ ನೋಡು' ಹೀಗೆಂದು ಒಳ್ಳೇ ಆವೇಶದಿಂದ ನುಡಿದು, ಡಚ್ಚ ತನ್ನ ಸ್ವಭಾವಧರ್ಮದಂತೆ ಒಮ್ಮೆಲೆ ಆತನ ಮೇಲೆ ತನ್ನ ಚೂರಿ ಹಿರಿಯ ಹೋದ; ಆದರೆ ಆತನ ಗವಸಣಿಗೆಯಲ್ಲಿ ಚೂರಿಯೇ ಇರಲಿಲ್ಲ. ಆದರಿಂದ ಆತ ಆ ಅವಮಾನ ಸಹಿಸಿ, ಆ ದ್ವಾರ ಪಾಲಕನಿಗೊಂದು ತಪರಾಕಿ ಕೊಟ್ಟು, ಹತ್ತರದ ಮನೆ ಸೇರಿದ.

ಆ ಮನೆಯಲ್ಲಿ ಎಷ್ಟೋ ಮಂಚಗಳು ಹಾಸಿಗೆಯಿಂದ ಸಜ್ಜಾಗಿದ್ದವು; ಆದರೆ ಅವಾವುಗಳ ಮೇಲೂ ಆಗ ಯಾರೂ ಮಲಗಿರಲಿಲ್ಲ. ಆ ಮನೆಯಲ್ಲಿ

ಯಾರು ವಾಸವಾಗಿದ್ದರೋ, ಅವರೆಲ್ಲರೂ ಡಚ್ಚನ ವ್ಯವಸಾಯ ಬಂಧುಗಳೇ! ಆದರಿಂದ ಅವರೆಲ್ಲರೂ ಆಗ ಉಪಾರ್ಜನೆಯ ಕೆಲಸಕ್ಕಾಗಿ ಬೇರೆ ಬೇರೆ ಕಡೆಗೆ ತೆರಳಿದ್ದರು.

ಡಚ್ಚ ಒಂದು ಕುರ್ಚಿಯ ಮೇಲೆ ಕುಳಿತು ಒಂದು ಗ್ಲಾಸ ವ್ಹಿಸ್ಕಿ ಕುಡಿದ. ತದನಂತರ ಆತ ಅಲ್ಲಿಂದ ಮತ್ತೊಂದು ಕೋಣೆಗೆ ಹೋಗಿ ಅಡ್ಡಾದ. ಕೆಲ ನಿಮಿಷಗಳ ವಿಶ್ರಾಂತಿಯ ನಂತರ ಆತ ಹಾಸಿಗೆಯಿಂದೆದ್ದು, ಒಂದು ಇಕ್ಕಟ್ಟಿನ ನಿಚ್ಚಣಿಕೆಯ ಮೇಲಿಂದ ಮೇಲಟ್ಟ ಹತ್ತಿದ. ಆ ಅಟ್ಟದ ಮೇಲಿಂದಲೇ ಹಿಂದೆ ವರ್ಣಿಸಿದ ಆರ್ಟನ್ನನ ಆ ಗುಪ್ತ ಕೋಣೆಗೆ ಹೋಗುವ ಮಾರ್ಗವಿತ್ತು. ಆ ದಾರಿಯಿಂದಲೇ ಆತ ಆರ್ಟನ್ನನೆದುರಿಗೆ ಹೋಗಿ ನಿಂತ.

ಆರ್ಟನ್ನ ಕೆಲ ನಿಮಿಷಗಳ ಮುಂಚೆ ಹಿತ್ತಾಳಿಯ ಕೊಳವೆಯಿಂದ ಒಂದು ಪತ್ರ ಪಡೆದಿದ್ದ. ಡಚ್ಚ ಆ ಕೋಣೆ ಪ್ರವೇಶಿಸಿದಾಗ ಆರ್ಟನ್ನ ತನ್ನ ಮೇಜಿನ ಬಳಿಯಲ್ಲಿ ಕುಳಿತು ಆ ಪತ್ರ ಓದುತ್ತಿದ್ದ. ಅಕಸ್ಮಾತ್ತಾಗಿ ಆತ ತನ್ನ ಮುಖವನ್ನೆತ್ತಲು, ಅವನಿಗೆ ಡಚ್ಚ ಕಾಣಿಸಿದ. ಆಗ:-ಕೆಲಸವಿಡೇರಿತಷ್ಟೇ? ಆ ಪತ್ತೇದಾರ ಮೂರ್ಖನನ್ನು ಭವಸಾಗರದಿಂದ ದಾಟಿಸಿ ನಿಶ್ಚಿಂತನಾದೆಯಾ? ಹೇಳು, ನಡೆದ ಸಂಗತಿ ಬಿಚ್ಚಿ ಹೇಳು, ಎಂದು ಆರ್ಟನ್ನ ಮೆಲ್ಲನೆ ಕೇಳಲು,

ಡಚ್ಚ ಜೋಲು ಮೋರೆಯಿಂದ:-ಇಲ್ಲ; ಬೇಟೆ ಬೀಳಲಿಲ್ಲ. ಜೋಡಣಿ ಯೇನೋ ಚೆನ್ನಾಗಿ ಆಗಿತ್ತು; ಆದರೆ ಕಡೆಗೆ ಗುರಿ ತಪ್ಪೇ ಹೋಯಿತು, ಎಂದು ಹೇಳಿ. ಹತಾಶನಾದ ಆತ ಸಮೀಪದ ಒಂದು ಕುರ್ಚಿಯ ಮೇಲೆ ಕುಳಿತ.

ಆರ್ಟನ್ನ ತನ್ನ ಕಣ್ಣುಗಳನ್ನು ಹುಬ್ಬಿಗೇರಿಸಿ, ವಿಸ್ಮಯಭರದಿಂದ:— ಕಡೆಗೆ ಗುರಿತಪ್ಪಿತೆನ್ನುವಿಯಾ? ನೀನು ಅನ್ನುವದಾದರೂ ಏನು? ಇದಕ್ಕಾಗಿಯೇ ಇಷ್ಟು ಹಣ ಖರ್ಚ ಮಾಡಿ, ನಾನು ಅವನಿಗೆ ಆ ಮಿಲಾನ ಹೊಟೆಲ್ಲಿನಲ್ಲಿ ಸುಗ್ರಾಸ ಭೋಜನ ಮಾಡಿಸಿದೆನೇ? ಡಚ್ಯಾ, ನೀನಿಷ್ಟು ಕೈಲಾಗದವನೆಂಬದನ್ನು ನಾನಿದುವರೆಗೂ ತಿಳಿದಿರಲಿಲ್ಲ. ಕಡೆಗೆ ಅವನಿಗೆ ಅಂಜಿ ಗಾಬರಿಗೊಂಡು ಓಡಿ ಬಂದಿರುವೆಯಾ? ನಿನ್ನಂಥಹ ಕೈಲಾಗದ ಷಂಡ-ಷಂಡ....

ಡಚ್ಚ ಆವನನ್ನು ಮತ್ತೆ ಮಾತಾಡಗೊಡದೆ, ಗಟ್ಟಿಯಾಗಿ ಅನ್ನು ತ್ತಾನೆ:—ಬಾಯಿ ಬಿಗಿಹಿಡಿದು ಮಾತಾಡು. ಬೆಯ್ಯ-ಗಿಯ್ಯ ಹತ್ತಿದರೆ, ಒಂದೇ ಏಟಿನಿಂದ ನಿನ್ನ ತಲೆ ಒಡೆದು ಬಿಟ್ಟೇನು!

ಕೂಡಲೆ ಆರ್ಟನ್ನ ಡೆಸ್ಕಿನೊಳಗಿಂದ ಒಂದು ಪಿಸ್ತೂಲು ತೆಗೆದು ಡಚ್ಚನ ಎದುರಿಗೆ ಹಿಡಿದು:—ಹೆಚ್ಚು ಮಾತಾಡಿದರೆ ಈಗಲೆ ಅದರ ಪರಿಣಾಮ ಭೋಗಿಸುವೆ. ಅವನ ಎಕ್ಕಡದ ಏಟು ತಿಂದು ಬಂದ ನಿನಗೆ ನನ್ನೆದುರಿನಲ್ಲಿ ಪೌರುಷ ತೋರಿಸಲಿಕ್ಕೆ ನಾಚಿಕೆಯಾಗುವದಿಲ್ಲವೆ? ನನ್ನನ್ನಾರೆಂದು ತಿಳಿದಿದುವೆ? ನಾನು ನಿಮ್ಮ ಬೆಳಪತಿ. ನೀವು ನನ್ನನ್ನು ನಿಮ್ಮ ಮುಖ್ಯಸ್ತನೆಂದು ಯಾವಾಗಲೂ ಸನ್ಮಾನಿಸಲೇ ಬೇಕೆಂಬದನ್ನು ಮರೆತೆಯಾ?

ಡಚ್ಚ ತುಸ ಮೆತ್ತಗಾಗಿ:—ಅದರೆ ನಾನು ಯಾರಿಂದಲೂ ಅವಮಾನ ಸಹಿಸಲಾರೆ.

'ಸ್ವಂತದ ಮಾನಾಪಮಾನಗಳು ಸ್ವಂತದ ಕೃತಿಯಲ್ಲೇ ಇರುತ್ತವೆ. ಕಾರ್ಯಭಾರ ಹೊತ್ತು ಅದನ್ನು ನಿರ್ವಿಘ್ನದಿಂದ ಪಾರುಗಾಣಿಸದಿದ್ದಾಗ, ಬೆಯ್ಯಿಸಕೊಳ್ಳದಿದ್ದರೇನು ಆಭಾರಮನ್ನಿಸಿಕೊಳ್ಳಬಯಸಬೇಕೇ? ಈಗ ನೀನು ಕೃತಕಾರ್ಯನೇಕಾಗಲಿಲ್ಲೆಂಬದನ್ನು ಮೊದಲು ಹೇಳು.'

ಒಳಿಕ ಡಚ್ಚ ನಡೆದ ಸಂಗತಿಯನ್ನೆಲ್ಲ ಆರ್ಟನ್ನನಿಗೆ ತಿಳಿಸಿದ. ಕೂಡಲೆ ಆರ್ಟನ್ನ ಒಳ್ಳೇ ಗಾಬರಿಯಿಂದ:—ನೀನು ಯಾವ ಬುದ್ಧಿವಂತಿಕೆಯಿಂದ ನೆಟ್ಟಗೆ ಇಲ್ಲಿಗೆ ಬಂದೆ? ಬ್ಲೇಕನಿಗೆ ನಾನೇ ನಿನ್ನ ಮುಖ್ಯಸ್ತನೆಂಬ ಬಗ್ಗೆ ಸಂಶಯ ಉಂಟಾದರೆ?...............

'ಇಲ್ಲ-ಇಲ್ಲ. ಆತನು ನನ್ನನ್ನನುಸರಿಸಿಲ್ಲ. ನಾನು ಆಗಾಗ್ಗೆ ಹಿಂದೆ ನೋಡುತ್ತಲೇ ಬಂದೆ.'

ಅದನ್ನು ಕೇಳಿ ಆರ್ಟನ್ನ ಒಳ್ಳೇ ಸಿಟ್ಟಿನಿಂದ:—'ಮೂರ್ಖಾ, ನೀನೊಬ್ಬ ಕೊಬ್ಬೇರಿದ ಕೋಣವಾಗಿದ್ದೀಯೋ! ನೀನು ಬ್ಲೇಕನನ್ನನುಸರಿಸಿ ನಡೆದಾಗ ಆ ನಾಯಿ ಆತನ ಸಂಗಡವೇ ಇದ್ದಿತೇನು? ಬರೀ ಅದೊಂದೇ ನಾಯಿ ಅವನ ಸಂರಕ್ಷಣಕ್ಕೆ ಬಂದಿತ್ತೆಂತಲ್ಲ. ಸಂಗಡವೇ ಆ ಬದಮಾಷ್ ಪತ್ತೆದಾರ ಪೋರನೂ ಅಲ್ಲಿಗೆ ಬಂದು ಸೇರಿದ್ದ. ಮೂರ್ಖಾ, ನೀನು ಸರ್ವಘಾತಮಾಡಿ ಬಿಟ್ಟಿರುತ್ತೀ! ಈಗ ನೀನು ನಿನ್ನ ಆ ತಪ್ಪನ್ನು ಚೆನ್ನಾಗಿ ಪರಿ

ಶೋಧಿಸು; ಅಂದರೆ ನಿನಗೆ ತಟ್ಟನೆ ನಿಜ ಸಂಗತಿ ಹೊಳೆಯದಿರದು. ಇನ್ನು ನೀನು ಇಲ್ಲಿ ಹೆಚ್ಚು ಹೊತ್ತು ನಿಲ್ಲದೆ, ಇಲ್ಲಿಂದ ಒಂದು ಮೈಲು ಆಚೆಗೆ ಹೋಗಿ, ಅವರನ್ನು ಗೊಂದಲದಲ್ಲಿ ಕೆಡಹು. ನಾನು ನಿನಗೊಂದು ಜೀನಸು ಕೊಡುವೆನು. ಅದನ್ನು ಒಂದು ಮೈಲಿನಾಚೆಗೆ ಹೋಗಿ ನಿನ್ನ ಬೂಟಿಗೆ ಹಚ್ಚಿಕೋ; ಅಂದರೆ ಆ ನಾಯಿ ನಿನ್ನನ್ನನುಸರಿಸಿ ಬರುವದು. ಬಳಿಕ ನೀನು ಮತ್ತೆ ಇಪ್ಪತ್ನಾಲ್ಕು ತಾಸುಗಳ ವರೆಗೂ ಅತ್ತಿತ್ತ ಅಲೆದಾಡುತ್ತಲೇ ಇರು; ಅಂದರೆ ಆ ನಾಯಿಯನ್ನು ಭ್ರಮುಕ್ಕೀಡು ಮಾಡಿದಂತಾಗುವದು,' ಹೀಗೆಂದು ಹೇಳಿ, ಆರ್ಟನ್ನನು ಡಚ್ಚನ ಕೈಗೆ ಒಂದು ಚಿಮುಟಿಗೆ ಪಾವುಡರು ಕೊಟ್ಟ. ಡಚ್ಚ ಕೂಡಲೆ ಅಲ್ಲಿಂದ ಹೊರಟು ಬ್ಲೇಕನ ಉದ್ದೇಶವನ್ನು ವ್ಯರ್ಥವಾಗ ಮಾಡಲಿಕ್ಕೆಂದು ನಡೆದ.



## ೧೧ನೇ ತೆರೆ. ಗುಪ್ತ ಶತ್ರು.

ಕ್ಯಾಪ್ಟನ್ನ ರೆನ್‌ಹ್ಯಾಮು ರಾಜಕಾರ್ಯದ ಸಲುವಾಗಿ ಬೇರೆ ಯಾರಿಗೂ ತಿಳಿಯದ ಹಾಗೆ ಆಕಸ್ಮಿಕವಾಗಿ ದೇಶಾಂತರಕ್ಕೆ ಹೊರಟು ಹೋದನೆಂಬದನ್ನು ನಮ್ಮ ವಾಚಕರಿಗೆ ನೆನಪು ಮಾಡಿಕೊಡುವ ಕಾರಣವಿಲ್ಲ. ಕೆಲಸ ಮುಗಿದ ಬಳಿಕ ಆತ ಲಂಡನ್ನಿಗೆ ಮರಳಿ ಬರಲು, ಅವನಿಗೆ ಆತನ ತಂಗಿಯ ಮನೆಯ ಕಳವಿನ ಸುದ್ದಿ ಹತ್ತಿತು. ಲಂಡನ್ನಿಗೆ ತಲುಪಿದೊಡನೆಯೇ ಆತನಿಗೆ ಬಂದಿದ್ದ ಕ್ಲಾರೆಯ ಪತ್ರವನ್ನೋದಲು ಆತನ ಸಂದೇಹವೂ ದುಶ್ಚಿಂತೆಯೂ ಎಷ್ಟೋ ಪಟ್ಟು ಹೆಚ್ಚಿದವು. ಯಾವನೊಬ್ಬ ಬಹು ಸಾಹಸಿಯಾದ ಗುಪ್ತ ಹೇರ ಸರ್ವ ಕಡೆಗೂ ತನ್ನನ್ನನುಸರಿಸಿ ಬರುತ್ತಿರುವನೆಂದು ರೆನ್‌ಹ್ಯಾಮು ತಿಳಿದನು. ಯಾವ ಗುಪ್ತ ಸಂಗತಿಯೂ ಅವನಿಗರಿಯದಿರುವದಿಲ್ಲ. ಲಾರ್ಡ ಬೊರ್ಲರ ಮನೆಯ ನಿರ್ಜನ ಮಂತ್ರಣಾಗಾರವೂ ಗುಪ್ತರಹಸ್ಯಗಳ ಬಗ್ಗೆ ಸುರಕ್ಷಿತ ಸ್ಥಳವಾಗಿಲ್ಲ. ಇದಕ್ಕಿಂತಲೂ ಹೆಚ್ಚಿನ ಮೋಸವದಾವದಿರುವದು?

ಕ್ಲಾರೆಯ ಪತ್ರ ವಾಚನದಿಂದ ಆಕೆ ತನ್ನನ್ನೇ ಕಳ್ಳನೆಂದು ಸಂದೇಹಗೊಂಡಿರುವದನ್ನು ತಿಳಿದ. ಅವಳ ಅನುಮಾನ ಸ್ವಾಭಾವಿಕವಾದದ್ದೆಂಬ

ದನ್ನೂ ಆತ ಒಪ್ಪದಿರಲಿಲ್ಲ. ತನ್ನ ಪರಮಾಪ್ತಳೇ ತನ್ನನ್ನು ಕಳ್ಳನೆಂದು ಸಂದೇಹಗೊಂಡರೂ ಆತ ಅವಳನ್ನು ದೋಷಿಯನ್ನಾಗೆಣಿಸುವಂತಿರಲಿಲ್ಲ. ಆತ್ಮಸಮರ್ಥನದ ಯಾವ ಉಪಾಯವೂ ಇರದ್ದನ್ನು ಕಂಡು, ಆತ ಬಹಳೇ ಮರ್ಮಾಹತನಾದ. ಬ್ರಿಟಿಶ ರಾಜ್ಯದ ಯಾವ ಸಕಲ ಭಯಂಕರ ಗುಪ್ತ ಸಂಗತಿಯನ್ನು ಯೋಗ್ಯ ಅಧಿಕಾರಿಗಳಿಗೆ ತಿಳಿಸುವ ಭಾರ ತನ್ನ ಮೇಲಿದೆಯೋ, ಅವುಗಳಲ್ಲಿ ಯಾವುದೊಂದು ಸಂಗತಿ ಏನಕೇನ ಪ್ರಕಾರದಿಂದ ಪರಿಸ್ಫೋಟಗೊಂಡರೆ, ಆದರಿಂದ ತನಗುಂಟಾಗುವ ವಿಪತ್ತಿಗೆ ಮೇರೆಯೇ ಉಳಿಯಲಾರದೆಂಬದನ್ನು ಆತ ಚೆನ್ನಾಗಿ ಮನಗಂಡಿದ್ದ; ಅಲ್ಲದೆ ಅದರಿಂದ ಮಾನ, ಮರ್ಯಾದೆ, ಸಾಮಾಜಿಕ ಗೌರವ, ತನ್ನ ನೌಕರಿ ಮುಂತಾದವುಗಳನ್ನೆಲ್ಲ ಕಳಕೊಳ್ಳಬೇಕಾಗುತ್ತಿತ್ತು; ಬಳಿಕ ಆ ಅಪಕೀರ್ತಿಯನ್ನು ತಲೆಯ ಮೇಲೆ ಹೊತ್ತುಕೊಂಡು, ಕಳ್ಳನಂತೆ ಅಸಹ್ಯವಾದ ಕಾರಾಗೃಹದಲ್ಲಿಯೂ ಪ್ರವೇಶಿಸ ಬೇಕಾಗುತ್ತಿತ್ತು. ಅದೆಂಥ ಕರುಣಾಜನ್ಯಸ್ಥಿತಿ! ಆತ ರಾಜಕಾರ್ಯದ ಮತ್ತಾವ ಇಲಾಖೆಯಲ್ಲಾದರೂ ಇದ್ದಿದ್ದರೆ, ಆತನ ಮೇಲೆ ಈ ವಿಪತ್ತುಂಟಾಗುವ ಪ್ರಸಂಗವಿರಲಿಲ್ಲ. ಆತನ ಪ್ರೀತಿಪಾತ್ರಳಾದ ತಂಗಿಯೇ ಅವನಲ್ಲಿ ಕಳವಿನ ವಿಷಯದ ಸಂಶಯ ತಕ್ಕೊಂಡ ಬಳಿಕ, ಪರರಾಷ್ಟ್ರ ವಿಭಾಗದ ಮೇಲಧಿಕಾರಿಗಳು ಅವನ ಮೇಲೆ ಸಂದೇಹವಿಹೀನರಾಗಿರುವರೆಂಬ ಬಗ್ಗೆ ಆತ ನಂಬುವ ಬಗೆಯಾದರೂ ಹೇಗೆ?

ಕ್ಯಾಪ್ಟನ್ನ ರೆನ್‌ಹ್ಯಾಮ ಲಂಡನ್ನ ಪಟ್ಟಣಕ್ಕೆ ಮರಳಿ ಬಂದ ಮೂರನೇ ದಿವಸ ಮಧ್ಯಾಹ್ನದಲ್ಲಿ ಅವನನ್ನು ಮಂತ್ರಿಸಭೆಗೆ ಬರಮಾಡಿಕೊಂಡರು. ತಾನಿಲ್ಲದಾಗ ಯಾವುದೊಂದು ಗೊಂದಲವೆದ್ದಿರಬೇಕೆಂದೂ, ಅದಕ್ಕಾಗಿಯೇ ತನ್ನನ್ನೀಗ ಕರೆಯುತ್ತಿರುವರೆಂದೂ ರೆನ್‌ಹ್ಯಾಮನ ಮನಸ್ಸಿನಲ್ಲಿ ಥಕ ಥಕ ಎನ್ನುತ್ತಿತ್ತು. ಆತ ಲಾರ್ಡ ಬೋರ್ಲರ ಮಂತ್ರಣಾಗಾರ ಪ್ರವೇಸಿದಾಗ ಎಲ್ಲ ಮಂತ್ರಿಗಳೂ ಬಂದಿರುವರೆಂಬದು ಗೋಚರವಾಯಿತು ಲಾರ್ಡಬೋರ್ಲರೇ ಆ ಆಲೋಚನಾಸಭೆಯ ಪ್ರಮುಖರಾಗಿದ್ದರು. ನೀನು ಇಂದು ರಾತ್ರಿಯೇ ಅವಶ್ಯಕ ಕಾಗದ-ಪತ್ರಗಳೊಡನೆ ಕೇನಿಯಾದ ರಾಜಧಾನಿಗೆ ಹೊರಡಬೇಕೆಂದು ಬೊರ್ಲರ ಕ್ಯಾಪ್ಟನ್ ರೆನ್‌ಹ್ಯಾಮನಿಗೆ ಆಜ್ಞಾಪಿಸಿದ.

ಅನಂತರ ಪರರಾಷ್ಟ್ರ ಮಂತ್ರಿ ರೆನ್‌ಹ್ಯಾಮನನ್ನು ಕುರಿತು:—ಕ್ಯಾಪ್ಟನ್ನರೇ, ಈ ಪರರಾಷ್ಟ್ರ ವಿಭಾಗದೊಳಗಿನ ನಿಮ್ಮ ಕೆಲಸವನ್ನು ನೀವು ಬಹು ದಕ್ಷತೆಯಿಂದಲೂ, ತತ್ಪರತೆಯಿಂದಲೂ ಮಾಡುತ್ತಿರುವದನ್ನು ಕಂಡು ನಾವು ಗಳೆಲ್ಲ ನಿಮ್ಮ ವಿಷಯವಾಗಿ ಹೆಚ್ಚಾಗಿ ಸಂತೋಷಗೊಂಡಿರುತ್ತೇವೆ. ಅಂತೆಯೇ ಈಗಲಾದರೂ ಈ ಬಹು ಮಹತ್ವದ ಕೆಲಸವನ್ನು ಮಾಡಲಿಕ್ಕೆ ನೀವೇ ಅರ್ಹರೆಂದು ಇದನ್ನು ನಿಮಗೇ ಒಪ್ಪಿಸಿರುತ್ತೇವೆ, ಎಂದು ನುಡಿದ.

ಆಗ ರೆನ್‌ಹ್ಯಾಮು ಅವರೆಲ್ಲರಿಗೆ ಉತ್ತರ ರೂಪವಾಗಿ ನುಡಿದನೇನಂದರೆ:—ನಾನು ಶಕ್ತಿಮೀರಿ ಹೆಣಗಿ ನನ್ನ ಕಾರ್ಯಸಾಧನೆಗೆ ಭಂಗ ತಂದುಕೊಳ್ಳುವದಿಲ್ಲ. ಇದಕ್ಕೂ ಹೆಚ್ಚಿಗೆ ಹೇಳಲೇನು?

'ನಿಮ್ಮ ಮೇಲೆ ಸಂಪೂರ್ಣ ವಿಶ್ವಾಸವಿರದಿದ್ದರೆ ನಾವು ನಿಮ್ಮನ್ನು ಈ ಕೆಲಸಕ್ಕೆ ನಿಯೋಜಿಸುತ್ತಿರಲಿಲ್ಲ. ಇಂಗ್ಲಂಡವೂ ಫ್ರಾನ್ಸವೂ ಒಂದೇ ಕಾಲಕ್ಕೆ ಕೇನಿಯಾ ಗವರ್ನಮೆಂಟಿಗೆ ಸಾಲಕೊಡುವ ಸಂಕಲ್ಪ ಮಾಡಿರುತ್ತವೆ. ಆ ಸಾಲವನ್ನು ನಾವು ಅವರಿಗೆ ಯಾವ ಕರಾರುಗಳ ಮೂಲಕ ಕೊಡುತ್ತೇವೆಂಬದನ್ನು ತಿಳಿಸುವ ಸಲುವಾಗಿಯೇ ನಾವು ನಿಮ್ಮನ್ನು ಅಲ್ಲಿಗೆ ಕಳಿಸುತ್ತಿರುವೆವು. ಈ ಕಾರಾರುಗಳು ಎಷ್ಟು ಗೌಪನೀಯ ಗಳೆಂಬದು ಹೇಳಲಶಕ್ಯ. ಇವು ಯಾವದೊಂದು ಕಾರಣದಿಂದ ಪ್ರಕಟವಾದರೆ, ಹಾಗು ಇವುಗಳನ್ನು ಯುರೋಪದೊಳಗಿನ ಯಾವುದೊಂದು ದೇಶದ ಸರಕಾರ ತಿಳಿದುದಾದರೆ, ಬಹು ಅನರ್ಥವುಂಟಾಗುವದು. ಇಷ್ಟೇ ಅಲ್ಲ, ಅದರಿಂದ ಮತ್ತೊಂದು ಮಹಾಯುದ್ಧ ಕೂಡ ಪ್ರಾರಂಭವಾಗಬಹುದು, ರೆನ್‌ಹ್ಯಾಮರೇ, ಈ ಕರಾರ ಪತ್ರದಲ್ಲಿ ಕಾಣಿಸಿದ ಶರ್ತುಗಳ ಹೊರತು, ಇನ್ನೊಂದು ವಿಶೇಷ ಮಹತ್ವದ ಶರ್ತನ್ನು ಇದರಲ್ಲಿ ಬೇಕೆಂತಲೇ ಕಾಣಿಸಿರುವದಿಲ್ಲ. ನೀವು ಅದನ್ನು ಅಲ್ಲಿಯ ಸಭಾಪತಿಗೆ ಬಾಯಿಮಾತುಗಳಿಂದಲೇ ತಿಳಿಸಬೇಕು. ಆ ಶರ್ತನ್ನು ಬೇರೆ ಕಾಗದದಲ್ಲಿ ಬರೆಯಲ್ಪಟ್ಟಿದೆ. ನೀವು ಆ ಕಾಗದವನ್ನು ಒಯ್ಯಕೂಡದು. ಆ ಕರಾರನ್ನಷ್ಟು ಇಲ್ಲಿಯೇ ಬಾಯಿಪಾಠ ಮಾಡಿಕೊಳ್ಳಬೇಕು. ನಿಮಗೆ ಅದು ಬಾಯಿಪಾಠ ಆದ ಕೂಡಲೆ ಆ ಕಾಗದ ಸುಟ್ಟು ಬೂದಿ ಮಾಡಿಬಿಡಬೇಕಾಗಿದೆ. ಅದರ ಅವಶೇಷ ಕೂಡ ಯಾರ ಕೈಗೂ ಸಿಗಕೂಡದು. ನೀವು ಇಂದು ರಾತ್ರಿ ಎಂಟಕ್ಕೆ

ನಮ್ಮ ಮನೆಗೆ ಬರತಕ್ಕದ್ದು. ರಾತ್ರಿಯ ಊಟ ನಮ್ಮಲ್ಲಿಯೇ ಮಾಡಬೇಕು. ಆಗ ನಾನು ನಿಮಗೆ ಆ ವಿಶೇಷ ಶರ್ತು ಹೇಳುವೆನು. ಅದನ್ನು ನೀವು ಬಾಯಿಪಾಠ ಮಾಡಿ ನನಗೊಪ್ಪಿಸಬೇಕು; ಆದರಿಂದ ನಿಮ್ಮ ಬಾಯಿಪಾಠಿನಲ್ಲಿ ತಪ್ಪುಗಳುಳಿಯಲಾರವು. ನೀವು ಹೋಗತಕ್ಕಲ್ಲಿಗೆ ಯಾವ ಮಾರ್ಗದಿಂದ ಹೋಗಬೇಕೆಂಬದನ್ನೂ ಆಗಲೆ ನಿಮಗೆ ತಿಳಿಸಲಾಗವದು. ಈ ವಿಷಯಗಳ ಬಗ್ಗೆ ಒಳ್ಳೇ ಜಾಗರೂಕರಾಗಿರುವದು ಅತ್ಯಂತಾವಶ್ಯಕ ಯಾಕಂದರೆ ವೈರಿಗಳ ಅನುಚರರು ಯಾವಾಗಲೂ ನಿಮ್ಮನ್ನು ಅನುಸರಿಸುವವರೇ. ಇಷ್ಟೇ ಅಲ್ಲ; ಅದರು ಯಾದೊಂದು ಬಗೆಯಿಂದ ನಿಮ್ಮ ಪ್ರಯಾಣಕ್ಕೆ ಅಡ್ಡಿಮಾಡಬಹುದಲ್ಲದೆ, ನಿಮ್ಮನ್ನು ಕಡು ವಿಪತ್ತಿಗೆ ಕೂಡ ಕೆಡವಬಹುದೆಂಬ ಅನುಮಾನ ನಿಷ್ಕಾರಣವಾದುದಲ್ಲ,' ಹೀಗೆಂದು ನುಡಿದು, ಲಾರ್ಡ ಬೋರ್ಲ ಆವನಿಗೊಂದು ಕಾಗದವನ್ನಿತ್ತ.

ಕ್ಯಾಪ್ಟನ್ ರೆನ್‌ಹ್ಯಾಮ ಲಾರ್ಡ ಬೋರ್ಲ ಕೊಟ್ಟ ಆ ಕಾಗದ ತಕ್ಕೊಂಡು ನೋಡುತ್ತಾನೆ; ಅದರೊಳಗಿನ ಆ ಕರಾರು ೧೫-೨೦ ಸಾಲುಗಳಿಗಿಂತ ಹೆಚ್ಚು ದೊಡ್ಡವಾಗಿರಲಿಲ್ಲ. ಅವನು ಅವುಗಳನ್ನು ಪಾಠ ಮಾಡಿ, ಅವುಗಳ ಮಹತ್ವವನ್ನು ತಿಳಿದನು. ಆ ಶರ್ತಿನ ಮೇರೆಗೆ ಕೆಲಸವಾಗುವ ಮೊದಲೇ ಅವು ಪರಿಸ್ಫೋಟಗೊಂಡರೆ, ಎಂಥ ಅನರ್ಥವುಂಟಾದೀತೆಂಬದರ ಕಲ್ಪನೆ ಆ ಕ್ಷಣವೇ ಆತನಿಗಾಯಿತು. ಇಷ್ಟು ಜವಾಬುದಾರಿಯ ಕೆಲಸ ತನ್ನ ಮೇಲೆ ಹೊರಿಸುತ್ತಿರುವ ಬಗ್ಗೆ ಅವನಿಗೆ ತುಸ ಭಯವುಂಟಾದರೂ, ಬ್ರಿಟಿಶ ಮಂತ್ರಿಮಂಡಳ ತನ್ನಲ್ಲಿಟ್ಟಿರುವ ಅತ್ಯಂತ ವಿಶ್ವಾಸವನ್ನು ನೆನೆದು, ಆತನಿಗೆ ಬಹು ಆನಂದವೂ ಆಯಿತು. ನಾನು ಜೀವದ ಪರಿವೆ ಕೂಡ ಹಿಡಿಯದೆ ಈ ಕಾರ್ಯ ಕೊನೆಗಾಣಿಸುವೆನೆಂದು ಹೇಳಿ, ರೆನ್‌ಹ್ಯಾಮ ಮಂತ್ರಿಮಂಡಳದ ಅಪ್ಪಣೆ ಪಡೆದು ಮನೆಗೆ ನಡೆದ.

ಕ್ಯಾಪ್ಟನ್ ರೆನ್‌ಹ್ಯಾಮ ತಮ್ಮ ತಂದೆ-ಲಾರ್ಡ ಬೋರ್ಲರ ಕೂಡ ಇಂದು ರಾತ್ರಿ ಊಟಕ್ಕೆ ತಮ್ಮಲ್ಲಿಗೆ ಬರುವನೆಂಬದನ್ನು ತಿಳಿದ ಲೇಡೀ ಎಲೀಸೆ ರೆನ್‌ಹ್ಯಾಮನ ಸಂತುಷ್ಟತೆಗಾಗಿ ಆತನ ಪ್ರಣಯಿನಿಯಾದ ಛಾಯೋಲೆಗೂ ಟೆಲಿಫೋನಿನಿಂದ ನಿಮಂತ್ರಣ ಕಳಿಸಿ, ಅವಳನ್ನೂ ಬರಹೇಳಿದ್ದಳು; ಛಾಯೋಲೆಯಾದರೂ ತನ್ನ ಪ್ರಿಯ ಸಖಿಯ ಬಿನ್ನಹವನ್ನು ಅವಮಾನ್ಯ ಮಾಡದೆ ಅಂದು ಸಂಜೆಗೆ ಅಲ್ಲಿಗೆ ಬಂದೇ ಬಿಟ್ಟಳು.

ಊಟವಾದ ಮೇಲೆ ಲಾರ್ಡ ಬೋರ್ಲರು ಪ್ರಸಂಗ ನೋಡಿ ರೆನ್ ಹ್ಯಾಮುನಿಗೆ ಹೇಳುತ್ತಾರೆ:—ನೀನು ಈ ಕೆಲಸ ಚೆನ್ನಾಗಿ ಮಾಡಿಕೊಂಡು ಬಂದುದಾದರೆ, ಆದರ ಪ್ರತಿಫಲವೆಂದು ನಿನ್ನನ್ನು ಒಳ್ಳೇ ದೊಡ್ಡ ಚಾಕರಿಯ ಮೇಲೆ ನೇಮಿಸಲಾಗುವದು. ಆದರಿಂದ ಭವಿಷ್ಯ ಕಾಲದಲ್ಲಿ ನಿನಗೆ ದುಡ್ಡಿನ ಮತ್ತು ಮಾನ-ಸಂಭ್ರಮಗಳ ಕೊರತೆಯುಂಟಾಗಲಾರದು; ಅಲ್ಲದೆ ನಿನ್ನ ವಿವಾಹಕ್ಕುಂಟಾಗಿರುವ ಆತಂಕವೂ ದೂರಾಗುವದು. ಈ ಅಭಯ ವಚನವನ್ನು ಕೇಳಿ ಕ್ಯಾಪ್ಟನ್ನನ ಆನಂದ ಮೇರೆದಪ್ಪಿತು. ಆತನ ಅಂತರಂಗದಲ್ಲಿ ಲಾರ್ಡ ಬೋರ್ಲರ ವಿಷಯದ ಕೃತಜ್ಞತೆ ಉಕ್ಕೇರಿತು.

ಇದೆಲ್ಲ ನಡೆದಾಗ ಭಾಯೋಲೆ ಚಿಂತಾಗ್ರಸ್ತಳಂತೆಯೂ, ದುಃಖಿತಳಂತೆಯೂ ತೋರುತ್ತಿದ್ದಳು; ಆದರೆ ಕ್ರಮೇಣ ಅವಳ ಮನಸ್ಸು ಪ್ರಸನ್ನವಾಗತೊಡಗಿತು. ಊಟವಾದ ಬಳಿಕ ಅವಳು ಪ್ರಫುಲ್ಲಚಿತ್ತದಿಂದ ಹರಟೆ ಹೊಡೆಯುತ್ತಿದ್ದಳು ಅಂದಿನ ಆ ಔತಣಕ್ಕೆ ಹೊರಗಿನವರಾರೂ ಇರಲಿಲ್ಲ. ಎಲೀಸೆಯ ಪ್ರಿಯಕರನಾದ ಡ್ಯೂಕ ವಿಲ್ಯಮ್ಮನೂ ಅಂದು ನಿಮಂತ್ರಿತನಾಗಿದ್ದನೆಂಬದನ್ನು ಹೇಳಲವಶ್ಯವಿಲ್ಲ. ರೆನ್‌ಹ್ಯಾಮುನಿಗೆ ಹೇಳುವದಾದ ಮೇಲೆ, ಲಾರ್ಡ ಬೋರ್ಲರು ವಿಲ್ಯಮ್ಮನನ್ನುದ್ದೇಶಿಸಿ:—ಡ್ಯೂಕಾ, ನೀನು ಭಾಯೋಲೆ ಮತ್ತು ಎಲೀಸೆಯರೊಡನೆ ಡ್ರಾಯಿಂಗ ರೂಮಿಗೆ ನಡೆ. ಯಾಕಂದರೆ, ಕಾಫಿಯ ಸಿದ್ಧತೆ ಅಲ್ಲಿಯೇ ಮಾಡಲ್ಪಟ್ಟಿದೆ. ನಾನು ಈ ಮಂತ್ರಣಾಗಾರದಲ್ಲಿಯೇ ರೆನ್‌ಹ್ಯಾಮನೊಡನೆ ಒಂದು ಇಸ್ಪೇಟನಾಟವಾಡಿ, ಈಗಲೆ ಅಲ್ಲಿಗೆ ಒರುವೆ, ಎಂದು ಹೇಳಿದ

ಸಾರ್ಜಂಟ ಜೊಸೆಫ್ ಭಾರ್ನಿ ರಾಬರ್ಟ ಬ್ಲೇಕನಿಗೆ ಕೇವಲ ವಿಶ್ವಾಸಿಗ. ಆದರಿಂದ ಲಾರ್ಡಬೋರ್ಲರು ಕೆಲ ದಿನಗಳಿಂದ ಅವನನ್ನೇ ತಮ್ಮ ಮನೆಯ ಪಹರೆಯವನನ್ನಾಗಿ ನಿಯಮಿಸಿಕೊಂಡಿದ್ದರು. ಆಗ ಅವನಿಗೆ ತಮ್ಮ ಆ ಮಂತ್ರಣಾಗಾರದ ಸುತ್ತುಮುತ್ತು ಚೆನ್ನಾಗಿ ಪಹರೆ ಮಾಡ ಹೇಳಿ, ಬೋರ್ಲ ರೆನ್‌ಹ್ಯಾಮನೊಡನೆ ಮಂತ್ರಣಾಗಾರವನ್ನು ಪ್ರವೇಶಿಸಿ, ಬಾಗಿಲವನ್ನಿಕ್ಕಿಕೊಂಡ. ಕೆಲ ನಿಮಿಷಗಳನ್ನು ಇಸ್ಪೇಟನಾಟದಲ್ಲಿ ಕಳೆದ ನಂತರ, ಬೋರ್ಲ ತನ್ನ ಟಕ್ಕಣದೊಳಗಿನದೊಂದು ಸಣ್ಣ ಚೀಟಿಯನ್ನು ರೆನ್‌ಹ್ಯಾಮುನ ಕೈಗಿತ್ತು:—ಈ ಮುಖ್ಯ ಶರ್ತನ್ನೇ ನೀನು ಚೆನ್ನಾಗಿ ಬಾಯಿಪಾಠ ಮಾಡಬೇಕು. ಇದನ್ನು ನೀನು ಈಗಲೆ ಪಾಠ ಮಾಡು. ಇದ

ರೊಳಗಿನದೊಂದು ಅಕ್ಷರವನ್ನೂ ತಪ್ಪದಂತೆ ಪಾಠಮಾಡಿ ನನಗೊಪ್ಪಿಸು, ಎಂದಂದ.

ಕೆಲ ನಿಮಿಷಗಳ ವರೆಗೆ ರೆನ್‌ಹ್ಯಾಮು ಆ ಕರಾರನ್ನು ಮನಸ್ಸಿನಲ್ಲಿಯೇ ಚೆನ್ನಾಗಿ ಪಾಠ ಮಾಡಿಕೊಂಡು, ಬಳಿಕ ಅನ್ನುತ್ತಾನೆ:— ಲಾರ್ಡರೇ, ನಾನಿದನ್ನು ಚೆನ್ನಾಗಿ ಮನೋಗತ ಮಾಡಿಕೊಂಡಿರುತ್ತೇನೆ. ಇದು ನನ್ನ ಮುಖೋದ್ಗತವಾಗಿದೆಯೋ-ಇಲ್ಲವೋ ನೋಡಿರಿ, ಅಂದು ತೋರಿಸುತ್ತೇನೆ, ಎಂದು ಹೇಳಿ, ಆ ಚೀಟಿಯನ್ನು ಅವರ ಕೈಗಿತ್ತ.

ಬಳಿಕ ರೆನ್‌ಹ್ಯಾಮು ಬಹು ಮೆಲ್ಲಗೆ, ಆದರೆ ಲಾರ್ಡ ಬೋರ್ಲಸಿಗೆ ಸ್ಪಷ್ಟವಾಗಿ ಕೇಳಿಸುವ ಹಾಗೆ ಆ ಶರ್ತನ್ನು ಎರಡೆರಡು ಸಾರೆ ಅಂದು ತೋರಿಸಿದ. ಲಾರ್ಡಬೋರ್ಲ ಆ ಚೀಟಿಯೊಳಗಿನದೊಂದು ಶಬ್ದದ ಕಡೆಗೆ ಬೊಟ್ಟುಮಾಡಿ ತೋರಿಸಿ:— ಈ ಕರಾರಿನಲ್ಲಿ ಈ ಶಬ್ದವೇ ಪ್ರಾಮುಖ್ಯವಾದದ್ದು. ಇದನ್ನು ನೀನು ಚೆನ್ನಾಗಿ ಲಕ್ಷ್ಯದಲ್ಲಿಟ್ಟುಕೋ. ಹೀಗೆಂದು ಹೇಳಿ, ಆತ ಆ ಚೀಟಿ ಹರಿದು, ಅದಕ್ಕೆ ಬೆಂಕೀ ಹಚ್ಚಿ ಸುಟ್ಟುಬಿಟ್ಟ ಆಗ ರೆನ್‌ಹ್ಯಾಮನೆನ್ನುತ್ತಾನೆ:—'ಲಾರ್ಡ ಮಹಾಶಯರೇ, ತಾವು ಮಧ್ಯಾಹ್ನದಲ್ಲಿ ಮಂತ್ರಿಮಂಡಲದ ಸಭೆಯ ಕಾಲಕ್ಕೆ ಕೊಟ್ಟ ಉಳಿದ ಶರ್ತಗಳ ಕಾಗದಗಳು ಏನಕೇನ ಪ್ರಕಾರದಿಂದ ಶತ್ರುಗಳ ಹಸ್ತಗತವಾದರೂ ಈ ಪ್ರಾಮುಖ್ಯವಾದ ಕರಾರು ಮಾತ್ರ ಯಾವಾಗಲೂ ಅವರ ಕೈಸೇರಲಾರದು ಯಾಕಂದರೆ, ಇದು ನನ್ನ ಕಂಠೋದ್ಗತವಾಗಿದೆ. ನನ್ನ ಕುತ್ತಿಗೆ ಕೊಯ್ದರೂ ಕೂಡ ಇದು ಅವರ ಕೈಸೇರುವ ಹಾಗಿಲ್ಲ.' ಹೀಗೆಂದು ಕ್ಯಾಪ್ಟನ್ ರೆನ್‌ಹ್ಯಾಮು ಮಾತನಾಡುವಾಗ ಮಾರ್ಕ್ವಿಸ ಹ್ಯಾಮನ್ ಆರ್ಟನ್ನ ಯಾವ ಬಗೆಯ ಸಾಹಸಿಯೆಂಬದು ಪಾಪ ಅವನಿಗೇನು ಗೊತ್ತು? ಗೊತ್ತಿದ್ದರೆ, ಅವನ ಬಾಯಿಂದ ಆ ಶಬ್ದಗಳು ಹೊರಡುತ್ತಿದ್ದವೋ-ಇಲ್ಲವೋ ಎಂಬದನ್ನು ಅದಾರು ಹೇಳಬೇಕು? ಅವರು ಆ ಮಂತ್ರಣಾಗಾರದಿಂದ ಡ್ರಾಯಿಂಗ ರೂಮಿಗೆ ಹೋಗಿ ಕಾಫಿ ಕುಡಿಯಲಿಕ್ಕೆ ಹತ್ತುವ ಮೊದಲೇ ಹ್ಯಾಮನ್ ಆರ್ಟನ್ನನಿಗೆ ಕ್ಯಾಪ್ಟನ್ ರೆನ್‌ಹ್ಯಾಮು ಆ ಮಂತ್ರಣಾಗಾರದಲ್ಲಿ ಕುಳಿತು ಬೋರ್ಲರಿಗೆ ಪಾಠ ಮಾಡಿ ತೋರಿಸಿದ ಆ ಅತಿ ಗುಪ್ತ ಶರ್ತಿನ ಟಾಯಿಪು ಹೊಡೆದ ಪ್ರತಿ ಅತನ ಆ ಗುಪ್ತಕೋಣೆಯೊಳಗಿನ ಹಿತ್ತಾಳಿಯ ಕೊಳವೆಯೊಳಗಿಂದ ದೊರೆತಿರಬಹುದೆಂಬದೂ, ಅದನ್ನು ಆತ ಓದುತ್ತಿರಬಹು

ದೆಂಬುದೂ ಲಾರ್ಡ ಬೋರ್ಲನಿಗಾಗಲಿ ರೆನ್‌ಹ್ಯಾಮನಿಗಾಗಲಿ ಕಲ್ಪನೆ ಕೂಡ ಆಗಲಿಲ್ಲ!

ಲಾರ್ಡ ಬೋರ್ಲರ ಆ ಡ್ರಾಯಿಂಗ ರೂಮಿನಲ್ಲಿ ಕೆಲ ಕಾಲದ ವರೆಗೆ ಗೀತವಾದ್ಯಗಳಾದವು. ಕಡೆಗೆ ಡ್ಯೂಕ ವಿಲ್ಯಮ್ಸ ಲೇಡೀ ಎಲೀಸೆಯೊಡನೆ ಒಂದು ಮೂಲೆಯಲ್ಲಿ ಕುಳಿತು ಮೆಲ್ಲಮೆಲ್ಲನೆ ಮಾತಾಡಹತ್ತಿದ. ಭಾಯೋಲೆಯೂ ಎದುರಿಗಿನ ಪಿಯಾನೋ ಪೆಟ್ಟಿಗೆಯ ಸ್ವರವನ್ನು ನಿಲ್ಲಿಸಿ, ರೆನ್‌ಹ್ಯಾಮನ ಮೋರೆಯ ಕಡೆಗೆ ನೋಡಿ ನಿಟ್ಟುಸಿರುಗಳೆದಳು. ಭಾವೀ ವಿರಹದ ವೇದನೆಯಿಂದ ಅವಳ ಹೃದಯ ತಲ್ಲಣಗೊಂಡಿತು. ಆಗ ರೆನ್‌ಹ್ಯಾಮ ಗದ್ಗದ ಕಂಠದಿಂದ:– ಬಾಯೋಲೆ, ಇಂದು ರಾತ್ರಿಯೇ ರಾಜಕಾರ್ಯಕ್ಕಾಗಿ ನಾನು ದೇಶಾಂತರಕ್ಕೆ ಹೊರಡಬೇಕಾಗಿದೆ. ನಾನು ನನ್ನ ಕೆಲಸ ಪೂರೈಸಿ ಬಂದುದಾದರೆ, ನಮ್ಮಗಳ ಆಶೆ ಪೂರ್ಣವಾಗುವದು; ಹಾಗು ನಮ್ಮ ವಿವಾಹಸಮಾರಂಭದ ಆತಂಕಗಳೆಲ್ಲ ದೂರಾಗುವವು.

ಆತನ ನುಡಿ ಕೇಳಿ ಭಾಯೋಲೆಯ ಮುಖಮಂಡಲ ಕ್ಷಣಮಾತ್ರವೇ ಹರ್ಷಪ್ರಫುಲ್ಲಿತವಾಯಿತು; ಆದರೆ ಪರಕ್ಷಣದಲ್ಲಿಯೇ ಅವಳ ನೇತ್ರಗಳು ಕಂಬನಿಗಳಿಂದ ತುಂಬಲು, ಅವಳು ರುದ್ಧ ಕಂಠದಿಂದ:— ಪ್ರಿಯಕರಾ, ಬ್ರಹ್ಮ ನನ್ನ ಹಣೆಯಬರೆಹದಲ್ಲಿ ಅಷ್ಟು ಸೌಖ್ಯವನ್ನಿಟ್ಟಂತೆ ತೋರುವದಿಲ್ಲ. ನೀವು ಇನ್ನು ನನಗೆ ಸುಖದ ಲೋಭ ತೋರಬೇಡಿರಿ; ನನಗೆ ಈಗ ಯಾವ ಸಂಗತಿಯನ್ನೂ ತಿಳಿಸಬೇಡಿರಿ; ಆದರೆ ನೀವು ಈಗ ಯಾವ ಮಾರ್ಗದಿಂದ ದೇಶಾಂತರಕ್ಕೆ ತೆರಳುವಿರೆಂಬದನ್ನು ಮಾತ್ರ ನನಗೆ ಹೇಳಲೇಬೇಕು.

'ಅದನ್ನು ಕೇಳಿಕೊಂಡರೆ, ನಿನಗಾಗುವ ಪ್ರಯೋಜನವೇನು? ನಿನ್ನೆದುರಿಗೆ ಅದನ್ನು ಹೇಳಲಿಕ್ಕೆ ಅಡ್ಡಿಯಿರಲಿಲ್ಲ; ಆದರೆ ನಾನು ಯಾವ ಮಾರ್ಗದಿಂದ ಹೊರಡಬೇಕೆಂಬದನ್ನು ಲಾರ್ಡ ಬೋರ್ಲರೇ ಇನ್ನೂ ನನಗೆ ತಿಳಿಸಿರುವದಿಲ್ಲ. ಅವರಿಂದ ಕಟ್ಟಕಡೆಗೆ ಅಪ್ಪಣೆ ಪಡೆದು ಹೊರಡುವಾಗಲೇ ಅವರು ನನಗದನ್ನು ತಿಳಿಸಬಹುದಾಗಿದೆ.'

ರೆನ್‌ಹ್ಯಾಮನ ಈ ನುಡಿ ಕೇಳಿ, ಭಾಯೋಲೆಯ ತಲೆಯ ಮೇಲಿನ ಬಹು ದೊಡ್ಡ ಭಾರ ಒಮ್ಮೆಲೆ ಇಳಿದು, ಹಾಯ್ ಎನಿಸಿತು. ಆಗ ಅವಳ ಮುಖ ಮತ್ತೆ ಪ್ರಫುಲ್ಲವಾಯಿತು. ರೆನ್‌ಹ್ಯಾಮನಿಗೆ ಅದು ಬಹು ಸುಂದರ

ವಾಗಿ ತೋರಿತು; ಆದರೆ ಹೀಗಾಗಲು ಕಾರಣವೇನೆಂಬದನ್ನು ಮಾತ್ರ ಆತ ಭಾಯೋಲೆಯನ್ನು ಒತ್ತಾಯ ಪಡಿಸಿ ಕೇಳದಾದನು. ಅಷ್ಟರಲ್ಲಿ ಭಾಯೋಲೆ ಒಮ್ಮೆಲೆ ಅಲ್ಲಿಂದೆದ್ದು ಎಲೀಸೆಯ ಬಳಿಗೆ ಹೋಗಿ ಕುಳಿತು ಕೊಂಡಳು.



## ೧೫ನೇ ತೆರೆ:—ಶತ್ರುಪಂಜರದೊಳಗಿನ ಭಾಯೋಲೆ.

ಅಂದು ರಾತ್ರಿ ಹನ್ನೊಂದರ ನಂತರ ಲಾರ್ಡ ಬೋರ್ಲರ ಇಂಗಿತದ ಮೇರೆಗೆ ರೆನ್‌ಹ್ಯಾಮ ವಿದೇಶದ ಯಾತ್ರೆಗಾಗಿ ಅವರ ಮನೆಯಿಂದಲೇ ಹೊರಟ ಆತ ಹೊರಟೊಡನೆಯೇ ಆತನ ಪ್ರಣಯಿನಿಯಾದ ಭಾಯೋಲೆಯೂ ಎದ್ದು ನಿಂತಳು; ಹಾಗು ತಲೆ ನೋಯಹತ್ತಿದೆಯೆಂದು ಹೇಳಿ, ಲೇಡೀ ಎಲೀಸೆಯ ಮತ್ತು ಅವಳ ತಂದೆಯ ಅಪ್ಪಣೆ ಪಡೆದು ಹೊರ ಹೊರಟಳು.

ಭಾಯೋಲೆ ಅಲ್ಲಿಂದ ಹೊರಟವಳೇ ತನ್ನ ಮನೆಗೆ ಹೋಗುವದಕ್ಕಾಗಿ ಆ ಅಟ್ಟದ ಪಾವಟಿಗೆಗಳನ್ನಿಳಿಯ ಹತ್ತಿದಳು. ಅಷ್ಟರಲ್ಲಿ ರೆನ್‌ಹ್ಯಾಮ ಅವಳ ದಾರಿ ಕಾಯುತ್ತ ಅಲ್ಲಿಯೇ ಒತ್ತಟ್ಟಿಗೆ ಮರೆಗೆ ನಿಂತಿದ್ದುದು ಅವಳಿಗೆ ಕಾಣಿಸಿತು. ಆತ ಮುಂದೆ ಬಂದವನೇ ಭಾಯೋಲೆಯನ್ನು ಅಡ್ಡಕಟ್ಟಿ:— ಪ್ರಿಯತಮೇ, ನಾನಿನ್ನು ಹೊರಡಲೋ? ನಿನ್ನೀ ವಿಷಣ್ಣ ವದನವನ್ನು ನೋಡಿ ನನ್ನ ಮನಸ್ಸಿಗೆ ಬಹಳ ದುಃಖವಾಗುತ್ತಿದೆ. ನಿನ್ನ ಈ ಬಗೆಯ ದುಃಖಕ್ಕೆ ಕಾರಣವೇನೆಂಬದನ್ನು ತಿಳಿಯಲಶಕ್ಯವಾಗಿದೆ. ಆದರೂ ನಾನು ಮರಳಿ ಬಂದ ಕೂಡಲೆ ನಿನ್ನ ಪ್ರಫುಲ್ಲ ಮೊಗ ನನ್ನ ದೃಷ್ಟಿಗೆ ಗೋಚರ ವಾದೀತೆಂದು ನೆರೆ ನಂಬಿರುತ್ತೇನೆ. ಲಾರ್ಡ ಬೋರ್ಲರು ಶೀವ್ರವೇ ನನ್ನನ್ನು ದೊಡ್ಡ ಹುದ್ದೆಗೇರಿಸುವೆವೆಂದು ಅಭಿವಚನವಿತ್ತಿರುತ್ತಾರೆ. ಅವರು ನಿಶ್ಚಯ ವಾಗಿಯೂ ತಮ್ಮ ವಚನ ಪಾಲಿಸತಕ್ಕವರು. ಹಾಗಾಯಿತೆಂದರೆ, ನಮ್ಮ ವಿವಾಹಸಂಬಧಂದ ಎಲ್ಲ ಎಡರುಗಳೂ ನಿರ್ನಾಮವಾಗುವವು. ಆ ಶುಭ ಮುಹೂರ್ತಕ್ಕೆ ಇನ್ನು ಹೆಚ್ಚು ವಿಲಂಬವಿರುವದಿಲ್ಲ.

ಕೂಡಲೆ ಭಾಯೋಲೆ ಆತನ ಹೆಗಲ ಮೇಲೆ ಗೋಣು ಚೆಲ್ಲಿ:—ದೇವರು ನನ್ನ ದೈವದಲ್ಲಿ ಆ ಸೌಖ್ಯವನ್ನು ಬರೆದಿರುವನೇ? ಇಲ್ಲ. ಶಕ್ಯವೆಂದು ನಾನು ಅದನ್ನು ನಂಬುವದಿಲ್ಲ. ನಾನು ನಿನ್ನ ಹೆಂಡತಿಯಾಗಲಿಕ್ಕೆ ತೀರ ಅಯೋಗ್ಯಳು!

ರೆನ್‌ಹ್ಯಾಮ ಓರೆ ನೋಟದಿಂದ ಭಾಯೋಲೆಯ ಮುಖದ ಕಡೆಗೆ ನೋಡಿ ನಕ್ಕು:-ಛೇ, ವಿನಯ ಪ್ರಕಟಿಸುವ ವೇಳೆ ಇದೆಯೇ? ನೀನು ನನಗೆ ತಕ್ಕವಳಲ್ಲವೇ? ಅದೇಕೆ? ನಾನೇನು ಒಮ್ಮೆಲೆ ದೇವ-ದೇವತೆಯಾಗಿ ಬಿಟ್ಟೆನೇ? ಆದರೆ ಯಾವ ದೇವರೂ ನಿನ್ನನ್ನು ಅಯೋಗ್ಯಳೆಂದು ತಿಳಿಯಲು ಶಕ್ಯವಿಲ್ಲ. ನೀನು ನಿಜವಾಗಿಯೂ ನನ್ನ ಭಾಗದ ದೇವಿ! ನನ್ನ ಇಷ್ಟಾರ್ಥ! ನನ್ನ ಸ್ವರ್ಗ! ನನ್ನ ಪ್ರಿಯಕರ ರಾಣಿ! ಆದುದರಿಂದ ನಿನಗಿನ್ನು ಏತರ ಭಯವೂ ಇರುವದಿಲ್ಲ. ನಿನ್ನನ್ನು ವಿವಾಹವಾಗಿ ನರಕಕ್ಕೆ ಹೋಗಲಿಕ್ಕೆ ಕೂಡ ನಾನು ಸಂಪೂರ್ಣವಾಗಿ ಸಿದ್ಧನಿರುತ್ತೇನೆ. ಪ್ರೇಮದ ಸಲುವಾಗಿ ನನ್ನಷ್ಟು ಭೀಷಣ ಸ್ವಾರ್ಥತ್ಯಾಗ ಎಂದೂ ಯಾರೂ ಮಾಡಲಿಕ್ಕಿಲ್ಲೆಂಬದನ್ನು ಲೋಕದವರು ಖಾತ್ರಿ ಮಾಡಿಕೊಳ್ಳಲಿ.

ಆಗ ಭಾಯೋಲೆ ಏನನ್ನೋ ನುಡಿಯಬೇಕೆಂದಳು. ಅಷ್ಟರಲ್ಲಿ ಸಮೀಪದಲ್ಲಿ ಯಾರದೋ ಕೆಮ್ಮಿನ ಶಬ್ದ ಕೇಳಿಸಲು, ಆಕೆ ತುಸ ಬೆದರಿ ನಿಂತಳು. ಅಲ್ಪಾವಕಾಶದಲ್ಲಿಯೇ ಲಾರ್ಡ ಬೋರ್ಲರೂ ಲೇಡೀ ಎಲೀಸೆಯೂ ಅಲ್ಲಿಗೆ ಬಂದೇ ಬಿಟ್ಟರು.

'ಈ ಅಧಿಕಾರಪತ್ರ ತಕ್ಕೋ. ಈ ಪರದೇಶಾಗಮನವು ನಿನಗೆ ಬಹು ಲಾಭದಾಯಕವಾಗಲಿ!" ಎಂದು ಹೇಳಿ, ಬೋರ್ಲನು ಒಂದು ಲಕ್ಕೋಟೆ ರೆನ್‌ಹಾಮನ ಕೈಗಿತ್ತ.

ಅಷ್ಟರಲ್ಲಿ ಎರಡು ಬಾಡಿಗೆಯ ಮೋಟಾರ ಕಾರಗಳು ಅಲ್ಲಿಗೆ ಬಂದು ನಿಂತುಕೊಂಡವು. ಕ್ಯಾಪ್ಟನ್ ರೆನ್‌ಹಾಮ ಅವುಗಳಲ್ಲೊಂದರಲ್ಲಿ ಭಾಯೋಲೆಯನ್ನು ಕೂಡ್ರಿಸಿ, ತಾನು ಬೇರೆ ಗಾಡಿಯನ್ನು ಆರೋಹಿಸಿದ. ಕೂಡಲೆ ಆ ಎರಡೂ ಟ್ಯಾಕ್ಸಿಗಳು ಭಿನ್ನ ಭಿನ್ನ ಮಾರ್ಗ ಹಿಡಿದು ವೇಗದಿಂದ ನಡೆದವು.

ಭಾಯೋಲೆ ಗಾಡಿಯನ್ನೇರುತ್ತಲೆ ಬಹು ಗಂಭೀರವಾದ ಚಿಂತೆಗೊಳಗಾದ್ದರಿಂದ, ಎಷ್ಟೋ ಹೊತ್ತಿನ ವರೆಗೆ ತಾನು ಮೋಟರಿನಲ್ಲಿರು

ವೆನೋ-ಮನೆಯಲ್ಲಿರುವೆನೋ ಎಂಬದು ಕೂಡ ಆಕೆಗೆ ತಿಳಿಯಲಿಲ್ಲ. ಅವಳ ಗಾಡಿ ಒತ್ತಟ್ಟಿಗೆ ಹೋಗಿ ಒಮ್ಮೆಲೆ ನಿಲ್ಲಲು, ಅವಳ ಚಿಂತಾಪ್ರವಾಹ ಬತ್ತಿ ಹೋಯಿತು. ಕೂಡಲೆ ಆಕೆ ಗಾಡಿಯ ಬಾಗಿಲು ತೆರೆದು ತಟ್ಟನೆ ಇಳಿದಳು; ಆದರೆ ಆಕೆ ಇಳಿದು ನಿಂತದ್ದು ಅವಳ ಮನೆಯ ಎದುರಿಗಲ್ಲ, ಅದು ಲಂಡನ್ನ ಪಟ್ಟಣದೊಳಗಿನ ಕೋಲಾನ ಸ್ಟ್ರೀಟು.

ಭಾಯೋಲೆ ಆ ಮನೆಯ ಎದುರಿಗೆ ನಿಂತು ಯೋಚಿಸುತ್ತಿರಲು, ಒಮ್ಮೆಲೆ ಅದರ ತಲೆಬಾಗಿಲು ತೆರೆಯಲ್ಪಟ್ಟಿತು; ಹಾಗು ಒಬ್ಬ ಸಭ್ಯಗೃಹಸ್ಥ ಅವಳೆದುರಿಗೆ ಬಂದು ನಿಂತುಕೊಂಡ. ಅವನನ್ನು ನೋಡಿದ ಕೂಡಲೆ ಆತ ಹ್ಯಾಮನ್ ಆರ್ಟನ್ನನೇ ಎಂಬದನ್ನು ಭಾಯೋಲೆ ತಿಳಿದಳು. ಕೂಡಲೆ ಆಕೆ ಮತ್ತಿಷ್ಟು ಅಂಜಿ, ನಾಲ್ಕು ಮೊಳ ಹಿಂದೆ ಸರಿದು ನಿಂತಳು; ಆದರೆ ಆರ್ಟನ್ನ ಕ್ಷಣಾರ್ಧದಲ್ಲಿ ಅವಳ ಕೈಹಿಡಿದು:— ಇಷ್ಟೇಕೆ ತಡ? ನಾನು ಎಷ್ಟೋ ಹೊತ್ತಿನಿಂದ ನಿನ್ನ ದಾರೀ ಕಾಯುತ್ತಿದ್ದೆ. ಮತ್ತಾವ ಗೊಂದಲವೂ ಉಂಟಾಗಲಿಲ್ಲಷ್ಟೇ? ಹೀಗೆಂದು ನುಡಿಯುತ್ತ, ಭಾಯೋಲೆಯನ್ನು ಬಾಗಿಲೊಳಗೆ ಎಳೆದ.

'ಭಾಯೋಲೆ ಕೈಕೊಸರಿಕೊಳ್ಳುತ್ತ ಸಿಟ್ಟಿನಿಂದ:— ನೀನು ನನ್ನ ದಾರಿ ಕಾಯುತ್ತಿದ್ದ ಕಾರಣವೇನು? ನಾನು ಇಲ್ಲಿಗೆ ಬರಬೇಕೆಂದಿದ್ದಿಲ್ಲ; ಹಾಗು ಬರುವ ಅವಶ್ಯಕತೆಯೂ ಇರಲಿಲ್ಲ. ನಾನು ಸ್ವಂತ ಇಚ್ಛೆಯಿಂದ ಇಲ್ಲಿಗೆ ಬಂದಿರುವದಿಲ್ಲ; ಇಲ್ಲಿಗೇ ಹೋಗುವದೆಂದು ಮೊದಲೇ ಗೊತ್ತಾಗಿದ್ದರೆ ನಾನು ನಿಶ್ಚಯವಾಗಿಯೂ ಬರುತ್ತಿರಲಿಲ್ಲ.

'ಬರುತ್ತಿದ್ದಿಲ್ಲವೇ? ಬಂದೇ ಬರುತ್ತಿದ್ದೆ. ನಿನ್ನನ್ನು ಬಲಪೂರ್ವಕ ಹಿಡಿದು ತರದಿದ್ದರೆ ನೀನು ಬರುವವಳಲ್ಲ; ಅಥವಾ ಹೊಡೆಸಿ-ಬಡೆಸಿಕೊಂಡು ನೀನು ನಿನ್ನ ಸರ್ವ ನಾಶದ ಮಾರ್ಗಕ್ಕೂ ಹತ್ತುವವಳಲ್ಲೆಂಬದು ನನಗೆ ಗೊತ್ತು. ಕ್ಯಾಪ್ಟನ್ ಗೆನ್‌ಹ್ಯಾಮ ಯಾವ ಟ್ರೈಲಿನಲ್ಲಿ ಲಂಡನ್ನಿನಿಂದ ಹೊರಡುವನೆಂಬದನ್ನು ನನಗೆ ತಿಳಿಸಲಿಕ್ಕೆ ನೀನೆಷ್ಟು ಉತ್ಸುಕಳಾಗಿರುವೆಯೆಂಬದನ್ನು ನಾನರಿಯೆನೋ? ಇದಕ್ಕಾಗಿಯೇ ನನ್ನ ಸೇವಕರು ಲಾರ್ಡ ಬೋರ್ಲರ ಮನೆಗೆ ಟ್ಯಾಕ್ಸಿಯನ್ನು ತಕ್ಕೊಂಡು ಬಂದು ನಿನ್ನ ದಾರಿ ಕಾಯುತ್ತ ನಿಂತಿದ್ದರು. ನೀನು ಆ ನನ್ನ ಟ್ಯಾಕ್ಸಿಯನ್ನು ಕಂಡವಳೇ ಅದ

ಸ್ನೇರಿ ಇಲ್ಲಿಗೆ ಬಂದಿರುತ್ತೀ. ಹೀಗಿದ್ದೂ, ನೀನು ಈಗ ಹೀಗೆ ಮಾತಾಡು ವದೆಂದರೆ, ಸ್ತ್ರೀಜಾತಿಗನುಗುಣವಾದ ಅಭ್ಯಾಸವೇ ಇದೆಂದ ಹಾಗಾಯಿತು.

ಭಾಯೋಲೆ ಸಿಟ್ಟು, ಭಯ, ಅಪಮಾನಗಳಿಂದ ನಡುಗಹತ್ತಿದಳು. ಆರ್ಟಿನ್ನ ಅವಳ ಆ ಸ್ಥಿತಿಯ ಕಡೆಗೆ ನೋಡದೆ, ಅವಳನ್ನು ಮನೆಯೊಳಗೆ ಜಗ್ಗಿಕೊಂಡೇ ನಡೆದ. ಆತ ಅವಳೊಡನೆ ತನ್ನ ಸುಸಜ್ಜಿತ ಲಾಯಬ್ರರಿಯನ್ನು ಪ್ರವೇಶಿಸಿ:— ಭಾಯೋಲೆ, ನೀನು ಬೇಗನೆ ನನ್ನ ಪ್ರಶ್ನೆಯ ಉತ್ತರ ಕೊಡು. ತಡಮಾಡುವದರಿಂದ ನನ್ನ ಮೈ ಉರಿಯ ಹತ್ತುವದು.

'ಅದು ನನಗೆ ಗೊತ್ತಿಲ್ಲ. ನನಗೆ ಗೊತ್ತಿಲ್ಲದ ಸಂಗತಿ ನಾನು ನಿನಗೆ ತಿಳಿಸುವ ಬಗೆ ಹೇಗೆ? ರೆನ್‌ಹ್ಯಾಮ ಲಾರ್ಡ ಬೋರ್ಲರ ಮನೆಯಿಂದ ಹೊರಡುವ ಪೂರ್ವದಲ್ಲಿ ಅದನ್ನು ತಿಳಿದಿಲ್ಲವಾಗಿದೆ.'

ಆರ್ಟಿನ್ನ ಸಿಟ್ಟು ಬೆಂಕಿಯಾಗಿ ಭಾಯೋಲೆಯ ಕತ್ತು ಹಿಡಿದು, ಅವಳನ್ನೊಂದು ಟೇಬಲ್ಲಿನ ಬಳಿಗೆ ದೂಡಿಕೊಂಡೊಯ್ದ. ಆ ಟೇಬಲ್ಲಿನ ಮೇಲೆ ಟೆಲಿಫೋನದ ಯಂತ್ರವಿತ್ತು. ಆರ್ಟಿನ್ನ ಅದರೆದುರಿಗೆ ನಿಂತು:—'ಭಾಯೋಲೆ, ನಿನಗೆ ರೆನ್‌ಹ್ಯಾಮನ ಮನೆಯ ಟೆಲಿಫೋನಿನ ನಂಬರು ಗೊತ್ತಿರಲಿಕ್ಕೇ ಬೇಕು. ಈ ಯಂತ್ರದಲ್ಲಿ ಆ ನಂಬರ ಹೇಳು. ಬಳಿಕ ನೀನು ವಿದೇಶಕ್ಕೆ ಹೊರಡುವ ಮೊದಲು ನಿನ್ನನ್ನು ನಾನು ಕಾಣಬೇಕಾಗಿದೆಯೆಂದು ಅನ್ನು; ಹಾಗು ಅದಕ್ಕಾಗಿ ನಾನು ರೇಲ್ವೇಸ್ಟೇಶನ್ನಿಗೆ ಬರುತ್ತೇನೆಂದೂ ತಿಳಿಸು. ಹೂಂ, ಬೇಗ-ಬೇಗನೆ ಹೇಳು. ಆತ ಇಷ್ಟರಲ್ಲೇ ತನ್ನ ಮನೆಯಿಂದ ಹೊರಡಬಹುದಾಗಿದೆ,' ಎಂದು ಒತ್ತಾಯ ಪಡಿಸಿದ.

ಆಗ ಭಾಯೋಲೆ:—ನಾನು ಖಂಡಿತವಾಗಿಯೂ ಹೀಗೆ ಹೇಳಲಾರೆ. ನೀನು ಅವನನ್ನು ಯಾವ ವಿಪತ್ತಿಗೆ ಗುರಿಮಾಡುವ ಸಲುವಾಗಿ ಅವನಿಂದ ಆ ಸುದ್ದಿ ತಿಳಿಯಬಯಸುವೆಯೊ, ಅದು ತಿಳಿಯಲಶಕ್ಯವಾಗಿದೆ, ಎಂದು ಖಂಡತುಂಡಾಗಿ ಹೇಳಿಬಿಟ್ಟಳು.

ಆರ್ಟಿನ್ನ ಗರ್ಜಿಸುತ್ತ:—ನನ್ನಿಂದ ಅವಮಾನ ಹೊಂದಬಾರದೆಂಬ ಇಚ್ಛೆಯಿದ್ದರೆ, ಕ್ಷಣ ಸಹ ವಿಲಂಬ ಮಾಡದೆ ನನ್ನೀ ಮಾತನ್ನು ನಡೆಸು. ಯಾವ ಉದ್ದೇಶದಿಂದ ನಾನು ಆತನ ಪ್ರಯಾಣಮಾರ್ಗ ತಿಳಿಯಬಯಸುತ್ತಿರುವೆನೆಂಬದನ್ನು ಕೇಳುವ ಅವಶ್ಯಕತೆ ನಿನಗಿಲ್ಲ. ಆ ಅಧಿಕಾರವೂ

ನಿನ್ನದಾಗಿಲ್ಲ. ಈಗ ನೀನು ನನ್ನ ಅಪ್ಪಣೆಯಂತೆ ನಡೆಯದಿದ್ದರೆ, ನೀನು ಶತ್ರುಪಕ್ಷದವರ ಪತ್ತೆದಾರಿ ವಹಿಸಿರುವದರಿಂದಲೇ ಲೇಡೀ ಎಲೀಸೆಯೊಡನೆ ಹೀಗೆ ಗುಜುಗುಟ್ಟುವದೆಂದು ನಾನು ರೆನ್‌ಹ್ಯಾಮನಿಗೆ ತಿಳಿಸಿಬಿಡುವೆ. ರಾಜಕೀಯ ಗುಪ್ತರಹಸ್ಯಗಳ ಸ್ಫೋಟನವೇ ನಿನ್ನ ಮುಖ್ಯ ಉದ್ದೇಶವೆಂಬದನ್ನೂ ನಾನವನಿಗೆ ತಿಳಿಸಲಿಕ್ಕೆ ಮರೆಯುವದಿಲ್ಲ.

ತಾನು ಹೆಡ್ಡದಾಟವನ್ನಾಡಿ ಸೋತು, ಮುಂದಿಗೆ ಪ್ರಾಮಿಸರಿ ನೋಟು ಬರೆದು ಕೊಟ್ಟ ಸುದ್ದಿ ಮಾವನಿಗೆ ಸಪ್ರಮಾಣವಾಗಿ ತಿಳಿದರೆ, ಆತ ತನ್ನನ್ನು ಮನೆಯಿಂದ ಹೊರಗಟ್ಟುವನಲ್ಲದೆ, ತನ್ನ ಪಿತ್ರಾರ್ಜಿತ ಆಸ್ತಿಯನ್ನೂ ತನಗೆ ಹತ್ತಗೊಡಲಾರನೆಂಬದನ್ನು ತಿಳಿದಿದ್ದ ಭಾಯೋಲೆ, ಅದಕ್ಕೂ ಅಷ್ಟೊಂದು ಅಂಜದೆ, ತನ್ನ ಹೃದಯದೇವತೆಯಾದ ರೆನ್‌ಹ್ಯಾಮನಿಗೆ ಆರ್ಟನ್ನನ ಹೇಳಿಕೆಯ ಪ್ರಕಾರ ದ್ರೋಹಬಗೆಯುವದೆಂದರೆ, ತನ್ನ ನಾರೀ ಜನ್ಮವೇ ವ್ಯರ್ಥವಾಗುವದೆಂದು ತಿಳಿದಿದ್ದಳು; ಆದರೂ ಆರ್ಟನ್ನನೆದುರಿಗೆ ಆಕೆ ನಿರುಪಾಯಳಾಗಿ ಆತನಿಗೆ ರೆನ್‌ಹ್ಯಾಮನ ಮನೆಯ ಟೇಲಿಫೋನಿನ ನಂಬರ ಆಕೆಗೆ ತಿಳಿಸಿದಳು.

ಕೂಡಲೆ ಆರ್ಟನ್ನ ಟೆಲಿಫೋನ ದ್ವಾರದಿಂದ ರೆನ್‌ಹ್ಯಾಮನನ್ನು ಕರೆದ. 'ನೀನು ಯಾರು? ಏನು ಬೇಕಾಗಿದೆ?' ಎಂದು ಉತ್ತರ ಬಂದೊಡನೆಯೆ ಆರ್ಟನ್ನ:— ಕ್ಯಾಪ್ಟನ್ ರೆನ್‌ಹ್ಯಾಮ ಮನೆಯಲ್ಲಿರುವನೇ? ಭಾಯೋಲೆ ಕರೆಯುತ್ತಿರುವಳು, ಎಂದು ಕೇಳಿದ.

'ನಾನು ಇದೀಗ ಲಂಡನ್ನಿನಿಂದ ತೆರಳುವೆ. ನನಗೆ ನಿನ್ನ ಅಂಬೋಣವೇನೆಂದು ತಿಳಿದರೆ ಉತ್ತರ ಹೇಳುವೆ.'

ಭಾಯೋಲೆ ನಡುವೇ ಬಾಯಿ ಹಾಕಿ, ಉತ್ತೇಜಿತ ದನಿಯಿಂದ:—
ಈ ಬಗೆಯ ಬೇರೆಯವರ ಕೆಲಸ ನಾನು ಮಾಡುವದಿದ್ದರೆ?.... ಎಂದೆನ್ನಲು,

'ಹಾಗಾದರೆ ನೀನು ಇಲ್ಲಿಂದ ಜೀವ ಸಹಿತವಾಗಿ ಪಾರಾಗಿ ಹೋಗುವ ಆಶೆಯನ್ನೇ ಬಿಡಬೇಕಾಗುವದು' ಎಂದು ಆರ್ಟನ್ನ ಕಟ್ಟುನಿಟ್ಟಾಗಿ ಹೇಳಿದ.

ಅಷ್ಟರಲ್ಲಿ ಟೆಲಿಫೋನಿನಿಂದ ಮತ್ತೆ:—ಭಾಯೋಲೇ, ನನ್ನನ್ನು ಕರೆದೆಯಾ? ಎಂಬ ಪ್ರಶ್ನೆ ಬಂತು.

ಕೂಡಲೆ ಭಾಯೋಲೆ ಟೆಲಿಫೋನಿಗೆ ತನ್ನ ಮೋರೆಯನ್ನಾನಿಸಿ:—ಪ್ರಿಯಕರಾ, ಹೌದು. ನೀನು ದೇಶತ್ಯಾಗ ಮಾಡುವ ಪೂರ್ವದಲ್ಲಿ ಇನ್ನೊಂದು ಸಾರೆ ನಾನು ನಿನ್ನನ್ನು ಕಾಣಬೇಕೆಂದಿರುತ್ತೇನೆ. ಯಾವ ಸ್ಟೇಶನ್ನಿನಲ್ಲಿ ಯಾವ ವೇಳೆಯ ಗಾಡಿಗೆ ನಿನ್ನ ಭೇಟಿಯಾದೀತೆಂಬದನ್ನು ಹೇಳು. ನಾನು ತಕ್ಕ ವೇಳೆಗೆ ಅಲ್ಲಿಗೆ ಬರುವೆ.

ಭಾಯೋಲೆ ಯಾವ ದನಿಯಿಂದ ಅದನ್ನೆಲ್ಲ ಹೇಳಿದ್ದಳೋ ಆ ದನಿ ಕೇಳಿ ರೆನ್‌ಹ್ಯಾಮನಲ್ಲುಂಟಾದ ಭಯ ಮತ್ತು ಉದ್ವೇಗಗಳಿಗೆ ಮೇರೆಯೇ ಉಳಿಯಲಿಲ್ಲ. ಆಗ ಆತ ವ್ಯಗ್ರನಾಗಿ:—ಭಾಯೋಲೆ, ಪ್ರಿಯಕರಣೀ, ನಿನ್ನ ಕಂಠಸ್ವರ ಕೇಳಿ, ನೀನಾವುದೋ ವಿಪತ್ತಿಗೆ ಗುರಿಯಾಗಿರುತ್ತೀ ಎಂದೆನಿಸುತ್ತದಲ್ಲ?

'ಹೌದು, ಕ್ಯಾಪ್ಟನ್; ನಾನು ಬಹು ದೊಡ್ಡ ಗಂಡಾಂತರಕ್ಕೊಳಗಾಗಿರುತ್ತೇನೆ.'

'ಇಷ್ಟು ಆಕಸ್ಮಿಕವಾಗಿ ಅದೇನಾಯಿತು? ನನ್ನ ಗಾಡಿಯ ಹೊತ್ತಾಯಿತು. ಇನ್ನು ನಾನು ತಡಮಾಡಲಿಕ್ಕೆ ಶಕ್ಯವಿಲ್ಲ'

'ಈ ಟೆಲಿಫೋನದಲ್ಲಿ ಆ ಗಂಡಾಂತರ ತಿಳಿಸಲಾರೆ.'

'ಹಾಗಾದರೆ ಬೇಗನೆ ವ್ಹಿಕ್ಟೋರಿಯಾ ಸ್ಟೇಶನ್ನಿಗೆ ಬಾ. ಹನ್ನೆರಡೂ ಮೂರು ಮಿನೀಟಿಗೆ ಹೊರಡುವ ೧೧೧ನೇ ಅಪ್ ಟ್ರೇನಿನಲ್ಲಿ ನಾನು ಹೊರಡಲೇಬೇಕು.

ಭಾಯೋಲೆ ತುಸ ಹೆಚ್ಚು ಧೈರ್ಯ ತಾಳಿ:—ಬಹು ಜಾಗರೂಕನಾಗಿರು. ನನ್ನ ಭಯಂಕರ ವೈರಿಯೊಬ್ಬ ನನ್ನನ್ನು........'

ಭಾಯೋಲೆಯು ಟೆಲಿಫೋನದೊಳಗೆ ಹೀಗೆ ಹೇಳುತ್ತಿದ್ದಾಗಲೇ ನರಪಿಶಾಚಿಯಾಗಿದ್ದ ಹ್ಯಾಮನ್ ಆರ್ಟನ್ನ ಒಳ್ಳೇ ಕಸುವಿನಿಂದ ಅವಳ ಕುತ್ತಿಗೆ ಹಿಚುಕಲು, ಆಕೆ ಆ ನೋವಿನಿಂದ ಆಕ್ರೋಶ ಮಾಡಹತ್ತಿದಳು. ಅಲ್ಪಾವಕಾಶದಲ್ಲಿಯೇ ಅವಳ ಆಕ್ರೋಶ ಕಟ್ಟಾಗಿ, ಅವಳ ದನಿಯೇ ಕಟ್ಟಾಯಿತು. ಆಕೆ ಆ ರಾಕ್ಷಸನ ಕೈಯಿಂದ ಪಾರಾಗುವ ಬಗ್ಗೆ ಹೆಚ್ಚಾಗಿ ಪ್ರಯತ್ನಿಸತೊಡಗಿದಳು.

ಆಗ ಆರ್ಟನ್ನ ಭಾಯೋಲೆಗೊಮ್ಮೆ ಚೆನ್ನಾಗಿ ಗುದ್ದಿ ಅವಳನ್ನು ದೂಡಿ ಕೊಟ್ಟು, ಒಳ್ಳೇ ಸಿಟ್ಟಿನಿಂದ:—ನನ್ನನ್ನು ವಿಪತ್ತಿಗೆ ಗುರಿಮಾಡು

ವಷ್ಟು ಸಾಹಸ ನಿನ್ನಲ್ಲಿದೆಯಲ್ಲವೆ? ಆ ದರಿದ್ರ ರೆನ್‌ಹ್ಯಾಮುನಲ್ಲಿ ನನಗಿದಿರಾಗುವ ಶಕ್ತಿಯುಂಟೇ? ನೋಡೋಣ, ನಿನ್ನ-ಅವನ ವಿವಾಹ ಹೇಗಾಗುವದೆಂಬದನ್ನು? ನಿನ್ನ ಆ ಇಚ್ಛೆ ಜನ್ಮಜನ್ಮಾಂತರದಲ್ಲೂ ಸಿದ್ಧಿಸಗೊಡಲಾರೆ. ಇನ್ನು ನೀನು ಯಾವ ಶಿಕ್ಷೆಗೆ ಗುರಿಯಾಗುವೆಯೋ-ಮರಣ ಅದಕ್ಕಿಂತಲೂ ಎಷ್ಟೋ ಪಾಲು ಲೇಸು.

ಇನ್ನು ಏನು ಮಾಡಬೇಕೆಂಬದನ್ನು ನಿಶ್ಚಯಿಸಿಕೊಳ್ಳಲಾರದ-ಛಾಯೋಲೆ ಅಲ್ಲಿಯದೊಂದು ಕುರ್ಚಿಯ ಮೇಲೆ ಕುಳಿತುಕೊಂಡಳು. ದುರ್ವೃತ್ತನಾದ ಆರ್ಟೆನ್ನ ಸಮೀಪದ ಬೇರೊಂದು ಮೇಜಿನ ಮೇಲಿದ್ದ ಒಂದು ಚಾದರ ಜಗ್ಗಿಕೊಂಡು,ಅದರಿಂದ ಛಾಯೋಲೆಯ ಕಣ್ಣು ಚೆನ್ನಾಗಿ ಕಟ್ಟಿದ. ಬಳಿಕ ಅವನು ಅವಳನ್ನು ಕುರ್ಚಿಯ ಮೇಲಿಂದ ಜಗ್ಗಿ, ತನ್ನ ಹೆಗಲ ಮೇಲೆ ಹೊತ್ತುಕೊಂಡ. ಆಗ ಛಾಯೋಲೆ ಅತ್ಯಂತ ಭಯವಿಹ್ವಲಳಾಗಿ, ಒಮ್ಮೆಲೆ ಚಿಟ್ಟನೆ ಚೀರಿ, ಮೂರ್ಛೆ ಹೋದಳು.

ಮೂರ್ಛೆ ತಿಳಿದೆದ್ದಾಗ ಛಾಯೋಲೆ ಸುತ್ತಲೂ ನೋಡುತ್ತಾಳೆ; ತಾನೊಂದು ತೀರ ಸಣ್ಣ ಕೋಣೆಯಲ್ಲಿ ಮಲಗಿಕೊಂಡಿರುವಳು. ಆ ಕೋಣೆಯಲ್ಲೊಂದು ಮಿಣುಗುಟ್ಟುವ ದೀಪ ಉರಿಯುತ್ತಿದೆ. ತನ್ನ ತಲೆಗಿಂಬಿನ ಬಳಿಯಲ್ಲಿ ಕುಳಿತಿರುವ ಒಬ್ಬ ಪ್ರೌಢ ವಯಸ್ಸಿನ ಸ್ತ್ರೀಯನ್ನು ಕಂಡು, ಆಕೆ ಕ್ಷೀಣಸ್ವರದಿಂದ:— ನಾನೆಲ್ಲಿರುವೆ? ಎಂದು ಕೇಳಿದಳು.

'ನೀನಿಲ್ಲಿ ಸೆರೆಯಲ್ಲಿರುವೆ; ನನ್ನನ್ನು ನಿನ್ನ ಪಹರೆಗಾಗಿ ನೇಮಿಸಿರುತ್ತಾರೆ' ಹೀಗೆಂದು ನುಡಿದು, ಆ ಪ್ರೌಢೆ ಒಂದು ಹೊಸ ಕಾಗದವನ್ನೂ ದೌತಿ-ಲೆಕ್ಕಣಿಕೆಗಳನ್ನೂ ಅವಳ ಮುಂದಿಟ್ಟು:—'ಛಾಯೋಲೆ, 'ನಾನು ನನ್ನೊಬ್ಬ ಪರಮಾಪ್ತನ ಮನೆಯ ಕಾರ್ಯಕ್ಕಾಗಿ ಬಂದಿರುತ್ತೇನೆ. ನನ್ನ ಇಂತಿಂಥ ಉಡಿಗೆ-ತೊಡಿಗೆಗಳನ್ನೂ ಬೇರೆ ಸಾಮಾನುಗಳನ್ನೂ ಈ ಪತ್ರ ತಂದವರೊಡನೆ ತಪ್ಪದೆ ಕಳಿಸು' ಎಂದು ನಿನ್ನ ದಾಸಿಗೆ ಚೀಟಿ ಬರೆ; ಯಾಕಂದರೆ ನೀನು ಇಲ್ಲಿ ಇನ್ನೂ ಕೆಲ ದಿನವಿರಬೇಕಾಗುವದು; ಮತ್ತು ಇದೇ ಚೀಟಿಯ ಕಡೆಗೆ 'ನನ್ನ ಭೇಟ್ಟಿಗಾರಾದರೂ ಬಂದರೆ ಅವರಿಗೆ ನನ್ನ ಮೈಯಲ್ಲಿ ಸ್ವಾಸ್ಥ್ಯವಿಲ್ಲೆಂದು ತಿಳಿಸಿ ಹಿಂದಕ್ಕೆ ಕಳಿಸಿಬಿಡು' ಎಂಬ ಸಂಗತಿಯನೂ ಬರೆಯತಕ್ಕದ್ದು' ಎಂದು ಹೇಳಿದಳು.

ಮೊದಮೊದಲು ಆ ಬಗೆಯ ಪತ್ರಬರೆಯಲಿಕ್ಕೆ ಭಾಯೋಲೆ ಸಮ್ಮತಿಸಲಿಲ್ಲ; ಆದರೆ ಆ ಸ್ತ್ರೀ ಅವಳಿಗೆ ನಾನಾ ಬಗೆಯಿಂದ ಅಂಜಿಕೆ ದೋರಲು, ಕಡೆಗೆ ನಿರುಪಾಯದಿಂದ ಆಕೆಯು ಹೇಳಿಕೆಯಂತೆಯೇ ಪತ್ರ ಬರೆದಳು. ಬಳಿಕ ಭಾಯೋಲೆ ಅದನ್ನೊಂದು ಲಕ್ಕೋಟೆಯಲ್ಲಿ ಹಾಕಿ, ಅದರ ಮೇಲೆ ತನ್ನ ಮನೆಯ ಪ್ರಮುಖ ಪರಿಚಾರಿಕೆಯ ಹೆಸರನ್ನೂ ಬರೆದಳು. ಆ ಸ್ತ್ರೀ ಆ ಪತ್ರವನ್ನೂ ಮೇಲ್ವಿಳಾಸವನ್ನೂ ಓದಿ ನೋಡಿದಳು. ಅನಂತರ ಆಕೆ ಅದಕ್ಕೆ ಅಂಟು ಹಚ್ಚಿ ಅದನ್ನು ತಕ್ಕೊಂಡು ಹೊರಹೊರಟಳು. ಆಗ ಭಾಯೋಲೆ:—ನನಗೊಂದು ಲೋಟಾ ನೀರು ಕೊಡು; ನೀರಡಿಕೆಯಿಂದ ನನ್ನ ಗಂಟಲು ಒಣಗಿ ಹೋಗಿದೆ, ಎಂದು ಹೇಳಿದಳು.

ಕೂಡಲೆ ಆ ಹೆಂಗಸು ಅವಳಿಗೊಂದು ಗ್ಲಾಸು ನೀರು ತಂದು ಕೊಟ್ಟಳು. ಆದರ ಒಂದು ಹನಿಯನ್ನು ಬಾಯಿಗೆ ಹೆಚ್ಚಿದೊಡನೆಯೇ ಈ ನೀರಿನಲ್ಲಿ ಯಾವದೋ ಒಂದು ಬಗೆಯ ವಿಷ ಕೂಡಿಸಿರುತ್ತಾರೆಂಬದು ಅವಳಿಗೆ ತಿಳಿಯದಿರಲಿಲ್ಲ ಅವಳು ಆಗಲೆ ಆ ಉಳಿದ ನೀರನ್ನು ಚೆಲ್ಲಿಕೊಟ್ಟಳು; ಆದರೆ ಯಾವ ಒಂದು ಜಲಬಿಂದುವು ಅವಳ ಹೊಟ್ಟೆಯಲ್ಲಿ ಸೇರಿದ್ದಿತೋ, ಅಷ್ಟರಿಂದಲೇ ಆಕೆ ಮತ್ತೆ ಎಚ್ಚರದಪ್ಪಿ ಬಿದ್ದಳು!



## ೧೨ನೇ ತೆರೆ—ಎಕ್ಸಪ್ರೆಸ್ಸ ಟ್ರೇನಿನಲ್ಲಿ.

ರೆನ್‌ಹ್ಯಾಮ ಟೆಲಿಫೋನಿನಿಂದ ಭಾಯೋಲೆಯ ಸಂಗತಿ ತಿಳಿದು ಕೇಳಹಬೆದರಿದ. ಆರ್ಟೆನ್ನನ ಆಕಸ್ಮಿಕ ಆಕ್ರಮಣದಿಂದ ಭಾಯೋಲೆಯ ವಾಣಿ ಕುಂಠಿತವಾಗಿ, ಆಕೆ ಚೀರಿಕೊಂಡದ್ದು ಕೂಡ ರೆನ್‌ಹ್ಯಾಮನಿಗೆ ಆ ಟೆಲಿಫೋನ ಯಂತ್ರದ ಮೂಲಕ ಸ್ಪಷ್ಟ ಕೇಳಿಸಿತು. ಆಗ ಆತ ಅಂಜಿಕೆಯಿಂದ ತಡವರಿಸುತ್ತ:—ಭಾಯೋಲೇ, ನಿನಗೇನಾಯಿತು? ನೀನು ನಿನ್ನ ಸಂಗತಿ ಮುಗಿಸದೆ, ನಡುವೇ ಹೀಗೆ ಚೀರಿದ್ದೇಕೆ? ಎಂದು ಟೆಲಿಫೋನದಿಂದಲೇ ಪ್ರಶ್ನೆಮಾಡಿದ; ಆದರೆ ಅವನಿಗೆ ಆಗ ಯಾವ ಉತ್ತರವೂ ಪ್ರಾಪ್ತವಾಗಲಿಲ್ಲ. ಆರ್ಟೆನ್ನ ತತ್‌ಕ್ಷಣದಲ್ಲಿಯೇ ಆ ಯಂತ್ರದ ಗತಿ ನಿಲ್ಲಿಸಿಬಿಟ್ಟ.

ಹೀಗೇಕಾಯಿತೆಂಬದನ್ನು ತಿಳಿಯದ ಕ್ಯಾಪ್ಟನ್ನ ಉನ್ಮತ್ತನಂತೆ ತನ್ನ ಕೋಣೆಯಲ್ಲೇ ಅತ್ತಿಂದಿತ್ತ ಅಡ್ಡಾಡಹತ್ತಿದ. ಆಗಿನ ಅತನ ಮಾನಸಿಕ ಅವಸ್ಥೆ ಬಹು ಶೋಚನೀಯವಾಗಿತ್ತು.

ಮುಂಪೆ ಐದೇ ನಿಮಿಷಗಳಲ್ಲಿ ಅತನ ಸೇವಕ ಆ ಕೋಣೆ ಪ್ರವೇಶಿಸಿ: ಧಣಿಯರೇ, ಈ ಬಡ ಸೇವಕನ ಅಧಿಕಪ್ರಸಂಗತನದ ಬಗ್ಗೆ ಕ್ಷಮಿಸಿರಿ. ಹನ್ನೆರಡಕ್ಕೆ ಇನ್ನು ಹತ್ತೇ ನಿಮಿಷಗಳ ಅವಧಿಯಿದೆ. ಇದನ್ನು ತಮಗೆ ನೆನಪು ಮಾಡಿ ಕೊಡಲಿಕ್ಕೆಂದೇ ನಾನಿಲ್ಲಿಗೆ ಹೀಗೆ ಆಕಸ್ಮಿಕವಾಗಿ ಬಂದೆ, ಎಂದಂದ.

ರೆನ್‌ಹ್ಯಾಮು ಉನ್ಮಾದನಂತೆ ಅಣಕಿಸುವ ದನಿಯಿಂದ:-ಅದಕ್ಕಾಗಿ ನಿನಗೇಕಿಷ್ಟು ಯೋಚನೆ? ನಾನೀ ರಾತ್ರಿಯಲ್ಲಿ ಹೊರಡುವದಿಲ್ಲ ಹೋಗು, ಎಂದು ಗರ್ಜಿಸಲು, ಆ ಆಳು ಮರು ಮಾತನಾಡದೆ ಅಲ್ಲಿಂದ ಹೊರಟೇ ಹೋದ. 'ತನ್ನ ಜೀವನದ ಆಶೆ ಮತ್ತು ಆನಂದ ಸ್ವರೂಪಿಣಿಯಾದ ಭಾಯೋಲೆ ವಿಪತ್ತಿಗೀಡಾಗಿದ್ದು, ತಾನು ಆಕೆಗೆ ಕೊಂಚವೂ ಸಹಾಯಕಾರಿಯಾಗುವದಶಕ್ಯವಾಗಿದೆಯಲ್ಲ! ಆಕೆಗೆ ಸಂಭವಿಸಿದ ಸಂಕಟವಾದರೂ ಯಾವದೆಂಬದು ಕೂಡ ನನಗೆ ತಿಳಿಯದಾಯಿತೆ?' ಇದರಿಂದ ಆತನಿಗೆ ಉದ್ವೇಗವೂ ಚಡಪಡಿಕೆಯೂ ಅಸಹ್ಯವಾದವು; ಅಷ್ಟರಲ್ಲಿ ತಾನು ವಹಿಸಿದ ಆ ಅತಿ ಮಹತ್ವದ ಕಾರ್ಯಭಾಗದ ನೆನಪು ಆಕಸ್ಮಿಕವಾಗಿ ಆತನಿಗೆ ಆಗಲು, ಆತ ಬೇರೆ ಉಪಾಯಗಾಣದೆ, ತನ್ನ ಪ್ರಯಾಣದ ಸಿದ್ಧತೆಗೆ ತೊಡಗಬೇಕಾಯಿತು. ಆಗ ಅತ ಮನಸ್ಸಿನಲ್ಲಿಯೇ ಅನ್ನುತ್ತಾನೆ:-ನಾನು ನನ್ನೀ ಗುರುತರ ಕೆಲಸ ಪೂರೈಸಿ ಬಂದವನೇ ಭಾಯೋಲೆಯ ಹಿತಸಂಬಂಧದ ಕಡೆಗೇ ಹೆಚ್ಚು ಲಕ್ಷ್ಯಗೊಡುವೆನು. ಆಕೆಯ ಹಿತಸಂಬಂಧಕ್ಕಾಗಿ ನನ್ನ ನೌಕರಿ-ಚಾಕರಿಗಳು ಹೋದರೂ ಚಿಂತೆಯಿಲ್ಲ; ನಾನು ಅವಳ ಹಿತಸಾಧನವನ್ನೇ ಎಲ್ಲಕ್ಕೂ ಮೊದಲು ಮಾಡುವೆನು.

ಹೀಗೆಂದು ಯೋಚಿಸಿ, ಅವನು ತನ್ನ ವಿಶ್ವಾಸಿಕ ಚಾಕರನಾದ ಹೆನರಿಯನ್ನು ಕೂಗಿ:-ಹೆನರಿ, ಯುದ್ಧಕಾಲಕ್ಕೆ ನಾನು ನಿನಗೆ ಎಷ್ಟೋ ಉಪಕಾರ ಮಾಡಿರುತ್ತೇನೆ. ಅದು ನಿನ್ನ ನೆನಪಿನಲ್ಲಿದ್ದರೆ, ನೀನು ನನಗೆ ಪ್ರತ್ಯುಪಕಾರ ಮಾಡುವ ಸಮಯವಿದೀಗ ಪ್ರಾಪ್ತವಾಗಿದೆ. ನೀನು ನೆಟ್ಟಗೆ ರಾಬರ್ಟ ಬ್ಲೇಕರ ಒಳಗೆ ಹೋಗು; ಹಾಗು 'ಭಾಯೋಲೆ ಕಡು ವಿಪತ್ತಿನ ಜಾಲದಲ್ಲಿ ತೊಡಕಿಸಲ್ಪಟ್ಟಿರುತ್ತಾಳೆ; ಆದರೆ ಆ ವಿಪತ್ತಾವದು? ಅದು ಯಾರಿಂದ ಪ್ರಾಪ್ತ

ವಾಗಿದೆ? ಮುಂತಾದವುಗಳಾವವೂ ನನಗೆ ತಿಳಿಯಲಶಕ್ಯವಾಗಿವೆ ನಿಮಗೆ ಯೋಗ್ಯವಾಗಿ ಕಂಡ ಮಾರ್ಗದಿಂದ ನೀವು ಅವಳನ್ನು ಪಾರು ಮಾಡಬೇಕೆಂದು ಅವರಿಗೆ ಹೇಳು.

ಅದಕ್ಕೆ ಹೆನ್ರಿ:-ಒಡೆಯರೇ, ಯುದ್ಧಕಾಲಕ್ಕೆ ನೀವು ನಿಮ್ಮ ಜೀವವನ್ನು ವಿಪತ್ತಿಗೆ ಗುರಿ ಮಾಡಿ ನನ್ನನ್ನು ಬದುಕಿಸಿರುತ್ತೀರೆಂಬದನ್ನು ನಾನೆಂದೆಂದಿಗೂ ಮರೆಯುವಂತಿಲ್ಲ. ನಾನು ನನ್ನ ಜೀವ ಕೊಟ್ಟಾದರೂ ನಿಮಗೆ ಪ್ರತ್ಯುಪಕಾರ ಮಾಡುವೆನು.

ಕೂಡಲೆ ರೆನ್‌ಹ್ಯಾಮ ಉತ್ತೇಜಿತನಾಗಿ, ಕೃತಜ್ಞತಾಭರದಿಂದ ಆ ತನ್ನ ಪ್ರಿಯ ವಿಶ್ವಾಸುಕ ಚಾಕರನಿಗೆ ಶೇಕ್‌ಹ್ಯಾಂಡ ಮಾಡಿ, ವೇಗದಿಂದ ಮನೆ ಬಿಟ್ಟು ನಡೆದ. ಆತನ ಟ್ಯಾಕ್ಸಿ ಬಾಗಿಲ ಬಳಿಗೇ ನಿಂತುಕೊಂಡಿತ್ತು. ಆತ ಹತ್ತಿದವನೇ:--'ವ್ಹಿಕ್ಟೋರಿಯಾ ಸ್ಟೇಶನ್ನಿಗೆ ಗಾಳಿಯಂತೆ ಓಡಿಸು' ಎಂದು ಡ್ರಾಯವ್ಹರನಿಗೆ ಆಜ್ಞಾಪಿಸಿದ.

ಕಾರು ಓಡಹತ್ತಲು ಆತ ಮನಸ್ಸಿನಲ್ಲಿ:-ವ್ಹಿಕ್ಟೋರಿಯಾ ಸ್ಟೇಶನ್ನಿಗೆ ಭಾಯೋಲೆ ಬರಬಹುದೇ? ಆದರೆ ಆಕೆ ನಿಜವಾಗಿಯೂ ಸಂಕಟಕ್ಕೀಡಾಗಿದ್ದರೆ?........

ಇಷ್ಟರಲ್ಲಿ ಆತನ ಕಾರು ವ್ಹಿಕ್ಟೋರಿಯಾ ಸ್ಟೇಶನ್ನಿನೆದುರಿಗೆ ಬಂದು ನಿಂತಿತು. ಇಳಿದು ನೋಡುತ್ತಾನೆ, ಭಾಯೋಲೆ ೧೧ನೇ ನಂಬರಿನ ಅಪ್ಪಟ್ರೇನಿನ ಬಳಿಯಲ್ಲಿರಲಿಲ್ಲ. ಆದರಿಂದ ಅವನ ಸಂದೇಹವೂ ಉತ್ಕಂಠೆಯೂ ಪ್ರಬಲವಾದವು. ಆತ ಗಾಡಿಯನ್ನೇರಿದವನೇ ಚಡಪಡಿಸಿ ಚಾಟಿ ಹೊಡೆಯಹತ್ತಿದ. ಅಷ್ಟರಲ್ಲಿ ಭಾಯೋಲೆಯ ಕಟ್ಟಕಡೆಯ ಶಬ್ದವು ಆತನಿಗೆ ನೆನಪಾಯಿತು. ಭಾಯೋಲೆ ಅವನನ್ನು ಎಚ್ಚರಪಡಿಸಿದ್ದಳು. ತನ್ನ ಯಾವನೊಬ್ಬ ಭಯಂಕರ ಶತ್ರುವಿನ ಸಂಗತಿಯನ್ನು ತಿಳಿಸ ಹೋಗಿ, ಅವಳ ಕೊರರೋಧವಾಗಿತ್ತು. ತನ್ನ ಆ ಶತ್ರುವಾರು? ಅವನೇ ಅವಳನ್ನು ಆಗ ವಿಪತ್ತಿಗೀಡು ಮಾಡಿದವನೆ? ಅದಕ್ಕೆ ಕಾರಣವೇನು? ಹೀಗೆಂದು ಯೋಚಿಸಿ, 'ಅನೇಕ ಜನರು ನನಗೆ ಹಿಂಸೆ ಕೊಡುತ್ತಾರೆ. ಅವರು ನಿಶ್ಚಯವಾಗಿಯೂ ನನಗೆ ಕೇಡು ಬಗೆಯುವ ಸಾಹಸಕ್ಕೆ ತೊಡಗಿರುವರು. ನಾನು ರಾಜರ ಗುಪ್ತಸಂಗತಿಯನ್ನೊಪ್ಪುವ ಕೆಲಸದಲ್ಲಿ ನೇಮಿಸಲ್ಪಟ್ಟವನು. ರಾಜಕೀಯ ಗುಪ್ತ ರಹಸ್ಯಗಳನ್ನು ತಿಳಿಯುವ ವಿಷಯದಲ್ಲಿ ಅನೇಕ ಜನರು ಪ್ರಯತ್ನಿಸುತ್ತಿರುವರೆಂಬದಕ್ಕೆ ಸಂದೇಹವೇ

ಇಲ್ಲ. ಆದರೂ ನಾನು ಜೀವದಿಂದಿದ್ದರೆ, ಯಾವನೂ ಕೃತಕಾರ್ಯನಾಗಲಾರ. ಹೇಗೆಯೇ ಇರಲಿ, ನಾನಿನ್ನು ಒಳ್ಳೇ ಜಾಗರೂಕನಾಗಿರಬೇಕು, ಎಂದೆಂದು ಕೊಂಡ.

ಆ ನಡುರಾತ್ರಿಯಲ್ಲಿ ಆ ಗಾಡಿ ನಿಸ್ತಬ್ಧ ಪ್ರಾಂತಗಳನ್ನು ದಾಟಿ, ಫಕ್ ಫಕ್ ಎಂಬ ಮಹಾ ಶಬ್ದಗೆಯ್ಯುತ್ತ ಬಂದರಕ್ಕಭಿಮುಖವಾಗಿ ನಡೆದಿತ್ತು. ಆ ಎಕ್ಸಪ್ರೆಸ್ಸ ಟ್ರೇನು ನಡುವಿನ ಬಹು ದೂರದ ಮಾರ್ಗ ಕ್ರಮಿಸಿ ಬಂದರಕ್ಕೆ ಬಂದು ತಲುಪಿತು. ಗಾಡಿ ನಿಲ್ಲುತ್ತಲೆ ರೆನ್‌ಹ್ಯಾಮ ತಟ್ಟನೆ ಇಳಿದು, ಸಮೀಪದ ತಂತಿಯ ಮನೆಗೆ ನಡೆದ. ಅವನು ಅಲ್ಲಿಂದ ಬ್ಲೇಕನಿಗೊಂದು ಬಹು ವಿಸ್ತಾರವಾದ ತಂತಿಯ ಸಮಾಚಾರ ಕಳಿಸಿದ. ಅದರಲ್ಲಿ ಭಾಯೋಲೆಯ ಸಂಕಟದ ಎಲ್ಲ ಸಂಗತಿಗಳನ್ನೂ ತಿಳಿಸಿದ್ದ. ಬಳಿಕ ಆತ ಡ್ಯೂಕ ವಿಲ್ಯಮ್ಸನಿಗೂ ಬೇರೊಂದು ತಂತಿ ಕಳಿಸಿ, 'ನಾನು ಮರಳಿ ಲಂಡನ್ನಿಗೆ ಬರುವ ವರೆಗೆ ಭಾಯೋಲೆಯ ಕಡೆಗೆ ನಿನ್ನ ಲಕ್ಷ್ಯವಿರಲಿ'ಎಂದು ತಿಳಿಸಿದ. ಆಕೆ ಯಾವನೊಬ್ಬ ನೀಚನ ಕೈಗೆ ಸಿಕ್ಕು ವಿಪತ್ತಿಗೆ ಗುರಿಯಾಗಿರುವಳೆಂಬುದನ್ನು ಡ್ಯೂಕನಿಗೆ ತಿಳಿಸಬೇಕೆಂದು ಆತನ ಮನಸ್ಸಿನಲ್ಲಿತ್ತು; ಆದರೆ ಅದನ್ನು ಅವನಿಂದ ತಿಳಿಸುವದು ಮಾತ್ರ ಆಗಲಿಲ್ಲ. ಅವನು ಆ ತಂತಿಯ ಮನೆಯಿಂದ ಹೊರ ಹೊರಡುವ ಮೊದಲು, ತನ್ನ ಒಳ ಅಂಗಿಯ ಒಳ ಕಿಸೆಯಲ್ಲಿ ಕೈ ಹಾಕಿ ನೋಡಿದ. ಆ ಗುಪ್ತ ಕರಾರಿನ ಕಾಗದ ಅಲ್ಲಿ ಸುರಕ್ಷಿತವಾಗಿದ್ದ ಬಗ್ಗೆ ಅವನ ಖಾತ್ರಿಯಾಯಿತು. ಆತನ ಶರ್ಟಿನ ಒಳ ಬದಿಗೆ ಹೊಂದಿ ಒಂದು ಗುಪ್ತ ಜೇಬಿದ್ದಿತು. ಆ ಜೇಬಿನಲ್ಲಿ ತೆಳುವಾದ ರಬ್ಬರಿನ ಪಾಕೀಟಿನಲ್ಲಿ ಆ ಕರಾರುಪತ್ರ ಇಡಲ್ಪಟ್ಟಿತ್ತು.

ತಂತಿಯ ಮನೆಯಿಂದ ಹೊರಟ ರೆನ್‌ಹ್ಯಾಮ ತಾನು ಹೊರಡತಕ್ಕ ಹಡಗದಲ್ಲಿ ತನಗಾಗಿ ಕಾದಿಡಲ್ಪಟ್ಟಿದ್ದ ಕೇಬಿನ್ನ ಸೇರಿದ. ಆ ರಾತ್ರಿಯಲ್ಲಿ ಆತ ಅಲ್ಲಿಯ ಸುಖಶಯ್ಯೆಯ ಮೇಲೆ ಮಲಗಿಕೊಂಡಿದ್ದೇನೋ ನಿಜ; ಆದರೆ ಅವನಿಗೆ ಕೊಂಚವೂ ನಿದ್ದೆ ಹತ್ತಲಿಲ್ಲ. ದುಶ್ಚಿಂತೆಯಂತೂ ಅವನ ಬೆನ್ನಿಗೇ ಕಟ್ಟಿತ್ತು. ಅದರಿಂದ ಆಗ ಅವನ ಮನಸ್ಸು ತೀರ ಚಂಚಲವಾಗಿತ್ತು. ರಾಜಕೀಯ ಗುಪ್ತ ಸಂಗತಿಗಳನ್ನೊಯ್ಯುವವನ ಜೀವನ ಎಷ್ಟು ಅನಿಶ್ಚಿತವಾದುದೆಂಬುದೂ, ಹೆಜ್ಜೆಹೆಜ್ಜೆಗೂ ಪ್ರಾಣಭಯವೆಷ್ಟೆಂಬುದೂ ಆತನಿಗೆ ತಿಳಿದಿದ್ದಿಲ್ಲೆಂತಲ್ಲ. ಯುದ್ಧಕಾಲದಿಂದ ಇದುವರೆಗೆ ಇಂಥ ಮಹತ್ವದ ಕೆಲಸಗಳಿಗಾ

ಗಿಯೇ ಆತ ಆ ಬ್ರಿಟಿಶ ಚಾನಲ್ಲ ನ್ನೂರಾರು ಸಾರೆಯಾದರೂ ದಾಟಿ ಹೋದವನಾದ್ದರಿಂದ, ಅವನಿಗೆ ಆ ದಾರಿ ಚಿರಪರಿಚಯದ್ದಾಗಿ ಬಿಟ್ಟಿತ್ತು. ಇಂಥ ಈ ಗೊತ್ತಿನ ದಾರಿಯ ಪ್ರಯಾಣದಲ್ಲಿ ಇಂದು ಭಯವೇಕೆನಿಸುತ್ತಿರುವ ದೆಂಬದು ಮಾತ್ರ ಆವನದು ಅವನಿಗೇ ತಿಳಿಯದಾಯಿತು. ಲಂಡನ್ನ ಪಟ್ಟಣ ಬಿಡುವಾಗಲೆ ಆತ ಛದ್ಮವೇಷವನ್ನೂ ಛದ್ಮ ನಾಮವನ್ನೂ ಧರಿಸಿ ಹೊರಡು ತ್ತಿದ್ದನಾದ್ದರಿಂದ, ಆತ ರಾಜದೂತನೆಂಬದು ಯಾರಿಗೂ ತಿಳಿಯದಂತಿರ ಲಿಲ್ಲ. ಇಷ್ಟೇ ಅಲ್ಲ, ಯಾರೂ ಅವನಲ್ಲಿ ಸಂದೇಹ ತೋರುವಂತೆ ಸಹ ಇರಲಿಲ್ಲ. ಆದ್ದರಿಂದ ಆತ ಪಾರೀಸ ಪಟ್ಟಣದಲ್ಲಿಯ ಒಂದು ದೊಡ್ಡ ಜಂಕ್ಶನ್ ಸ್ಟೇಶ ನ್ನಿನಲ್ಲಿ ಒಂದು ಗಾಡಿಯಿಂದ ಇಳಿದು ಮತ್ತೊಂದು ಕಡೆಗೆ ಹೋಗುವ ಗಾಡಿ ಯನ್ನು ಏರ ಹೋದ. ಆಗ ಯಾವದೊ ಒಂದು ವ್ಯಕ್ತಿ ತನ್ನನ್ನನುಸರಿಸಿ ಬರುತ್ತಿರುವದೆಂಬಂತೆ ಆತನಿಗೆ ಅನಿಸಿದರೂ, ಆ ವಿಷಯದ ಸಂದೇಹ ಮಾತ್ರ ಅವನ ಮನಸ್ಸಿನಲ್ಲಿ ದೃಢವಾಗಿ ಉಳಿಯಲಿಲ್ಲ. ಅದರಿಂದಲವನು ಸರಳಮಾರ್ಗ ಬಿಟ್ಟು ಅಡ್ಡ ದಾರಿಯಿಂದ ತಾನು ಹೋಗತಕ್ಕಲ್ಲಿಗೆ ಹೋಗುವದು ಅನಾವ ಶ್ಯಕವೆಂದು ತಿಳಿದ.

ಕ್ಯಾಪ್ಟನ್ ರೆನ್‌ಹ್ಯಾಮ ಪ್ಯಾರಿಸ ಪಟ್ಟಣದಿಂದ 'ಓರಿಯೆಂಟಲ್ ಎಕ್ಸ ಪ್ರೆಸ್ಸ' ಟ್ರೇನಿನಲ್ಲಿ ಕುಳಿತು ಉತ್ತರ ಫ್ರಾನ್ಸಿಗಭಿಮುಖವಾಗಿ ನಡೆದ. ಆಗ ತನ್ನನ್ನು ಯಾವನೋ ಒಬ್ಬ ದುರುದ್ದೇಶದಿಂದ ಅನುಸರಿಸುತ್ತಿರುವ ಹಾಗೆ ಆತನಿಗೆ ಮತ್ತೆ ಸಂದೇಹವುಂಟಾಯಿತು; ಆದರೆ ಕ್ರಮವಾಗಿ ಆ ಸಂಶಯವೂ ದೂರವಾಯಿತು. ಪಾಪ! ರೆನ್‌ಹ್ಯಾಮನಿಗೇನು ಗೊತ್ತು, ಮಹಾ ಧೂರ್ತ ಆರ್ಟನ್ನ ಭಾಯೋಲೆಯ ಮುಖಾಂತರ ಇವನು ಲಂಡನ್ನಿನಿಂದ ಹೊರಡುವ ಮೊದಲೇ ಅದನ್ನು ತಿಳಕೊಂಡು, ಇವನ ಅನುಸರಣದ ವ್ಯವಸ್ಥೆ ಮಾಡಿರುವ ನೆಂಬದು?

ಪವನ ವೇಗದಿಂದ ಹೊರಟಿದ್ದ ಆ ಓರಿಯೆಂಟಲ್ ಎಕ್ಸಪ್ರೆಸ್ಸ ದಾರಿ ಯೊಳಗಿನ ಬಾಸೆಲ್ ಎಂಬ ಬಹು ದೊಡ್ಡ ಜಂಕ್ಸನ್ನಿನಲ್ಲಿ ನಿಂತಿತು. ಕೂಡಲೆ ಬಹು ದೂರದ ಪ್ರವಾಸದಿಂದ ಶ್ರಾಂತರಾಗಿದ್ದ ಪ್ರವಾಸಿಗಳು ತಮ್ಮ ತಮ್ಮ ಕಂಪಾರ್ಟಮೆಂಟುಗಳಿಂದಿಳಿದು ಪ್ರಶಸ್ತವಾದ ಪ್ಲ್ಯಾಟಫಾರ್ಮಿನಲ್ಲಿ ಅಡ್ಡಾಡ ಹತ್ತಿದರು. ರೆನ್‌ಹ್ಯಾಮನೂ ಇಳಿದು ಅತ್ತಿಂದಿತ್ತ ಅಡ್ಡಾಡಹತ್ತಿದ. ಆತ ಆ ಸ್ಟೇಶನ್ನಿನ ವೇಟಿಂಗ ರೂಮಿಗೆ ಹೋದ. ಅಲ್ಲಿ ಒಬ್ಬ ಸ್ತ್ರೀ ಪ್ರವಾಸಿಯು

ಹೊರತು ಮತ್ತೆ ಯಾರೂ ಕಾಣಲಿಲ್ಲ ಅಲ್ಲಿ ಕೂಡ್ರದೆ ಆತ ಮತ್ತೆ ತನ್ನ ಕಂಪಾರ್ಟಮೆಂಟಗೇ ನಡೆದ. ಅಷ್ಟರಲ್ಲಿ ಒಬ್ಬ ಮನುಷ್ಯ ಹಿಂದಿನಿಂದ ಬಂದು ಆತನ ಹೆಗಲ ಮೇಲೆ ಕೈಯಿಟ್ಟ! ರೆನ್‌ಹ್ಯಾಮ ವಿಸ್ಮಯದಿಂದ ಹಿಂದಿರುಗಿ ನೋಡುತ್ತಾನೆ, ತನಗೆ ಕೇವಲ ಪರಿಚಿತನಾಗಿದ್ದ ಉಯಿನ್‌ಕಾರನೇ ಆತನಾಗಿದ್ದ.

ಉಯಿನ್‌ಕಾರ ಮುಗುಳ್ನಗೆಯಿಂದ:-ನಿನ್ನ ಭೆಟ್ಟಿ ಇಲ್ಲಿ ಹೀಗೆ ಆಕಸ್ಮಿಕವಾಗಿ ಆದೀತೆಂಬದನ್ನು ನಾನು ಕನಸಿನಲ್ಲೂ ನೆನಿಸಿರಲಿಲ್ಲ.

ಅದಕ್ಕೆ ರೆನ್‌ಹ್ಯಾಮನೆನ್ನುತ್ತಾನೆ:—ನನಗಾದರೂ ಹಾಗೆಯೇ ಅನಿಸುತ್ತಿದೆ. ಇನ್ನು ಎಂದಿಗೂ ಸಮುದ್ರ ದಾಟಲಿಕ್ಕಿಲ್ಲೆಂದು ನೀನು ಹಿಂದಕ್ಕೊಮ್ಮೆ ನನ್ನೆದುರಿಗೆ ಅಂದ ಮಾತಿನ ನೆನಪು ನಿನಗಿದೆಯೋ?

ಉಯಿನ್:—ರೆನ್‌ಹ್ಯಾಮ, ನಿಮ್ಮ ಸ್ಮರಣಶಕ್ತಿ ವಿಲಕ್ಷಣವಾಗಿದೆ; ಆದರೆ ಬೇಗನೆ ಚಾಕರಿ ಹಿಡಿಯದ ಹೊರತು ನಡೆಯಲಾರದೆಂಬದು ಆಗ ನನಗೆ ತಿಳಿದಿರಲಿಲ್ಲ. ರಣಕ್ಷೇತ್ರದಲ್ಲಿ ನೌಕರಿ ಮಾಡಿ ಯಾವ ಅಲ್ಪ ಹಣ ಸಂಚಯಿಸಿಟ್ಟದ್ದೆನೋ, ಅದೆಲ್ಲವೂ ಇಷ್ಟರಲ್ಲಿ ತೀರಿ ಹೋಯಿತು; ಆದರೆ ಈ ದೇಶದೊಳಗಿನ ಆಯಿಲ್ ಫೀಲ್ಡ್ಸ ಕಂಪನಿಯ ಒಡೆಯ ನನ್ನ ಸ್ನೇಹಿತ. ಆತನ ಅನುಗ್ರಹದಿಂದ ಆ ಕಂಪನಿಯಲ್ಲೇ ಒಂದು ನೌಕರಿಗೆ ಹೊಂದಿಕೊಂಡಿರುತ್ತೇನೆ, ಹಾಗು ಇಂದು ನಾನು ಆ ನನ್ನ ಚಾಕರಿಯ ಸ್ಥಳಕ್ಕೇ ನಡೆದಿರುತ್ತೇನೆ.

'ಭಲೆ! ಬಹು ಸಂತೋಷದ ಸಂಗತಿ.' ಹೀಗೆಂದು ನುಡಿದ ರೆನ್‌ಹ್ಯಾಮನ ಅಂತರಂಗದಲ್ಲಿ ಉಯಿನ್ಕಾರನ ವಿಷಯವಾಗಿ ಒಂದು ಬಗೆಯ ತೀಕ್ಷ್ಣ ಭಯವುಂಟಾಯಿತು. ಈ ಅಮೇರಿಕೆಯ ಉಯಿನ್‌ಕಾರ ತನಗೆ ಯಾವ ಬಗೆಯಿಂದಾದರೂ ಕೇಡು ಬಗೆಯ ಬಂದಿರುವನೇನೋ ಎನ್ನುವಂತೆ ಅವನಿಗನಿಸಿತು. ಕಾರಣ ಆತ ಹೆಚ್ಚು ವೇಳೆ ಅಲ್ಲಿ ನಿಲ್ಲದೆ, ಲಗುಬಗನೆ ಹೋಗಿ ತನ್ನ ಕಂಪಾರ್ಟಮೆಂಟ ಸೇರಿದ; ಉಯಿನ್‌ಕಾರನೂ ತನ್ನ ಸ್ಥಳಕ್ಕೆ ಹೋಗಿ ಕುಳಿತ.

ಈ ಉಯಿನ್‌ಕಾರನೆಂಬುವವ ಹ್ಯಾಮನ್ ಆರ್ಟನ್ನನ ಸಂಚಿನೊಳಗಿನವನೆಂಬದನ್ನು ನಮ್ಮ ವಾಚಕರಿಗೆ ಬರೆದು ತಿಳಿಸುವ ಕಾರಣವಿಲ್ಲ. ಈ ಕಥಾನಕವನ್ನೋದಿದವರಿಗೆ ಅದರ ಸ್ಮರಣವಿದ್ದೇ ಇರಬಹುದು. ರೆನ್‌ಹಾಮನ ಪ್ರಣಯಿನಿಯಾದ ಛಾಯೋಲೆ ಈ ಉಯಿನ್‌ಕಾರನೊಡನೆ ಹೆಡ್ಡವನ್ನಾಡಿ

ಸೋತು ಆತನಿಗೆ ನೋಟು ಬರೆಕೊಟ್ಟಿದ್ದಳು; ಹಾಗು ಆತ ಹಣದ ಬಗ್ಗೆ ಉಪದ್ರವ ಕೊಡಹತ್ತಲು, ಆ ಸಾಲ ತೀರಿಸಲಿಕ್ಕೆಂದು ಆಕೆ ಯಾವ ನಿಂದ್ಯ ಕರಾರಗಳಿಗೊಪ್ಪಿ ಹ್ಯಾಮನ್ ಆರ್ಟನ್ನನಿಂದ ಆ ಹಣದ ಚಕ್ಕು ಸಂಪಾದಿಸಿದ್ದಳೆಂಬ ಸಂಗತಿ ಈ ಮೊದಲೇ ಬಂದು ಹೋಗಿದೆ. ಕ್ಯಾಪ್ಟನ್ ರೆನ್ ಹ್ಯಾಮನಿಗೆ ಆ ಯಾವ ಹುಚ್ಚು-ಹುಳಕುಗಳೂ ಗೊತ್ತಿರಲಿಲ್ಲ. ಆದರಿಂದ ಉಯಿನ್‌ಕಾರನೊಬ್ಬ ಸದ್ಗೃಹಸ್ಥನೆಂದೇ ಆತನ ಭಾವನೆಯಾಗಿದ್ದಿತು; ಈಗಲೂ ಉಯಿನ್‌ಕಾರನ ವಿಷಯವಾಗಿ ಅವನಲ್ಲಿ ನಿಜವಾದ ಸಂದೇಹ ಉಳಿಯಲಿಲ್ಲ.

---

## ೧೩ನೇ ತೆರೆ:— ಡಾಯಿನಿಂಗ ಕಾರಿನಲ್ಲಿ ಅತ್ಯಾಚಾರ

ಫ್ರಾನ್ಸದೊಳಗಿನ ಆ ಬಾಸೆಲ್ ಜಂಕ್ಶನ್ ಸ್ಟೇಶನ್ನಿನಿಂದ ಹೊರಟ ಓರಿಯೆಂಟಲ್ ಎಕ್ಸಪ್ರೆಸ್ಸ ಟ್ರೇನು ಬಹು ದೀರ್ಘವಾದ ಪ್ರವಾಸ ಮಾಡಿ ಕೇನಿಯಾದ ರಾಜಧಾನಿ ಹಾಕಿಮಾಯೋ ಪಟ್ಟಣದ ಕಡೆಗೆ ವಾಯುವೇಗದಿಂದ ನಡೆದಿತ್ತು. ಆ ರೈಲ ಮಾರ್ಗದ ಎರಡೂ ಕಡೆಗಳಲ್ಲಿಯ ಪ್ರಾಕೃತಿಕ ನೋಟದಂತಹ ನೋಟ ಇಡಿ ಯುರೋಪಖಂಡದ ಬೇರೆ ಕಡೆಗಳಲ್ಲೆಲ್ಲಿಯೂ ಕಾಣದು; ಆದರೆ ನಮ್ಮ ರೆನ್‌ಹ್ಯಾಮು ತನ್ನ ಮಹತ್ವದ ಕೆಲಸದ ಬಗ್ಗೆ ಮನಸ್ಸಿನಲ್ಲಿ ಬಹು ದೀರ್ಘವಾಗಿ ಯೋಚಿಸಹತ್ತಿದ್ದರಿಂದ, ಆತ ಸ್ವಭಾವತಃ ಸೃಷ್ಟಿಸೌಂದರ್ಯದ ಭೋಕ್ತಾರನಾಗಿದ್ದರೂ, ಅಂದು ಆತನ ಕಣ್ಣಿಗೆ ಆ ಯಾವ ನೋಟದಿಂದಲೂ ಆನಂದವೆನಿಸಲಿಲ್ಲ. ಊಟದ ಸಮಯಕ್ಕೆ ಮಾತ್ರ ಡಾಯಿನಿಂಗ ಕಾರಿನಲ್ಲಿ ಉಯಿನ್‌ಕಾರನ ದರ್ಶನ ಅವನಿಗೆ ತಪ್ಪದೇ ಆಗುತ್ತಿತ್ತು. ಉಳಿದ ಸಮಯದಲ್ಲಿ ಅವರು ಬೇರೆ ಬೇರೆ ಕಂಪಾರ್ಟಮೆಂಟುಗಳಲ್ಲಿರುತ್ತಿದ್ದದರಿಂದ ಭೇಟಿಯಾಗುತ್ತಿರಲಿಲ್ಲ. ಒಟ್ಟಿನಲ್ಲಿ ಉಯಿನ್‌ಕಾರನ ದರ್ಶನವಾಗದಿದ್ದರೇ ರೆನ್‌ಹ್ಯಾಮನಿಗೆ ಸಂತೋಷವಾಗುತ್ತಿತ್ತು. ತನ್ನ ಪರಿಚಿತರಾರೂ ತನ್ನ ಮಾರ್ಗದಲ್ಲಿ ಭೇಟಿಯಾಗಬಾರದೆಂದೇ ಆತನ ಇಚ್ಛೆಯಾಗಿತ್ತು; ಆದರೆ ಇನ್ನು ಉಯಿನ್‌ಕಾರನ ಕಣ್ಣು ತಪ್ಪಿಸಿ ಹೋಗುವದು ಸಾಧ್ಯವಿರಲಿಲ್ಲ. ಉಯಿನ್‌ಕಾರ ಆ ಟ್ರೇನಿನಲ್ಲಿಯ ಒಬ್ಬ ಪ್ರೌಢ ಜರ್ಮನ ಗೃಹಸ್ಥ ಹಾಗು ಆತನ ಹೆಂಡತಿಯ ಕೂಡ ಸ್ನೇಹ ಬೆಳೆಸಿದ್ದ. ಡಾಯಿನಿಂಗ ಕಾರಿನಲ್ಲಿ ಹೋ-

ದಾಗ ರೆನ್‌ಹ್ಯಾಮನಿಗೆ ಅವರ ಕೆಲವು ಮಾತು ಕೇಳಿಸಿದ್ದವು. ಆ ಸಂಭಾಷಣಾ ದಿಂದ ಆ ಜರ್ಮನ್ನ ದಂಪತಿಗಳು ಕಾನ್ಸ್ಟಾಂಟಿನೋಪಲ್ಲಿಗೆ ಹೋಗತಕ್ಕವ ರೆಂಬದು ಅವನಿಗೆ ಗೊತ್ತಾಗಿತ್ತು.

ಲಂಡನ್ನಿನಿಂದ ಹೊರಟ ಮೂರನೇ ದಿನ ಸಂಜೆಗೆ ರೆನ್‌ಹ್ಯಾಮ ಕೇಸಿಯಾ ದೇಶವನ್ನು ಪ್ರವೇಶಿಸಿದ. ಇನ್ನು ಬೇಗನೆ ತನ್ನೀ ದೀರ್ಘ ಪ್ರವಾಸ ಕೊನೆಗಾಣುವದೆಂದು ಭಾವಿಸಿ ಆತ ಎಷ್ಟೋ ನಿಶ್ಚಿಂತನಾಗಿದ್ದ ಆ ದಿನ ರಾತ್ರಿಯ ಊಟ ಡಾಯಿನಿಂಗ ಕಾರಿನಲ್ಲಿ ಆತನಿಗೆ ಮತ್ತೆ ಉಯಿನ್‌ಕಾರನ ಭೇಟಿ ಯಾಯಿತು. ಇದ ವರೆಗೆ ಆತ ರೆನ್‌ಹ್ಯಾಮನಿಂದ ತುಸ ದೂರದ ಟೇಬಲ್ಲಿ ನಲ್ಲೇ ಕುಳಿತು ತನ್ನ ಊಟ ತೀರಿಸುತ್ತಿದ್ದ; ಆದರೆ ಆ ಕಡೆಯ ರಾತ್ರಿ ಆತ ರೆನ್‌ಹ್ಯಾಮನ ಊಟದ ಟೇಬಲ್ಲಿಗೇ ಹೋದ. ಆಗ ಆತ ರೆನ್‌ಹ್ಯಾಮನನ್ನು ಕಂಡು ಮುಗುಳ್ನಗೆಯಿಂದ:-ರೆನ್‌ಹ್ಯಾಮ, ನಾನು ಇಂದು ನಿಮ್ಮ ಟೇಬಲ್ಲಿಗೆ ಊಟಕ್ಕೆ ಬಂದ ಕಾರಣವೇನೆಂಬದನ್ನು ಬಲ್ಲಿರಾ? ಆ ಇಳಿ ವಯಸ್ಸಿನ ಜರ್ಮ ನ್ನನೂ ಆತನ ಆ ನವ ತರುಣಿ ಹೆಂಡತಿಯೂ ಪ್ರತಿದಿನ ನನ್ನ ಹತ್ತಿರವೇ ಕುಳಿತು ಉಣ್ಣುತ್ತಿದ್ದರು. ಅವರು ಬಹು ಸ್ವಪಚರು. ಅವರ ಮೈ ದುರ್ಗಂಧ ದಿಂದ ಭೂತ-ಪಿಶಾಚಿಗಳು ಕೂಡ ಓಡಿ ಹೋಗಬಹುದು. ನಾನಂತೂ ಮನು ಷ್ಯನು. ನಾನು ಅವರ ಮೈಯ ಆ ಹೊಲಸು ನಾತವನ್ನು ಕುಡಿಯಲಾರದೆ, ಇಂದು ನಿಮ್ಮ ಟೇಬಲ್ಲಿಗೆ ಬಂದಿರುತ್ತೇನೆ. ಆ ಜರ್ಮನ್ನ ಜನರು ಸಭ್ಯರೆಂದೆ ಣಿಸಿಕೊಳ್ಳಲಿಕ್ಕೆ ಇನ್ನೂ ಅವಕಾಶವಿದೆ. ಅವರು ಇನ್ನೂ ನಮ್ಮಂತಹರ ಕೂಡ ಕುಳಿತು ಊಟ ಮಾಡಲಿಕ್ಕೆ ಅಯೋಗ್ಯರಾಗಿರುತ್ತಾರೆ, ಹೀಗೆಂದು ನುಡಿಯು ವಾಗ ತನ್ನ ಮೂಗಿನ ಹೊರಳೆಗಳನ್ನು ಆಗಾಗ್ಗೆ ಮುಚ್ಚಿಕೊಳ್ಳುತ್ತ, ಜರ್ಮ ನ್ನರು ತನ್ನ ಹತ್ತರ ಕೂಡ್ರಲಿಕ್ಕೆ ಕೂಡ ಯೋಗ್ಯರಲ್ಲೆಂಬದನ್ನು ಆತ ವ್ಯಕ್ತ ಗೊಳಿಸುತ್ತಿದ್ದ.

ಜರ್ಮನ್ನರು ಕೊಟ್ಟ ಪೆಟ್ಟನ್ನು ರೆನ್‌ಹ್ಯಾಮನೇ ಏಕೆ? ಯಾವ ಬ್ರಿಟಿ ಶನೂ ಇಷ್ಟರಲ್ಲಿ ಮರೆಯುವಂತಿರಲಿಲ್ಲ. ಆದರಿಂದ ಉಯಿನ್‌ಕಾರನ ಮಾತು ಕೇಳಿ, ರೆನ್‌ಹ್ಯಾಮನಿಗೆ ಸಂತೋಷವೆನಿಸಿತು. ಆಗ ಆತ ನಸು ನಗೆಯಿಂದ: ನೀವು ಅವರ ಟೇಬಲ್ಲು ಬಿಟ್ಟು ಬಂದು ಸುರುಚಿಯನ್ನೇ ವ್ಯಕ್ತಪಡಿಸಿದಿರಿ.

ಅವರೆಲ್ಲರೂ ಹಾಕಿವಾಯೋ ಸ್ಟೇಶನ್ನಿಗಿಳಿದು ರಾಜ ಮಾರ್ಗ ಹಿಡಿದು ಸಾಗಲಿಕ್ಕೆ ಇನ್ನೂ ಅವಕಾಶವಿದ್ದಿತು. ಆ ದಾರಿಯಲ್ಲಿ ಯಾವ ದಸ್ಯುವಾದರೂ

ಗಂಟು ಬಿದ್ದ. ತನ್ನಲ್ಲಿರುವ ಗುಪ್ತ ಕರಾರಿನ ಕಾಗದವನ್ನೆತ್ತಿಕೊಂಡಾನೆಂದು ಭಾವಿಸಿ, ರೆನ್‌ಹ್ಯಾಮು ಅಂದು ಸಂಜೆಯು ಮುಂದೆಯೇ ಒಂದು ದೊಡ್ಡ ಸ್ಟೇಶನ್ನಿನಿಂದ ಹಾಗಿವಾಯೋ ಪಟ್ಟಣದ ಪೋಲೀಸ ಕಮೀಶನರನಿಗೆ ತಂತಿ ಕೊಟ್ಟ, ತನ್ನನ್ನು ರಾಜಪ್ರಾಸಾದದ ವರೆಗೆ ಮುಟ್ಟಿಸುವದಕ್ಕಾಗಿ ಸಶಸ್ತ್ರ ಪೋಲೀಸರೊಡನೆ ಸ್ಟೇಶನ್ನಿನಲ್ಲಿ ಸಿದ್ಧವಿರಬೇಕೆಂದು ತಿಳಿಸಿದ್ದ. ಓರಿಯೆಂಟಲ್ ಎಕ್ಸಪ್ರೆಸ್ಸ ಗಾಡಿ ತನ್ನ ಬಹು ದೀರ್ಘ ಮಾರ್ಗವನ್ನು ಮುಗಿಸಿತು. ಇನ್ನುಳಿದಿರುವ ಅತ್ಯಲ್ಪ ದಾರಿಯಲ್ಲಿ ತನಗೆ ಯಾವ ವಿಪತ್ತಾದರೂ ಉಂಟಾದೀತೆಂಬ ಕೊಂಚ ಸಂಶಯವೂ ಆತನ ಮನಸ್ಸಿಗಂಟಿಕೊಂಡಿರಲಿಲ್ಲ.

ಆ ಎಕ್ಸಪ್ರೆಸ್ಸು ರಾಜಧಾನಿಗೆ ತೀರ ಸಮೀಪಿಸಿತು. ಉಯಿನ್‌ಕಾರ ಊಟ ಮಾಡುತ್ತ ಮಾಡುತ್ತ ರೆನ್‌ಹ್ಯಾಮನೊಡನೆ ಹಲವು ಬಗೆಯ ಮಾತಿಗಾರಂಭಿಸಿದ. ಆತನ ಆ ಸಂಭಾಷಣ ಇನ್ನೂ ಪೂರೈಸಿರಲಿಲ್ಲ. ಆತನ ಮಾತಿನೊಳಗಿನ ಬೇಟೆಯ ವಿಷಯ, ಆಟದ ವಿಷಯ, ನೋಟದ ವಿಷಯ ಮುಂತಾದವುಗಳು ರೆನ್‌ಹ್ಯಾಮನಿಗೆ ಬಹು ರುಚಿಕರವೆನಿಸಿದವು. ಆದರಿಂದ ಆತ ಏಕಾಗ್ರಚಿತ್ತದಿಂದ ಆ ಸಂಭಾಷಣ ಕೇಳತೊಡಗಿದ್ದ. ಊಟ ಮುಗಿಯಿತು. ಇಬ್ಬರೂ ಚಿರೂಟ ಹೊತ್ತಿಸಿಕೊಂಡು ಕಾಫಿ ಕುಡಿಯತೊಡಗಿದರು ಈ ಸಮಯದಲ್ಲಿ ಅಚಿಂತ್ಯವಾಗಿ ಕೇಳಿಸಿದ ರಿವಾಲ್ವರಿನ ಸಪ್ಪಳದಿಂದ ರೆನ್‌ಹ್ಯಾಮು ಚಮಕಿತನಾದ. ಆ ರಿವಾಲ್ವರಿನ ಗುಂಡು ಆತನ ಹಿಮ್ಮಗ್ಗಲಿನ ಕಿಟಕಿಯ ನ್ನೊಡೆದು ಪಾರಾಗಿ ಹೋಗಿತ್ತು!

ಆ ಡಾಯಿನಿಂಗ ಕಾರಿನಲ್ಲಿ ಎಷ್ಟು ಜನ ಪ್ರವಾಸಿಗಳು ಕುಳಿತಿದ್ದರೋ, ಅವರೆಲ್ಲರೂ ಆ ಸಪ್ಪಳ ಕೇಳಿ ಥರಗುಟ್ಟಿ ನಡುಗಹತ್ತಿದರು. ಆ ಗುಂಡು ಯಾವ ದಿಕ್ಕಿನಿಂದ ಬಂದಿತೆಂಬದನ್ನು ನೋಡುವದಕ್ಕಾಗಿ ರೆನ್‌ಹ್ಯಾಮು ತನ್ನ ಸ್ಥಳದಿಂದ ಲಗುಬಗನೆ ಎದ್ದು ನಿಂತ. ಉಯಿನ್‌ಕಾರನೂ ಆತನ ಹಿಂದೆಯೇ ಎದ್ದು ನಿಂತು, ಆತನ ಹೆಗಲ ಮೇಲೆಯೇ ತನ್ನ ಗೋಣನ್ನಿಟ್ಟು ಮುಂದೆ ಹಣಿಕಿ ಹಾಕಹತ್ತಿದ; ಆಗ ಆ ಅತ್ಯಲ್ಪ ಕಾಲದಲ್ಲಿ ಆತನ ಕೈ ರೆನ್‌ಹ್ಯಾಮನ ಕಾಫಿಯ ಕಪ್ಪಿನ ಮೇಲೆ ಹಾಯ್ದು ಬಂತು; ಹಾಗು ಅದರೊಡನೆಯೇ ಕಾಗದದ ಚೀಟಿನೊಳಗಿನ ಒಂದು ಸಾಮಾನ್ಯ ಪುಡಿ ಆ ಕಾಫಿಯ ಕಪ್ಪಿನಲ್ಲಿ ಬಿದ್ದು ಅದು ನಿಮಿಷಾರ್ಧದಲ್ಲಿ ಕಾಫಿಯೊಡನೆ ಬೆರೆತು ಹೋಯಿತು!

ಮುಂದೊಂದು ನಿಮಿಷದಲ್ಲಿಯೇ ಒಬ್ಬ ರೈಲಖಾತೆಯ ನೌಕರ ತನ್ನ ಎರಡೂ ಕೈಗಳನ್ನು ಎತ್ತಿಹಿಡಿದು, ಫಾರ್ಸೀ ಭಾಷೆಯಿಂದ:—ಎಲೈ ಸಭ್ಯ ಗೃಹಸ್ಥರೇ, ಸಭ್ಯ ಮಹಿಳೆಯರೇ, ತಾವುಗಳಾರೂ ಬೆದರುವ ಕಾರಣವಿಲ್ಲ; ಎಲ್ಲರೂ ಶಾಂತಚಿತ್ತರಾಗಬೇಕು. ದುರ್ದೈವದಿಂದ ಯಾವುದೊಂದು ಬಂದೂಕಿನ ಸಪ್ಪಳವಾಯಿತು; ಆದರೂ ಯಾರಿಗೂ ಏನೊಂದೂ ಕೇಡುಂಟಾಗಿರುವದಿಲ್ಲ, ಎಂದು ಬಿನ್ನಯಿಸಿದನು.

ತದನಂತರ ಒಬ್ಬ ಪ್ರಯಾಣಿಕ ತನ್ನ ಇಬ್ಬರು ಸಂಗಡಿಗರೊಡನೆ ಒಂದು ಆಟೋಮೆಟಿಕ್ ಪಿಸ್ತೂಲಿನಲ್ಲಿ ಗುಂಡು ತುಂಬುತ್ತಿರುವಾಗ ಅದರಲ್ಲಿಯದೊಂದು ಗುಂಡು ಆಕಸ್ಮಿಕವಾಗಿ ಹಾರಿತೆಂಬದು ಎಲ್ಲರಿಗೂ ಗೊತ್ತಾಯಿತು. ಬಳಿಕ ಉಯಿನ್‌ಕಾರ ತನ್ನ ಖುರ್ಚಿಯ ಮೇಲೆ ಕುಳಿತುಕೊಂಡು, ಸರ್ವಜ್ಞನಂತೆ ತಲೆಯನ್ನಲ್ಲಾಡಿಸುತ್ತ:—ಇದು ಯಾವನೊಬ್ಬ ಪೋರನ ಕೆಲಸವಾಗಿರಲಿಕ್ಕೆ ಸಾಕು. ಹುಡುಗರ ಕೈಗೆ ಶಸ್ತ್ರಾಸ್ತ್ರಗಳು ಸಿಕ್ಕರೆ, ಅವರಿಂದ ಇಂಥ ದುರ್ವ್ಯವಹಾರಗಳುಂಟಾಗುವದೇ ಸರಿ! ಎಂದಂದ

'ಸ್ವತಂತ್ರ ದೇಶಗಳಲ್ಲಿ ಎಲ್ಲರೂ ತಮ್ಮ ಇಷ್ಟಾನುಸಾರವಾಗಿ ಶಸ್ತ್ರಾಸ್ತ್ರಗಳನ್ನು ಪಯೋಗಿಸಬಲ್ಲರು!' ಎಂದಂದು, ರೆನ್‌ಹ್ಯಾಮ ಆರಿ ಹೋಗುತ್ತಿರುವ ತನ್ನ ಕಾಫಿಯ ಕಪ್ಪನ್ನೆತ್ತಿಕೊಂಡು, ಒಂದೇ ಗ ಟುಕಿನಲ್ಲಿ ಅದನ್ನು ಬರಿದಾಗಿ ಮಾಡಬಿಟ್ಟ. ಆಗ ಉಯಿನ್‌ಕಾರ ಆನಂದಪ್ರಫುಲ್ಲಿತ ದೃಷ್ಟಿಯಿಂದ ಅವನ ಕಡೆಗೆ ನೋಡುತ್ತ:—ಇನ್ನು ಹತ್ತಿಪ್ಪತ್ತು ಮಿನೀಟುಗಳಲ್ಲೇ ನಾವು ಢಾಕಿವಾಯೋ ಪಟ್ಟಣ ಸೇರುವೆವು. ಆದ್ದರಿಂದ ಇನ್ನು ವಿಶ್ರಾಂತಿಗೆಂದು ನಮ್ಮ ಕಂಪಾರ್ಟಮೆಂಟಿಗೆ ಹೋಗಿ ಮಲಗಿಕೊಳ್ಳುವದನವಶ್ಯಕ. ಈಗ ಮಧ್ಯರಾತ್ರಿಯಾದುದರಿಂದ ನನಗೇನೋ ಹೆಚ್ಚಾಗಿ ನಿದ್ದೆಬರುತ್ತಿದೆ; ಆದರೂ ನಾನು ಮಲಗುವದಿಲ್ಲ ಒತ್ತಟ್ಟಿಗೆ ಆವಿತುಕೊಂಡು ಕುಳಿತೇ ಇನ್ನುಳಿದಿರುವ ಅಲ್ಪ ದಾರಿ ಕ್ರಮಿಸುವೆನೆಂದು ಹೇಳಿ, ಆತ ತನ್ನ ಕಂಪಾರ್ಟಮೆಂಟಿಗೆ ನಡೆದ. ರೆನ್‌ಹ್ಯಾಮನೂ ತನ್ನ ಸ್ಥಳಕ್ಕೆ ಹೊರಟು ಹೋದ. ಆತ ಯಾವ ಕಂಪಾರ್ಟಮೆಂಟಿನಲ್ಲಿದ್ದನೋ ಆ ಇಡಿ ಕಂಪಾರ್ಟಮೆಂಟನ್ನು ಆತ ರಿಝುರ್ವ ಮಾಡಿಸಿರಲಿಲ್ಲ? ಆದರೊಳಗಿನದೊಂದು ಬೆಡ್ಡ ಮಾತ್ರ ರಿಝುರ್ವ ಮಾಡಿಸಿದ್ದ. ಆತನ ಆ ರಿಝುರ್ವ ಬೆಡ್ಡಿನ ಮೇಲೆ ಮತ್ತೆ

ಯಾವ ಪ್ರವಾಸಿಗಳಿಗೆ ಕೂಡ್ರಲಿಕ್ಕೆ ಅಧಿಕಾರವಿರದಿದ್ದರೂ, ಅದೇ ಕಂಪಾರ್ಟಮೆಂಟನೊಳಗಿನ ಜೇರೊಂದು ಬೆಡ್ಡಿನ ಮೇಲೆ ಮತ್ತೊಬ್ಬ ಯುವಕ ಆಗ ಬಂದು ಕುಳಿತಿದ್ದುದು ರೆನ್‌ಹ್ಯಾಮನಿಗೆ ಕಾಣಿಸಿತು. ಇದೇ ಯುವಕನ ಪಿಸ್ತೂಲಿನ ಗುಂಡಿನಿಂದಲೇ ಡಾಯಿನಿಂಗ ಕಾರಿನೊಳಗಿನ ಪ್ರವಾಸಿಕರು ಬೆದರಿದ್ದರು. ಅವನನ್ನು ಗುರ್ತಿಸಿದ ಕೂಡಲೆ ರೆನ್‌ಹ್ಯಾಮ ನಿಗೆ ಬಹು ಸಂತಾಪವುಂಟಾಯಿತು; ಆದರೆ ತನಗೆ ಆತನನ್ನು ಆ ಕಂಪಾರ್ಟ ಮೆಂಟಿನಿಂದ ಹೊರಹೊರಡಿಸುವ ಅಧಿಕಾರವಿರದ್ದರಿಂದ, ಆತ ಸುಮ್ಮನೆ ಬಾಯಿ ಮುಚ್ಚಿಕೊಂಡು ಕೂಡ್ರುವ ಪ್ರಸಂಗವುಂಟಾಯಿತು. ಆದರಿಂದ ಆಗ ಆತನ ಮನಸ್ಸು ಹಲವು ಬಗೆಯ ಚಿಂತೆಯಿಂದ ವ್ಯಾಕುಲವಾಯಿತು.

ಉಯಿನ್‌ಕಾರ ಈ ಮೊದಲು ರೆನ್‌ಹ್ಯಾಮನ ಕಾಫಿಯ ಕಪ್ಪಿನಲ್ಲಿ ಯಾವ ಚೂರ್ಣ ಚೆಲ್ಲಿಕೊಟ್ಟಿದ್ದನೋ, ಅದರ ಕಾರ್ಯಕ್ಕೆ ಪ್ರಾರಂಭ ವಾಯಿತು. ಆದರಿಂದ ರೆನ್‌ಹ್ಯಾಮ ಕುಳಿತಲ್ಲಿ ಕೂಡ್ರಲಿಕ್ಕೆ ಕೂಡ ಅಸ್ಪ ಮರ್ಥನಾದ. ಅವನ ಕಣ್ಣುರೆಪ್ಪೆಗಳು ಕಸುವಿನಿಂದ ಮುಚ್ಚಿಕೊಳ್ಳತೊಡ ಗಿದವು ಕಡೆಗೆ ಆತ ನಿರುಪಾಯನಾಗಿ, ತನ್ನ ಬೆಡ್ಡಿನ ಮೇಲೆ ಅಡ್ಡಾದ. ತತ್‌ಕ್ಷಣವೇ ಗಾಢವಾದ ನಿದ್ದೆ ಅವನನ್ನು ಆವರಿಸಿ ಬಿಟ್ಟಿತು!

ರೆನ್‌ಹ್ಯಾಮನ ಕಂಪಾರ್ಟಮೆಂಟಿನಲ್ಲಿ ಯಾವ ತರುಣ ಕುಳಿತಿ ದ್ದನೋ ಆತನೂ ಮಲಗಿಕೊಂಡ; ಹಾಗು ಮುಂದೆ ಒಂದೆರಡು ಮಿನೀಟು ಗಳಲ್ಲೇ ಆತ ಬಹು ದೀರ್ಘವಾದ ಘೋರಿಕೆ ಹೊಡೆಯ ಹತ್ತಿದ; ಆದರೆ ಆತ ನಿಗೆ ನಿಜವಾಗಿ ನಿದ್ದೆ ಹತ್ತಿರದ್ದರಿಂದ, ಆತ ಮುಂದೆ ಕೆಲ ನಿಮಿಷಗಳಲ್ಲಿಯೇ ಎದ್ದು ಕುಳಿತು, ರೆನ್‌ಹ್ಯಾಮನ ಕಡೆಗೆ ತೀಕ್ಷ್ಣ ನೋಟದಿಂದ ನೋಡತೊಡ ಗಿದ. ರೆನ್‌ಹ್ಯಾಮನಿಗೆ ನಿಜವಾಗಿಯೂ ಗಾಢನಿದ್ದೆ ಹತ್ತಿರುವದೆಂಬದನ್ನು ತಿಳಿದ ಕೂಡಲೆ, ಆ ಯುವಕ ತನ್ನ ಸ್ಥಳದಿಂದೆದ್ದು ಬಂದು ಆತನ ಹತ್ತರ ನಿಂತು ಅವನ ಹೆಗಲನ್ನು ಮುಟ್ಟಿದ; ಆದರೂ ರೆನ್‌ಹ್ಯಾಮನಿಗೆ ಎಚ್ಚರ ವಾಗಲಿಲ್ಲೆಂಬದನ್ನು ತಿಳಿದ ಆತ ನಗೆಮೊಗದಿಂದ ಒಂದೆರಡು ನಿಮಿಷ ಗಳಲ್ಲೇ ಉಯಿನ್‌ಕಾರನ ಕಂಪಾರ್ಟಮೆಂಟಿಗೆ ಹೋಗಿ, ಅವನನ್ನು ಅಲ್ಲಿಗೆ ಕರೆತಂದ; ಹಾಗು ಆ ತರುಣ ಉಯಿನ್‌ಕಾರನ ಕಿವಿಗೆ ತನ್ನ ತುಟಿಗಳನ್ನು ಆನಿಸಿ:—ನೋಡಿದಿರಾ, ಈತ ಹೇಗೆ ಕೋಣನಂತೆ ಬಿದ್ದು ಕೊಂಡಿರುವನೆಂಬದನ್ನು? ಈತ ಈ ಗಾಢನಿದ್ದೆಯಿಂದ ಬೇಗನೆ ಏಳಲಾರ.

ಕೂಡಲೆ ಆ ಯುವಕ ಉಯಿನ್‌ಕಾರ ಸೂಚಿಸಿದ ಮೇರೆಗೆ ಪಕ್ಕದ ಕಿಟಕಿಗಳನ್ನೆಲ್ಲ ಮುಚ್ಚಿಕೊಂಡ. ಬಳಿಕ ಉಯಿನ್‌ಕಾರ ರೆನ್‌ಹ್ಯಾಮನ ಸ್ಕಂಧಗಳನ್ನು ಹಿಡಿದು ಎರಡು ಮೂರು ಸಾರೆ ಅಗಳಾಡಿಸಿದ. ಆದರೂ ಆತನಿಗೆ ಎಚ್ಚರವಾಗಲಿಲ್ಲ. ಒಮ್ಮೆ ಮಾತ್ರ ಆತ 'ಆಃ' ಎಂದು ಆಕಳಿಸಿ, ಮತ್ತೆ ಘೋರೆಂದು ಗೊರಿಕೆಹೊಡಿಯಲುಪಕ್ರಮಿಸಿದ.

ಬಳಿಕ ಉಯಿನ್‌ಕಾರ ಆತನ ಕೋಟು-ಜಾಕೀಟುಗಳ ಗುಂಡಿಗಳನ್ನು ಬಿಚ್ಚಿ ಶರ್ಟಿನ ಒಳಬದಿಗೆ ಕೈನೀಡಿದ. ಅಲ್ಲಿಯ ಗುಪ್ತವಾದ ಒಳಕಿಸೆಯಲ್ಲಿ ತೆಳುವಾದ ರಬ್ಬರಿನದೊಂದು ಪುಟ್ಟ ಪಾಕೀಟಿದ್ದಿತು. ಅದರಲ್ಲಿ ಮಡಚಿಟ್ಟದ್ದೊಂದು ಕಾಗದವಿತ್ತು. ಆತ ಆ ಅಮೂಲ್ಯ ಕಾಗದವನ್ನಷ್ಟೇ ಕಿತ್ತುಕೊಂಡ.

ಅಷ್ಟರಲ್ಲಿ ಉಯಿನ್‌ಕಾರನ ಆ ಸಂಗಡಿಗ ತನ್ನ ತೊಗಲಿನ ರೈಲು ಬ್ಯಾಗನ್ನು ಬಿಚ್ಚಿದ. ಅದರಲ್ಲಿ ಒಂದು ಕಾಜಿನ ಚೌಕಟದ್ದಿತು. ಅದು ಸಾಮಾನ್ಯವಾದುದೊಂದು ಚೀಟಿಯ ಆಕಾರದ್ದಿತ್ತು. ಆ ಚೌಕಟ್ಟಿನ ಒಳಬದಿಗೊಂದು ಸಾದಾ ಕಾಗದವಿತ್ತು. ಆ ಕಾಗದ ಕರಿಯ ಕಬ್ಬಿಣದ ಬಣ್ಣದ್ದಾಗಿತ್ತು.

ಉಯಿನ್‌ಕಾರ ಆ ಕರಾರಿನ ಕಾಗದ ಆ ತರುಣನ ಕೈಗಿತ್ತ. ಕೂಡಲೆ ಆತ ಅದನ್ನು ಆ ಕಾಜಿನ ಚೌಕಟ್ಟಿನೊಳಗಿಟ್ಟು ಚೌಕಟ್ಟನ್ನು ಹತ್ತಿಕ್ಕಿದ. ಆಗಲೆ ಅದರ ಕೆಳಭಾಗ ವಿದ್ಯುತ್ಪ್ರಕಾಶದಿಂದ ಮಿನುಗಿ, ಆ ಕಾಗದದ ಫೋಟೋ ಆ ಕಾಜಿನ ಮೇಲೆ ಮೂಡಿಬಿಟ್ಟಿತು. ಈ ಸಂಗತಿ ನಮ್ಮ ಹಿಂದವಾಸಿಗಳಿಗೆ ತೀರ ಅಸಂಭವವೆಂದ ಕಂಡು ಬಂದರೂ, ಅಮೇರಿಕೆಯ ಆ ನಿಷ್ಣಾತ ವೈಜ್ಞಾನಿಕರು ಅದನ್ನು ಅತಿ ಸಹಜವಾಗಿ ಮಾಡಬಲ್ಲರು. ಅವರು ಸುಧಾರಿಸಿದ–ಸುಶಿಕ್ಷಿತ ಕಳ್ಳರು. ಅವರ ಆ ಪಾಂಡಿತ್ಯ ಈ ಪುಸ್ತಕದಲ್ಲಿ ಇನ್ನು ಮುಂದೆ ಚೆನ್ನಾಗಿ ವ್ಯಕ್ತವಾಗತಕ್ಕದ್ದಿರುವದರಿಂದ, ಅದನ್ನು ಈಗಲೇ ತಿಳಿಸಲವಶ್ಯವಿಲ್ಲ.

ತಮ್ಮ ಕೆಲಸ ಕೈಗೂಡಿದ ಕೂಡಲೆ ಉಯಿನ್‌ಕಾರ ಆ ಯಂತ್ರ ತೆಗೆದಿರಿಲಿಸಕ್ಕೆ ಹೇಳಿ, ಹಲ್ಲು ಕಿಸಿದ:–ಹುಣ್ಣಿವೆಯ ಬೆಳದಿಂಗಳಲ್ಲಿ ನರಿ ಸವತೀ ಹೊಲದೊಳಗಿನ ಸವತೀಕಾಯಿಗಳನ್ನು ಎತ್ತಿಹಾಕುವ ಕೆಲಸಕ್ಕಿಂತಲೂ ಈ ಕೆಲಸ ಬಹು ಸುಲಭವಾಗಿ ನೆರವೇರಿತು! ಎಂದಂದು, ಗಹಗಹಿಸಿ ನಕ್ಕ.

ಆ ತರುಣ ಗಾಢವಾಗಿ ಮಲಗಿದ್ದ ರೆನ್‌ಹ್ಯಾಮನ ಬಕ್ಕಣದಲ್ಲಿ ಆ ಕಾಗದವನ್ನು ಮತ್ತೆ ಸರಿಯಾಗಿಟ್ಟು, ಬಳಿಕ ತನ್ನ ಬಲಗೈಯಿಂದ ಆವನ ಕೆನ್ನೆಗೊಮ್ಮೆ ಮೆಲ್ಲನೆ ಹೊಡೆದು, ತನ್ನ ರೈಲಬ್ಯಾಗಿನೊಡನೆ ಹೋಗಿ ತನ್ನ ಸ್ಥಳದಲ್ಲಿ ಕುಳಿತ. ಉಯಿನ್‌ಕಾರನೂ ಇನ್ನು ಅಲ್ಲಿಂದ ಹೊರಡತಕ್ಕವ; ಅಷ್ಟರಲ್ಲಿ ನಿದ್ರೆಯಿಂದೆಚ್ಚತ್ತ ರೆನ್‌ಹ್ಯಾಮ ಭರದಿಂದ ಎದ್ದು ನಿಂತು, ಆತನ ಕುತ್ತಿಗೆಗೆ ಕೈಹಾಕಿ ಒಳ್ಳೇ ಕಸುವಿನಿಂದ ಹಿಚುಕಿದ. ಅದರಿಂದ ಆತನ ಉಸಿರು ಕಟ್ಟಹತ್ತಿತು; ಹಾಗು ಮೋರೆ ವಿವರ್ಣವಾಯಿತು! ಉಯಿನ್‌ಕಾರ ಆತನ ಕೈಯಿಂದ ಕೊಸರಿಕೊಳ್ಳಹೋಗಲು, ಆತ ಅವನನ್ನು ಕೆಡಹಿ ಆತನ ಎದೆಯ ಮೇಲೆ ಕುಳಿತು:—'ಯಾಕೋ, ಪಿಶಾಚೀ ನನ್ನ ಕಿಸೆ ಕತ್ತರಿಸುವ ಸಲುವಾಗಿ ಇಲ್ಲಿಗೆ ಬಂದಿರುತ್ತೀಯಾ? ನನಗೆ ಹೀಗೆ ಆಕಸ್ಮಿಕವಾಗಿ ಎಚ್ಚರ ವಾಗದಿದ್ದರೆ, ನೀನು ನನ್ನ ಸರ್ವನಾಶ ಮಾಡಿಬಿಡುತ್ತಿದ್ದೆ' ಹೀಗೆಂದು ನುಡಿದು, ಉಯಿನ್‌ಕಾರನ ಕೆನ್ನೆಯ ಮೇಲೊಮ್ಮೆ ಚೆನ್ನಾಗಿ ಏಟು ಹಾಕಿದ. ಬಳಿಕ ರೆನ್‌ಹ್ಯಾಮ ತನ್ನ ಬಕ್ಕಣದಲ್ಲಿ ಕೈ ಹಾಕಿ ನೋಡಿದ. ತನ್ನ ಪಾಕೇಟಿನೊಳಗಿನ ರಬ್ಬರ ಚೀಲದಲ್ಲಿಯ ಆ ಕಾಗದ ಕಳವಾಗಿ ಹೋಗಿಲ್ಲೆಂಬದು ಆತನಿಗೆ ಖಾತ್ರಿಯಾಯಿತು.

ಉಯಿನ್‌ಕಾರ ರೆನ್‌ಹ್ಯಾಮನಿಂದ ಪಾರಾಗುವದಕ್ಕಾಗಿ ಪ್ರಯತ್ನಿಸುತ್ತಲೇ ಇದ್ದ. ರೆನ್‌ಹ್ಯಾಮ ತನ್ನ ಎದೆಯ ಮೇಲಿಂದೇಳದಾಗಲು, ಆತ ಅವನಿಗೆ ತಿಳಿಯಗೊಡದ ಹಾಗೆ ತನ್ನ ಜೇಬಿನೊಳಗಿನದೊಂದು ಪಿಸ್ತೂಲು ತೆಗೆಯಲಾರಂಭಿಸಿದ; ಆದರೆ ರೆನ್‌ಹ್ಯಾಮನಿಗೆ ಆ ಹಂಚಿಕೆ ತಿಳಿಯಲು, ಆತನೇ ಉಯಿನ್‌ಕಾರನ ಜೇಬಿನೊಳಗಿನ ಆ ಪಿಸ್ತೂಲನ್ನು ತೆಗೆದು. ಕಿಟಕಿಯೊಳಗಿಂದ ಹೊರಗೆ ಚೆಲ್ಲಿಕೊಟ್ಟು, ಒಳ್ಳೇ ಕರ್ಕಶ ದನಿಯಿಂದ:—ಎಲೈ ಮೂರ್ಖಾ, ನನ್ನ ಜೇಬಿಗೆ ಕೈಹಾಕಲಿಕ್ಕೆಂದು ಇಲ್ಲಿಗೆ ನಿನ್ನನ್ನಾರು ಕಳಿಸಿರುತ್ತಾರೆಂಬದನ್ನು ತೀವ್ರವಾಗಿ ಒಡನುಡಿ. ನಿಜ ಸಂಗತಿ ತಿಳಿಸದ ಹೊರತು ನಿನ್ನ ಬಿಡುಗಡೆಯಾಗಲಾರದು.

ಎಷ್ಟು ಸಾರೆ ಕೇಳಿದರೂ ಉಯಿನ್‌ಕಾರನಿಂದ ಆ ಪ್ರಶ್ನೆಗೆ ಉತ್ತರವೇ ಸಿಗಲಿಲ್ಲ. ಬಳಿಕ ರೆನ್‌ಹ್ಯಾಮ ಮತ್ತೆ:—ಎಲೇ ನೀಚಾ, ನಿಮ್ಮ ಕೂಟನಲ್ಲಿ ಮತ್ತೆ ಯಾರ್‍ಯಾರಿರುತ್ತಾರೆಂಬದನ್ನು ತಿಳಿಸು.

'ನನ್ನನ್ನು ಅಷ್ಟು ಮೂರ್ಖನೆಂದು ತಿಳಿದಿರುತ್ತೀಯಾ, ನಮ್ಮ ಮನೆ ತನದ ಸುದ್ಧಿಗಳನ್ನೆಲ್ಲ ನಿನ್ನೆದುರಿಗೆ ಹೇಳಲಿಕ್ಕೆ?'

'ನನ್ನ ಬಳಿಯಲ್ಲಿ ಆ ಗುಪ್ತ ಕರಾರಿರುತ್ತದೆಂಬದನ್ನು ನಿನಗೆ ಹೇಳಿ ದವರಾರು?'

'ಆ ಸಂಗತಿ ನೀನು ಕೇಳಿಕೊಂಡರೆ, ಇನ್ನು ಜೀವದಿಂದಿರುವದಕ್ಕಿಂತ ಏನಾದರೂ ಅಪಘಾತ ಮಾಡಿಕೊಂಡು ಸಾಯುವದೇ ಲೇಸೆಂದು ನಿನಗನಿಸ ದಿರಲಾರದು.'

ಯಾವದೋ ಒಂದು ಗುಪ್ತಸಂದೇಹದಿಂದ ರೆನ್‌ಹಾಮನ ಹೃದಯ ನಡುಗಲಾರಂಭಿಸಿತು. ಆಗ ಆತ ಗಾಬರಿಯಿಂದ:—ನಿನ್ನ ಈ ಒಗಟಿನ ಅರ್ಥವೇ ತಿಳಿಯದು. ಬೇಗನೆ ಬಿಚ್ಚಿ ಹೇಳು. ಈ ಸಂಗತಿ ನಿನಗೆ ಹೇಳಿ ದವರಾರು? ನಾನು ಯಾವ ಉದ್ದೇಶದಿಂದ ಎಲ್ಲಿಗೆ ಹೋಗುತ್ತಿರುವೆನೆಂಬ ದನ್ನು ಬೇರೆಯವರಾರೂ ತಿಳಿಯರು.

'ಆದರೆ ಅವನ್ನೆಲ್ಲ ತಿಳಿದವರೊಬ್ಬರಿರುವರಲ್ಲ!'

'ಹಾಗಾದರೆ ಅವರ ಹೆಸರನ್ನು ಬೇಗನೆ ಹೇಳು, ಕೇಳುವಾ.'

'ನೀನು ನನ್ನ ಎದೆಯ ಮೇಲಿಂದೆದ್ದು ದೂರ ಸರಿದು ನಿಂತರೆ ಮಾತ್ರ ನಾನು ನಿನಗಾ ಹೆಸರು ಹೇಳುತ್ತೇನೆ; ಇಲ್ಲದಿದ್ದರೆ ಇಲ್ಲ.'

'ನಾನು ನಿನ್ನನ್ನು ಬಿಟ್ಟುಕೊಟ್ಟಿದ್ದೇನೆ. ಬೇಗನೆ ಹೇಳು' ಎಂದು ಅಂದವನೇ ರೆನ್‌ಹ್ಯಾಮ ಆತನ ಎದೆಯ ಮೇಲಿಂದ ಎದ್ದು ನಿಂತು, ಆವನ ಬಲಗೈ ಹೆಬ್ಬಟ್ಟನ್ನು ಹಿಡಿದುಕೊಂಡೇ ಮಾತನಾಡಿದ.

ಕೂಡಲೆ ಉಯಿನ್‌ಕಾರ ಎದ್ದು ಕುಳಿತವನೇ:—ದೊಡ್ಡವರ ಮನೆಯ ಹೆಂಗಸರು ನಮ್ಮನ್ನು ಚೆನ್ನಾಗಿ ಮನ್ನಿಸುತ್ತಾರೆ. ಕೆಲಕೆಲವರು ನಮ್ಮೊ ಡನೆ ಹೆಜ್ಜೆ ಕೂಡ ಆಡುತ್ತಿರುತ್ತಾರೆ. ಅವರಲ್ಲಿಯ ಒಬ್ಬಳು ನಮಗೆ ನಿನ್ನ ಗೌಪ್ಯಗಳನ್ನೆಲ್ಲ ತಿಳಿಸಿದಳು. ನೀನು ಯಾವ ಸ್ಟೇಶನ್ನಿನಿಂದ ಯಾವ ಗಾಡಿ ಯಲ್ಲಿ ಕುಳಿತು ಎಲ್ಲಿಗೆ ಯಾವ ಮಾರ್ಗದಿಂದ ಹೊರಡುತ್ತೀ ಎಂಬದು ಕೂಡ ಅವಳಿಂದಲೇ ನಮಗೆ ಸಾದ್ಯಂತವಾಗಿ ತಿಳಿಯಿತು.

ರೆನ್‌ಹ್ಯಾಮನ ಮೈಬೆವರಿತು; ಉಸಿರು ಕಟ್ಟಿಹತ್ತಿತು. ಆಗ ಆತ ಒಳ್ಳೇ ಸಿಟ್ಟಿನಿಂದ:—ಅವಳ ಹೆಸರು ತಿಳಿಸಲಿಕ್ಕೇಕೆ ತಡಮಾಡುವೆ?

ಮುಗುಳ್ನಗೆಯಿಂದ ಉಯಿನ್‌ಕಾರ:—ಚೆನ್ನಾಗಿ ತಿಳಿಸುತ್ತೇನೆ; ಅವಳ ಹೆಸರು ಭಾಯೋಲೆಯೆಂದು. ನೀವು ಅವಳನ್ನು ಬಲ್ಲಿರಾ? ಎಂದು ವ್ಯಂಗ್ಯ ಡನಿಯಿಂದ ಪ್ರಶ್ನೆ ಮಾಡಲು,

ಕ್ಯಾಪ್ಟನ್ ರೆನ್‌ಹ್ಯಾಮನ ತಲೆಗೆ ಸಿಡಿಲು ಬಡಿದಂತಾಯಿತು! ಕೂಡಲೆ ಆತ:—!ಇದೆಂಥ ಸರ್ವನಾಶ! ನಮ್ಮ ಭಾಯೋಲೆಯೇ ವಿಶ್ವಾಸ ಘಾತುಕಗಳಲ್ಲವೆ?' ಎಂದೆನ್ನುತ್ತ ದುಶ್ಚಿಂತಾಗ್ರಸ್ತನಾಗಲು, ಆ ಸುಸಂಧಿ ಸಾಧಿಸಿ, ನೀಚ ಉಯಿನ್‌ಕಾರ ಅಲ್ಲಿಂದ ಹೊರಟು, ಶೀಘ್ರಗತಿಯಿಂದ ತನ್ನ ಕಂಪಾರ್ಟಮೆಂಟಿಗೆ ಹೋಗಿ ಕುಳಿತುಕೊಂಡ.



## ೧೪ನೇ ತೆರೆ— ಭಾಯೋಲೆ ದುರ್ವೃತ್ತರ ಕೈಯೊಳಿ?

ಕ್ಯಾಪ್ಟನ್ ರೆನ್‌ಹ್ಯಾಮ ಲಂಡನ್ನ ಪಟ್ಟಣ ಬಿಟ್ಟು ಹೊರಡುವಾಗ ಆತನು ತನ್ನ ವಿಸ್ವಾಸುಕ ಸೇವಕನಿಗೆ ಯಾವ ಕಾರ್ಯಭಾರ ನೆರವೇರಿಸ ಲಿಕ್ಕೆ ಹೇಳಿ ಹೋಗಿದ್ದನೊ ಆತ ಅದನ್ನು ಮಾಡಲಿಕ್ಕೆ ಒಂದು ಕ್ಷಣ ಕೂಡ ತಡಮಾಡಲಿಲ್ಲ. ಅದೇ ಆ ಮಧ್ಯರಾತ್ರಿಯಲ್ಲಿ ಆ ಹೆನರಿ ಬೇಕಾರ ಸ್ಟ್ರೀಟಿ ನೊಳಗಿನ ರಾಬರ್ಟ ಬ್ಲೇಕನ ಮನೆಗೆ ಹೋಗಿ ತಲೆಬಾಗಿಲು ತಟ್ಟಿದ. ಆ ಪರಿರಾತ್ರಿಯಲ್ಲಿ ಬ್ಲೇಕನೂ ಆತನ ಸಹಕಾರಿಯಾದ ಸ್ಮಿತ್ಥನೂ ಹಗಲೊಳ ಗಿನ ಅತ್ಯಂತ ಶ್ರಮದ ಮೂಲಕ ಗಾಢನಿದ್ರಾಸಕ್ತರಾಗಿದ್ದರು. ಅದರಿಂದ ಹೆನರಿ ನಾಲ್ಕಾರು ಸಾರೆ ಬಾಗಿಲು ಬಡೆದು ಕೂಗಿದರೂ ಯಾರೂ ಓ ಎನ್ನ ಲಿಲ್ಲ; ಬಾಗಿಲ ತೆರೆಯಲಿಲ್ಲ. ಅದರಿಂದಲಾತ ಒಳ್ಳೇ ಕಸುವಿನಿಂದ ಮತ್ತೆ ಮತ್ತೆ ಬಾಗಿಲು ಬಡಿದು, ಬ್ಲೇಕನನ್ನು ಕೂಗಲಾರಂಭಿಸಿದ. ಕಡೆಗೆ ನಿದ್ರಾಭಂಗಗೊಂಡ ಬ್ಲೇಕ ತನ್ನ ಮಲಗುವ ಕೋಣೆಯ ಕಿಟಕಿಯೊಂ ದನ್ನು ತೆರೆದು:—ಯಾರೋ ನೀನು ಹೀಗೆ ಕೂಗುತ್ತಿರುವವ? ಈ ಪರಿ ರಾತ್ರಿಯಲ್ಲಿ ಬಾಗಿಲನ್ನೇಕೆ ಬಡಿಯುತ್ತಿರುವೆ? ವರ್ತಮಾನವೇನು? ಹೇಳು, ಎಂದಂದ.

'ನಾನು ಕಾಪ್ಟನ್ ರೆನ್‌ಹ್ಯಾಮರ ಮನೆಯ ಆಡ್ಲಿಯಾದ ಹೆನರಿ. ನಿಮ್ಮ ಬಳಿಗೇ ಬಂದಿರುತ್ತೇನೆ.'

ಬ್ಲೇಕ ತಟ್ಟನೆ ಹಾಸಿಗೆಯಿಂದೆದ್ದು, ಒಂದು ಶಾಲು ಹೊದ್ದುಕೊಂಡು ಅಟ್ಟದಿಂದ ಕೆಳಗಿಳಿದು ಬಂದು ಬಾಗಿಲು ತೆರೆದ. ಇಷ್ಟರಲ್ಲಿ ಬಾಗಿಲ ಬಳಿಗೆ ಯಾವನೂ ನಿಂತಿರದೆ, ಬಾಗಿಲೆದುರಿಗಿನ ಓಣಿಯಲ್ಲಿ ಯಾರೋ ಬಿದ್ದುಕೊಂಡಿರುವಂತೆ ಕಾಣಿಸಿತು. ದೀಪ ಹಿಡಿದು ನೋಡುತ್ತಾನೆ, ಆ ಮನುಷ್ಯ ಅಲ್ಲಿ ಸತ್ತವನಂತೆ ಚೇತನಾವಿಹೀನನಾಗಿ ಬಿದ್ದಿದ್ದ!

ಎರಡು-ಮೂರು ನಿಮಿಷಗಳ ಹಿಂದೆ ಯಾವನ ಬಡಿಯುವಿಕೆಯಿಂದ ತನ್ನ ಮನೆಯ ಬಾಗಿಲ ಹಲಿಗೆಗಳು ಮುರಿಯಲುಪಕ್ರಮಿಸಿದ್ದವೋ, ಅಂಥ ಬಲಿಷ್ಠ ಮನುಷ್ಯ ಓಣಿಯಲ್ಲಿ ಹೀಗೆ ಆಕಸ್ಮಿಕ ನಿಶ್ಚೇಷ್ಟಿತನಾಗಿ ಬಿದ್ದಿರುವದನ್ನು ಕಂಡು ಬ್ಲೇಕನ ವಿಸ್ಮಯಕ್ಕೆ ಮೇರೆಯುಳಿಯಲಿಲ್ಲ ಆಗಲಾತ ದಾರಿಯುದ್ದಕ್ಕೂ ಸೂಕ್ಷ್ಮವಾಗಿ ನೋಡಿದ, ಆದರೆ ಯಾವ ಕಡೆಗೂ ಯಾರೂ ಕಾಣಿಸಲಿಲ್ಲ. ಆಗ ಆ ರಾಜಮಾರ್ಗ ಸಂಪೂರ್ಣ ಜನ ವಿಹೀನವಾಗಿತ್ತು ಕೂಡಲೆ ಆತ ಆ ಎಚ್ಚರದಪ್ಪಿ ಬಿದ್ದಿರುವ ಸೇವಕನ ಬಳಿಗೆ ಹೋಗಿ ಆತನ ದೇಹವನ್ನು ಪರೀಕ್ಷಿಸಿ ನೋಡಿದ. ಬಳಿಕ ಆತನನ್ನು ಹೆಗಲಮೇಲೆ ಹೊತ್ತುಕೊಂಡು, ತನ್ನ ಮನೆಯೊಳಗೆ ನಡೆದ; ಹಾಗು ತಲೆಬಾಗಿಲವನ್ನಿಕ್ಕಿ ಅವನನ್ನು ನಡುಮನೆಯೊಳಗಿನ ಮಂಚದ ಮೇಲೊಯ್ದು ಮಲಗಿಸಿದ.

ರಾಬರ್ಟ ಬ್ಲೇಕ ನಡುಮನೆಯ ಬಾಗಿಲವನ್ನೂ ಇಕ್ಕಿಕೊಂಡು ವಿದ್ಯುದ್ದೀಪವನ್ನು ಹಚ್ಚಿದ. ಆ ದೀಪದ ಬೆಳಕಿನಲ್ಲಿ ತನ್ನ ಶಾಲು ರಕ್ತದಿಂದ ಮುಳುಗಿದೆಯೆಂಬದು ಅವನಿಗೆ ಕಾಣಿಸಿತು. ಸ್ಮಿತ್ಥನನ್ನು ಎಬ್ಬಿಸಲಿಕ್ಕೆಂದು ಆತ ವಿದ್ಯುತ್ ಗಂಟೆಯ ಸಮೀಪದ ಕಿಲದ ಮೇಲೆ ಕೈಯಿಟ್ಟ ತದನಂತರ ಒಂದು ಗ್ಲಾಸಿನಲ್ಲಿ ವ್ಹಿಸ್ಕಿಯನ್ನು ಸುರುವಿಕೊಂಡು ಬಂದು, ಆ ಚೇತನಾವಿಹೀನನಾದ ಹೇನರಿಯ ಬಾಯಲ್ಲಿ ಅದರ ಕೆಲ ಹನಿಗಳನ್ನು ಹಾಕಿದ.

ಕೆಲ ಹೊತ್ತಿನಲ್ಲೇ ಹೆನರಿಗೆ ಚೇತನೆಯುಂಟಾಗಲು, ಆತ ವ್ಯಾಕುಲ ಭಾವದಿಂದ ಬ್ಲೇಕನ ಮುಖದ ಕಡೆಗೆ ನೋಡುತ್ತ ಗದ್ಗದ ಕಂಠದಿಂದ:— ರಾಬರ್ಟ ಬ್ಲೇಕರೆಂದರೆ ತಾವೇ ಏನು? ಎಂದು ಪ್ರಶ್ನೆ ಮಾಡಿದ.

'ಅಹುದು, ನಾನೇ ಆ ಪ್ರಾಣಿ. ನೀನು ಕ್ಯಾಪ್ಟನ್ ರೆನ್‌ಹ್ಯಾಮರ ಆಳಲ್ಲವೇನು? ಇಷ್ಟು ರಾತ್ರಿಯಲ್ಲಿ ನನ್ನ ಬಳಿಗೆ ಬಂದ ಕಾರಣವೇನು?'

'ನಮ್ಮ ಒಡೆಯರ ಅಪ್ಪಣೆಯ ಮೇರೆಗೆ ತಮ್ಮನ್ನು ಕಾಣಲಿಕ್ಕೆಂದು ಬಂದೆ. ಆ ಕೆಲಸ ಬಹು ಅವಸರದ್ದು...........'

ಮುಂದೆ ಆ ಬಡವನ ಬಾಯಿಂದ ಶಬ್ದಗಳೇ ಹೊರಡಲಿಲ್ಲ ಮೂರ್ಛೆ ಆತನನ್ನು ಮತ್ತೆ ಆವರಿಸಿತು. ಬ್ಲೇಕ ಆತನ ಶುಶ್ರೂಷೆಯಲ್ಲಿ ತೊಡಗಿದ. ಇಷ್ಟರಲ್ಲಿ ಸ್ಮಿತ್ಥನೂ ನಡುಮನೆಯ ಬಾಗಿಲ ತೆರೆದು ಅಲ್ಲಿಗೆ ಬಂದೇ ಬಿಟ್ಟ. ಸ್ಮಿತ್ಥ ಬ್ಲೇಕನನ್ನು ಕೇಳುವ ಮೊದಲೇ ಆತ:-ಸ್ಮಿತ್ಥಾ, ಡಾಕ್ಟರ ಎಲ್ಬಿನ್ನನಿಗೆ ಬಾ, ಎಂದು ಟೆಲಿಫೋನಿನಲ್ಲಿ ಹೇಳು; ಬಳಿಕ ಟಿಪುನಾಯಿಯೊಡನೆ ಓಣಿಯೊಳಗೆ ಹೋಗಿ, ಯಾವ ನೀಚ ಈ ಬಡವನನ್ನು ಆಹತಗೊಳಿಸಿ ಓಡುತ್ತಿರುತ್ತಾನೆಂಬದನ್ನು ಪತ್ತೆ ಹಚ್ಚು. ಟಿಪುವಿಗೆ ಆತನ ಸಂಧಾನ ಹತ್ತುವದೋ-ಇಲ್ಲವೋ ಎಂಬದನ್ನು ನೋಡು.

ಕೂಡಲೆ ಸ್ಮಿತ್ಥ ಅಲ್ಲಿಂದ ಹೊರಬಿದ್ದು, ಟೆಲಿಫೋನಿನ ಬಳಿಗೆ ಹೋಗಿ ಡಾಕ್ಟರ ಎಲ್ಬಿನ್ನನಿಗೆ ಒಮ್ಮೆಲೆ ಹೊರಟು ಬರಲಿಕ್ಕೆ ತಿಳಿಸಿ, ಟಿಪುನಾಯಿಯೊಡನೆ ಮನೆಯಿಂದ ಹೊರಬಿದ್ದ. ಬ್ಲೇಕನ ಮನೆಯ ಎದುರಿಗೇ ವಿದ್ಯುದ್ದೀಪಗಳಿಂದ ಬೆಳಗುತ್ತಿದ್ದ ಬಹು ದೊಡ್ಡದಾದ ರಾಜಮಾರ್ಗ. ಸ್ಮಿತ್ಥನ ಆಜ್ಞೆಯ ಮೇರೆಗೆ ಆ ಟಿಪುನಾಯಿಯು ಹೆನರಿಯನ್ನು ಕೇಡಿಗೇಡುಮಾಡಿದವನ ವಾಸನೆ ಹಿಡಿದು, ಪಶ್ಚಿಮ ದಿಕ್ಕಿನ ಕಡೆಗೆ ಭರದಿಂದ ನಡೆಯಿತು; ಆದರೆ ತುಸ ದೂರ ಹೋದ ಬಳಿಕ ಅಲ್ಲಿಯ ಪಕಲೊಡೆದ ದಾರಿಯಲ್ಲಿ ಆ ನಾಯಿ ಉಪಾಯಗಾಣದಾಯಿತು. ಯಾವ ವಾಸನೆಯನ್ನು ಹಿಡಿದು ಅದು ಅಲ್ಲಿಯ ವರೆಗೆ ಹೋಗಿತ್ತೋ, ಮುಂದೆ ಆ ವಾಸನೆಯ ಸುಳುವು ಅದಕ್ಕೆ ಯಾವ ಕಡೆಗೂ ಹತ್ತದಾಯಿತು.

ಆದರೆ ಸ್ಮಿತ್ಥ ಅಷ್ಟಕ್ಕೇ ಹತಾಶನಾಗಲಿಲ್ಲ. ಇಷ್ಟೇ ಅಲ್ಲ, ಆತನ ಕುತೂಹಲ ಹೆಚ್ಚಿತು ಯಾಕಂದರೆ ಕೆಲ ದಿನಗಳ ಹಿಂದೆ ಬ್ಲೇಕನ ಕೊಲೆಗೆ ಪ್ರವೃತ್ತನಾದ ಡಚ್ಚನನ್ನು ಬ್ಲೇಕನು ಏನೂ ಶಿಕ್ಷಿಸದೆ ಬಿಟ್ಟುಬಿಡಲು ಆತ ಓಡುತ್ತೋಡುತ್ತ ಬಂದಿದ್ದ ಸ್ಥಳವೂ, ನಾಯಿಯು ಈಗ ಬಂದ ಸ್ಥಳವೂ ಒಂದೇ ಆಗಿದ್ದವು. ಅಂದಿನ ಆ ಕಳ್ಳ ಅಲ್ಲಿಯೇ ಒಳ್ಳೇ ಕೌಶಲ್ಯದಿಂದ ಅಂತರ್ಧಾನನಾದ್ದರಿಂದ ಸ್ಮಿತ್ಥನಿಗೆ ಟಿಪುವಿನ ಸಹಾಯದಿಂದಲೂ ಅವನ ವಾಸ್ತವ್ಯಸ್ಥಳದ ಸುಳಿವು ಸಿಕ್ಕಲಿಲ್ಲ. ಇಂದಾದರೂ ತಿಳಿಯಲಾರದೆ ಹಾಗ್ಯ

ಆ ನೀಚನನ್ನನುಸರಿಸಲಾರದೆ, ಸ್ಮಿತ್ಥನು ಟಿಪುವಿನೊಡನೆ ಮನೆಗೆ ಹಿಂತಿರು ಗಿದನು.

ಆತ ಮನೆಗೆ ಬಂದಾಗ ಹೆನರಿಯು ಗಾಯವಾದ ತಲೆಗೆ ಪಟ್ಟಿ ಕಟ್ಟಲ್ಪಟ್ಟಿದ್ದು, ಒಬ್ಬ ಶುಶ್ರೂಷೆಗಿತ್ತಿ (ನರಸೂಬಾಯಿ) ಆತನ ಪರಿಚರ್ಯದ ಭಾರ ವಹಿಸಿದ್ದಳು. ಬ್ಲೇಕನೇ ಆ ನಾರಿಯನ್ನು ಹೆನರಿಯ ಶುಶ್ರೂಷೆಗಾಗಿ ಕರೆಸಿಕೊಂಡಿದ್ದ. ಹೆನರಿಗಾದ ಆಘಾತ ದೊಡ್ಡದಾಗಿದ್ದರೂ, ಪ್ರಾಣಾಂತಿಕವಲ್ಲವೆಂಬದನ್ನು ನರಸೂಬಾಯಿಯಿಂದ ಸ್ಮಿತ್ಥ ಕೇಳಿಕೊಂಡ. ಸ್ಮಿತ್ಥ ಹಿಂದಿರುಗಿ ಬಂದಾಗ ಬ್ಲೇಕ ಮನೆಯಲ್ಲಿರಲಿಲ್ಲ. ಯಾವ ಕೆಲಸಕ್ಕಾಗಿ ಹೀಗೆ ಆಕಸ್ಮಿಕ ಹೋಗಿರುವನೆಂಬದನ್ನು ಊಹಿಸಲಾರದ ಆತ ಬ್ಲೇಕ ಮರಳಿ ಬರುವದನ್ನೇ ನಿರೀಕ್ಷಿಸುತ್ತ, ಹೆನರಿಯ ಹಾಸಿಗೆಯ ಬಳಿಯಲ್ಲಿ ಕುಳಿತುಕೊಂಡ. ರಾಬರ್ಟ ಬ್ಲೇಕ ಮುಂದೆರಡು ತಾಸಿಗೆ ಮನೆಗೆ ಹಿಂದಿರುಗಿದ. ಆಗ ಆತನ ಮುಖ ಅಸ್ವಾಭಾವಿಕವಾದ ಗಾಂಭೀರ್ಯ ಧರಿಸಿತ್ತು. ಅದರಿಂದ ಕೆಲಸವೇನೋ ಖಂಡಿತವಾಗಿಯೂ ಕಠಿಣವಾದದ್ದೆಂದು ಸ್ಮಿತ್ಥ ಊಹಿಸಿಕೊಂಡ. ಸಾಧಾರಣ ಪ್ರಕರಣವಾಗಿದ್ದರೆ, ಬ್ಲೇಕ ಎಂದಿಗೂ ಅಷ್ಟೊಂದು ಗಾಂಭೀರ್ಯ ಧರಿಸುತ್ತಿರಲಿಲ್ಲ. ಬಳಿಕ ಬ್ಲೇಕ ಸ್ಮಿತ್ಥನನ್ನು ಕುರಿತು:-ಸ್ಮಿತ್ಥಾ, ಓಣಿಯೊಳಗಿನ ನಿನ್ನ ಓಡಾಟವಂತೂ ನಿಷ್ಪ್ರಯೋಜಕವಾಯಿತಷ್ಟೇ? ಎನಲು,

'ಒಡೆಯರೇ, ಈ ಸಾರೆಯ ಪ್ರಯತ್ನವಂತೂ ನಿಷ್ಫಲವಾದಂತಾಗಿದೆ. ನಾವು ಕೋಲಾನ ಸ್ಟ್ರೀಟಿನೊಳಗಿನ ಆ ಪಾರ್ಕ ಲೇನಿನವರೆಗೆ ಹೋದೆವು. ಹಿಂದಕ್ಕೆ ನಿಮ್ಮನ್ನು ಕೊಲ್ಲ ಬಂದ ಡಚ್ಚ ಎಲ್ಲಿ ಮಾಯವಾಗಿದ್ದನೋ ಕೇವಲ ಅದೇ ಸ್ಥಳದಿಂದಲೇ ನಾನು ನಮ್ಮ ಟಿಪುವಿನೊಡನೆ ಹಿಂದಿರುಗಬೇಕಾಯಿತು.'

'ಆರ್ಟನ್ನನ ಮನೆಯ ಬದಿಗೆ ಯಾವ ಹಾಳು ಮನೆಯಿರುವದೋ ಅಲ್ಲಿಂದಲೇ ನೀವು ಹಿಂದಿರುಗಿದಿರಲ್ಲವೇ?

'ಅಹುದು; ಅಲ್ಲಿಂದಲೇ ಹಿಂದಿರುಗಿದ್ದು. ತಮ್ಮನ್ನು ಕಾಣ ಬಂದು, ಯಾರಿಂದಲೋ ಆಹತನಾದ ಈ ಆಸಾಮಿ ಯಾರು? ಯಾಕೆ ಬಂದವನ್ನು ಎಂಬದನ್ನು ಬಲ್ಲಿರೋ?' ಎಂದು ಸ್ಮಿತ್ಥ ಕೇಳಲು,

'ಈತ ಕ್ಯಾಪ್ಟನ್ ರೆನ್‌ಹ್ಯಾಮನ ಮನೆಯ ಅಡ್ಲಿ ಹೆನರಿ.'

'ಆದಾವ ಕೆಲಸಕ್ಕೆಂದು ಈ ಹೆನರಿ ಈ ಅಪರಾತ್ರಿಯಲ್ಲಿ ನಿಮ್ಮ ಬಳಿಗೆ ಬಂದಿದ್ದ?'

'ಹೆನರಿ ಆಕಸ್ಮಿಕವಾಗಿ ಮೂರ್ಛೆ ತಾಳಿದ್ದರಿಂದ ಆತ ನನಗೇನನ್ನೂ ತಿಳಿಸದಾದ. ಆತ ರೆನ್‌ಹ್ಯಾಮನ ಆದೇಶದಿಂದಲೇ ಇಲ್ಲಿಗೆ ಬಂದಿರುವನೆಂಬ ದನ್ನು ತಿಳಿದ ನಾನು ರೆನ್‌ಹ್ಯಾಮನ ಮನೆಗೆ ಹೋಗಿದ್ದೆ. ಆತ ಇಂದೇ ಮಧ್ಯ ರಾತ್ರಿಯಲ್ಲಿ ವ್ಹಿಕ್ಟೋರಿಯಾ ಸ್ಟೇಶನ್ನಿಗೆ ಹೋದನೆಂಬದು ಅಲ್ಲಿ ತಿಳಿಯಿತು. ಯಾಕೆ ಹಾಗು ಎಲ್ಲಿಗೆ ಹೋದನೆಂಬದು ತಿಳಿಯದ್ದರಿಂದ, ಅಲ್ಲಿಂದ ಲಾರ್ಡ ಬೋರ್ಲರ ಮನೆಗೆ ಹೋದೆ. ಯಾವದೋ ಒಂದು ಗುಪ್ತ ಕೆಲಸಕ್ಕಾಗಿ ಆತ ಕೇನಿಯಾಕ್ಕೆ ಹೋದನೆಂಬದು ಅಲ್ಲಿ ತಿಳಿಯಿತು.'

ಅದನ್ನು ಕೇಳಿ ಸ್ಮಿತ್ಥ ಕೆಲ ಕ್ಷಣಗಳ ವರೆಗೆ ಆಲೋಚಿಸಿ, ನಂತರ: ಸಂಗತಿಯೇನೆಂಬದನ್ನು ಕೆಲ ಮಟ್ಟಿಗೆ ಊಹಿಸಬಹುದಾಗಿದೆ. ರೆನ್‌ಹ್ಯಾಮ ಹೆನರಿಯ ಮುಖಾಂತರ ಯಾವದೋ ಒಂದು ಜರೂರಿಯ ಗುಪ್ತ ಸಂಗತಿ ಹೇಳಿ ಕಳಿಸಿರಬೇಕು ಆ ಸಂಗತಿ ನಿಮಗೆ ತಿಳಿದರೆ ಯಾರ ಸ್ವಾರ್ಥದ ಹಾನಿ ಯಾಗುವದೋ, ಅವರಲ್ಲಿಯವನೇ ಹೆನರಿಯನ್ನು ಕೊಲ್ಲಲಿಕ್ಕೆ ಪ್ರಯತ್ನಿಸಿರು ತ್ತಾನೆ. ಆ ವೈರಿ ಹೆನರಿಯನ್ನು ನಮ್ಮ ಮನೆಯವರೆಗೂ ಹಿಂಬಾಲಿಸಿ ಬಂದಿರ ಬೇಕು.

'ಸ್ಮಿತ್ಥಾ, ನಿನ್ನ ಅನುಮಾನ ಬಹುಮಟ್ಟಿಗೆ ನಿಜವಾಗಿರಲಿಕ್ಕೆಬೇಕು. ರೆನ್‌ಹ್ಯಾಮ ಲಂಡನ್ನಿಗೆ ತಿರುಗಿ ಬರುವ ವರೆಗೆ ನನ್ನ ಮನಸ್ಸು ಸ್ಥಿರವಾಗ ಲಾರದು. ಇಷ್ಟರಲ್ಲಿಯೇ ನಾವು ಯಾವುದೊಂದು ಭಯಂಕರ ರಹಸ್ಯವನ್ನು ಹೊರಗೆಡವಬಹುದಾಗಿದೆ. ನಾಳೆಗೆ ನಮ್ಮ ಕೆಲಸ ಬಹಳವಾಗಿದೆ. ಇನ್ನು ರಾತ್ರಿಯೂ ಹೆಚ್ಚಾಗಿಲ್ಲ; ಕಾರಣ ಮಲಗು ಹೋಗು.'

ಸ್ಮಿತ್ಥನನ್ನು ಮಲಗಲಿಕ್ಕೆ ಕಳಿಸಿ ಕೊಟ್ಟು, ಬ್ಲೇಕ ತಾನೂ ತನ್ನ ಮಲ ಗುವ ಕೋಣೆಯನ್ನು ಪ್ರವೇಶಿಸಿದ. ಉಳಿದಿದ್ದ ಅಲ್ಪ ರಾತ್ರಿ ಒಂದೇ ನಿದ್ದೆ ಯಲ್ಲಿ ತೀರಿಹೋಯಿತು. ಮರುದಿನ ಬೆಳಗಿನ ಎಂಟಕ್ಕೆ ಚಹಾದ ಟೇಬಲ್ಲಿನ ಬಳಿಯಲ್ಲಿ ಸ್ಮಿತ್ಥನಿಗೆ ಬ್ಲೇಕನ ಭೇಟಿಯಾಯಿತು. ಹೆನರಿಗೆ ಆದುವರೆಗೂ ಮೂರ್ಛೆ ತಿಳಿದಿರಲಿಲ್ಲ. ಆತ ಒಂದೇಸವನೆ ಬಡಬಡಿಸುತ್ತಿದ್ದ. ಕ್ಯಾಪ್ಟನ್ ರೇನ್‌ಹ್ಯಾಮ ಬ್ರಿಟಿಶ ಚಾನಲ್ಲದ ಬಂದರದಿಂದ ಬ್ಲೇಕನಿಗೆ ಕೊಟ್ಟ ತಂತಿ ಈಗ ತಾನೆ ಆತನ ಹಸ್ತಗತವಾಯಿತು. ಆ ತಂತಿಯ ಸಂಗತಿ ಓದಿದ ಬ್ಲೇಕ ನಿಗೆ, ತನಗೆ ಗೊತ್ತಿಲ್ಲದ ಗುಪ್ತ ರಹಸ್ಯದ ಕೆಲವಂಶ ಭಾಸವಾದಂತಾಯಿತು; ಆದರೆ ಆತ ಆ ಗುಪ್ತ ರಹಸ್ಯದ ಮೇಲೆ ತನ್ನ ಬುದ್ಧಿಯ ಬೆಳಕನ್ನು ಎಷ್ಟೆಷ್ಟು

ಹೆಚ್ಚು ಕೆಡವಹತ್ತಿದನೋ, ಆ ರಹಸ್ಯ ಅಷ್ಟಷ್ಟು ಅಂಧಕಾರಮಯವಾಗಿ ತೋರಲಾರಂಭಿಸಿತು! ಕಾರಣವೇನಂದರೆ, ಆತ ಇದು ವರೆಗೆ ಯಾವ ದುರ್ವೃತ್ತರ ಟೋಳಿಯ ಜಾಲವನ್ನು ಹರಿದು, ಅವರ ದುಷ್ಟ ಹೇತುಗಳನ್ನು ಸಿದ್ಧಿಸಗೊಡಬಾರದೆಂದು ಸಂಕಲ್ಪಿಸಿದ್ದನೋ, ರೆನ್‌ಹ್ಯಾಮನ ಪ್ರಣಯಿನಿಯಾದ ಭಾಯೋಲೆ ಆ ದುರ್ವೃತ್ತರ ಸಹಕಾರಿಣಿಯೇ ಎಂದು ಅವನು ಇಂದು ಅನುಮಾನಿಸಿದನು.

ಬ್ಲೇಕ ಆ ತಂತಿಯ ಸಮಾಚಾರ ೨-೩ ಸಾರೆ ಓದಿ, ಅದನ್ನು ಮಡಚಿ ಟೇಬಲ್ಲಿನ ಮೇಲಿಡುತ್ತಿದ್ದ. ಈ ಕಾಲಕ್ಕೆ ಡ್ಯೂಕ ವಿಲ್ಯಮ್ಸ ಆಕಸ್ಮಿಕವಾಗಿ ಅಲ್ಲಿಗೆ ಬಂದ. ಆತನ ಕೈಯಲ್ಲೂ ಒಂದು ತಂತಿಯ ಪತ್ರವಿತ್ತು. ಆತ ಅದನ್ನು ಬ್ಲೇಕನ ಕೈಗಿತ್ತು:-ನಿನ್ನೆ ರಾತ್ರಿಯಲ್ಲಿ ನೀವು ನಮ್ಮಲ್ಲಿಗೆ ಬಂದು ನಮಗೆ ಭೇಟಿಕೊಟ್ಟಾಗ ಇಂದು ಬೆಳಿಗ್ಗೆ ಇಷ್ಟು ಅವಸರದಿಂದ ನಿಮ್ಮ ಪ್ರತಿ ಭೇಟಿಗೆ ಬರಬೇಕಾದೀತೆಂಬ ಕಲ್ಪನೆ ಕೂಡ ನನಗೆ ಬಂದಿರಲಿಲ್ಲ, ಎಂದಂದ.

ವಿಲ್ಯಮ್ಸ ಕೊಟ್ಟ ತಂತಿ ಬ್ಲೇಕ ಓದಿಕೊಂಡ ನಂತರ, ರೆನ್‌ಹ್ಯಾಮನಿಂದ ತನ್ನ ಹೆಸರಿಗೆ ಬಂದಿದ್ದ ತಂತಿ ಆತನ ಕೈಗೆ ಕೊಟ್ಟ. ಅದು ಅಸ್ವಾಭಾವಿಕ ದೀರ್ಘವಾಗಿತ್ತು. ಅದನ್ನು ಸಂಪೂರ್ಣ ಓದಿಕೊಂಡ ಬಳಿಕ ಡ್ಯೂಕ:- ತನ್ನ ಪ್ರಣಯಿನಿ ಯಾವದೋ ಒಂದು ಗಂಡಾಂತರಕ್ಕೆ ಸಿಕ್ಕಿರುವಳೆಂದು ಕ್ಯಾಪ್ಟನ್ನನಿಗೆ ಸಂದೇಹವಾಗಿದೆ. ನಾನು ಭಾಯೋಲೆಯನ್ನು ಕಾಣುವದಕ್ಕೆಂದು ಅವಳ ಮನೆಗೆ ನಡೆದಿದ್ದೆ; ಆದರೆ ಎಲ್ಲಕ್ಕೂ ಮೊದಲು ನಿಮ್ಮನ್ನು ಕಂಡೇ ಅಲ್ಲಿಗೆ ಹೋಗಬೇಕೆಂದು ನಿರ್ಣಯಿಸಿಕೊಂಡು, ಮೊದಲು ಇಲ್ಲಿಗೇ ಬಂದೆ.

'ಭಾಯೋಲೆ ಕೆಲ ದಿನಗಳಿಂದ ಯಾವನೊಬ್ಬ ನೀಚನ ಸಹಕಾರಿಣಿಯಾಗಿರುತ್ತಾಳೋ-ಇಲ್ಲವೋ ಎಂಬದನ್ನು ಹೇಳಬಲ್ಲಿರಾ?'

ಡ್ಯೂಕ ಕ್ಷಣ ಕಾಲವೇ ಆಲೋಚಿಸಿ, ಸಂದಿಗ್ಧ ಮನಸ್ಸಿನಿಂದ:-ಅಮೇರಿಕೆಯ ನಿವಾಸಿಯಾದ ಉಯಿನ್‌ಕಾರನೆಂಬವನ ಕೂಡ ಆಕೆಯ ಸ್ನೇಹ ಕೂಡಿದ್ದನ್ನು ನಾನು ಕಂಡಿದ್ದೆ. ಇಬ್ಬರೂ ಒತ್ತಟ್ಟಿಗೆ ಕುಳಿತು ಹೆಡ್ಡವನ್ನಾಡುತ್ತಿದ್ದರು. ಉಯಿನ್‌ಕಾರ ಮಹಾ ನೀಚನೆಂಬದು ನನ್ನ ಗ್ರಹಿಕೆ; ಆದರೆ ಇದು ವರೆಗೂ ಆತನ ನೀಚತನದ ಯಾವ ಪ್ರಮಾಣವೂ ನನಗೆ ಗೋಚರವಾಗಿಲ್ಲ; ಆದ್ದರಿಂದ ನನ್ನ ಗ್ರಹಿಕೆ ನಿಜವೆಂದು ತಿಳಿಯುವಂತಿಲ್ಲ. ಇನ್ನೊಬ್ಬನ ಕೂಡವೂ

ಆಕೆಯ ಸ್ನೇಹ ಹೆಚ್ಚಾಗಿರುತ್ತದೆ. ನಾನು ಯಾವ ಅಮೇರಿಕೆಯ ನವಕೋಟಿ ನಾರಾಯಣ ಹ್ಯಾಮನ್ ಆರ್ಟನ್ನನ ಬಗ್ಗೆ ನಿಮ್ಮೆದುರಿಗೆ ಆಗಾಗ್ಗೆ ಹೇಳುತ್ತಿರುವೆನೋ ಅವನೇ ಭಾಯೋಲೆಯ ಆ ಎರಡನೇ ಸ್ನೇಹಿತ.

ಬ್ಲೇಕ ಆಕಸ್ಮಿಕವಾಗಿ ಒಳ್ಳೇ ಗಾಂಭೀರ್ಯ ತಾಳಿ:-ಡ್ಯೂಕರೇ, ನನ್ನ ಅನುಮಾನ ನಿಮ್ಮೆದುರಿಗೆ ಬಚ್ಚಿಡಲಾರೆ. ಭಾಯೋಲೆ ತಿಳಿದೇ ಆಗಲಿ, ತಿಳಿಯದೇ ಆಗಲಿ ಹಲಕೆಲವು ದುಶ್ಚರಿತ್ರರ ಹಾಗು ಯಾವ ಬಗೆಯ ಪಾಪಾಚರಣೆಗೂ ಹೇಸದವರ ಕೈಸೇರಿರುವಳೆಂದು ನನಗನಿಸುತ್ತದೆ. ಅವರು ಅವಳನ್ನು ತಮ್ಮ ಸಂಪೂರ್ಣ ಹಸ್ತಕಳನ್ನಾಗಿ ಮಾಡಿಕೊಂಡಿರುತ್ತಾರೆ. ನೀವು ಕ್ಯಾಪ್ಟನ್ ರೆನ್‌ಹ್ಯಾಮನ ಪರಮ ಸ್ನೇಹಿತರು; ಆದುದರಿಂದ ರೆನ್‌ಹ್ಯಾಮನ ಪ್ರಣಯಿನಿಯಾದ ಭಾಯೋಲೆಯನ್ನು ಆ ನರಪಿಶಾಚಿಗಳ ಜಾಲದೊಳಗಿಂದ ಬಿಡಿಸಿಕೊಳ್ಳುವದು ನಿಮ್ಮ ಆದ್ಯ ಕರ್ತವ್ಯವಾಗಿರುತ್ತದೆ.

'ಈ ಕೆಲಸ ಅಷ್ಟೊಂದು ಕಠಿಣವಾದುದಲ್ಲ. ಲೇಡೀ ಎಲೀಸೆ ಇಂದು ಹತ್ತುಗಂಟೆಗೆ ವೇಲ್ಸದ ಪರ್ವತಾವಳಿಗೆ ವನಭೋಜನಕ್ಕೆಂದು ಹೋಗತಕ್ಕವಳಿರುತ್ತಾಳೆ. ಅವಳ ಕಾರು ನಮಗಾಗಿ ಇಲ್ಲಿಗೇ ಬರುವದು. ಇಲ್ಲಿಂದ ನಾವು ಭಾಯೋಲೆಯನ್ನು ಕರೆತರಲಿಕ್ಕೆ ಅವಳಲ್ಲಿಗೆ ಹೋಗೋಣ; ಹಾಗು ಆಕೆಗೆ ಬೋಧ ಮಾಡೋಣ.'

'ಬಹು ಯೋಗ್ಯವಾಗುವದು; ಆದರೆ ಭಾಯೋಲೆಗಾಗಲಿ ಎಲೀಸೆಗಾಗಲಿ ನನ್ನ ಅನುಮಾನ ತಿಳಿಯಕೂಡದು ಅದನ್ನು ತಿಳಿದರೆ ಅವರಿಬ್ಬರೂ ಅಂಜಿಕೊಂಡಾರು. ಇಬ್ಬರಿಗೂ ನಮ್ಮ ಇಂಗಿತ ತಿಳಿಯದಹಾಗೆ ಉಪದೇಶದ ಬಲದಿಂದಲೇ ನಮ್ಮ ಕಾರ್ಯ ಸಾಧಿಸಿಕೊಳ್ಳಬೇಕಾಗಿದೆ.'

'ಈ ಬಗ್ಗೆ ನೀವು ನಿಶ್ಚಿಂತರಾಗಿರ್ರಿ' ಡ್ಯೂಕ ಹೀಗೆಂದು ಹೇಳಿ, ಬ್ಲೇಕನಿಗೆ ಮತ್ತೆ ಏನನ್ನೋ ತಿಳಿಸತಕ್ಕವನಿದ್ದ; ಅಷ್ಟರಲ್ಲಿ ಲೇಡೀ ಎಲೀಸೆ ವ್ಯಾಕುಲಚಿತ್ತದಿಂದ ಅಲ್ಲಿಗೆ ಬಂದು, ಉತ್ಕಂಠಿತ ದನಿಯಿಂದ:-ಡ್ಯೂಕರೇ, ಭಾಯೋಲೆಯಂತೂ ತಮ್ಮ ಮನೆಯಲ್ಲಿಲ್ಲ. ನಿನ್ನೆ ರಾತ್ರಿಯಲ್ಲಿ ಅವಳು ತನ್ನ ಮನೆಗೆ ಬಂದಿಲ್ಲವೆಂದೇ ತಿಳಿಯುತ್ತದೆ.'

ಬ್ಲೇಕ ತನ್ನ ಮನಸ್ಸಿನ ದುಗುಡು ಹತ್ತೊತ್ತಿ:-ತಾನು ಮನೆಗೆ ಬಾರದಿರುವ ಕಾರಣವನ್ನು ಆಕೆ ಪತ್ರ ಬರೆದು ತಿಳಿಸಿಲ್ಲವೆ?

ಭಾಯೋಲೆ ತನ್ನ ಪಹರೆಯವಳ ಆಜ್ಞೆಯ ಮೇರೆಗೆ ತನ್ನ ದಾಸಿಗೆ ಯಾವ ಪತ್ರ ಬರೆದಿದ್ದಳೋ, ಆ ಪತ್ರವನ್ನು ಲೇಡೀ ಎಲೀಸೆ ಬ್ಲೇಕನ ಕೈಗಿತ್ತಳು. ಬ್ಲೇಕ ಅದನ್ನೋದಿಕೊಂಡ ಬಳಿಕ ಎಲೀಸೆಯನ್ನು ಕುರಿತು:-'ನಿನ್ನೆ ರಾತ್ರಿ ನಿಮ್ಮ ಮನೆಯಿಂದ ಹೊರಡುವ ಮೊದಲು ಭಾಯೋಲೆ ತನ್ನ ಈ ಸ್ಥಾನಾಂತರದ ಸಂಗತಿ ನಿಮಗೆ ತಿಳಿಸಿರಲಿಲ್ಲವೆ?'

'ಇಲ್ಲ; ಎಲ್ಲಿಗೂ ಹೋಗುವ ಬೇತು ಆಕೆಯದಿದ್ದಿಲ್ಲ. ನಾವು ಇಂದು ಭೋಜನಕ್ಕೆ ಹೊರಡುವ ವಿಷಯ ಆಕೆಗೆ ಗೊತ್ತಿತ್ತು. ಅದಕ್ಕಾಗಿ ಆಕೆ ತನ್ನ ಬಟ್ಟೆ-ಬರೆಗಳನ್ನೆಲ್ಲ ತಕ್ಕೊಂಡು ಬೆಳಿಗ್ಗೆ ಎದ್ದಕೂಡಲೆ ನಮ್ಮಲ್ಲಿಗೆ ಹೊರಟು ಬರಬೇಕೆಂಬ ಬಗ್ಗೆ ಮಾತು-ಕಥೆಗಳೂ ಆಗಿದ್ದವು. ಬಟ್ಟೆ-ಬರೆಗಳನ್ನು ತರುವದಕ್ಕೆಂದೇ ಅವಳು ನಿನ್ನೆ ರಾತ್ರಿ ತನ್ನ ಮನೆಗೆ ಹೋದದ್ದು; ಇಲ್ಲದಿದ್ದರೆ ಹೋಗುವ ಅವಶ್ಯಕತೆಯೇ ಇರಲಿಲ್ಲ.'

'ನಿಮ್ಮ ಬಳಿಯಲ್ಲಿ ಆಕೆಯ ಕೈಬರೆಹದ ಯಾವದೊಂದು ಚೀಟಿ-ಚಪಾಟೆಗಳಿರುವವೇ?'

ಆಗ ಲೇಡೀ ಎಲೀಸೆಯ ಬಳಿಯಲ್ಲಿ ಆಕೆಯ ಕೈಬರೆಹದ ಯಾವ ಕಾಗದವೂ ಇರಲಿಲ್ಲ; ಆದರೆ ಡ್ಯೂಕನ ಪಾಕೇಟನ್ನು ಶೋಧಿಸಲು, ಅದರಲ್ಲಿ ಭಾಯೋಲೆಯ ಕೈ ಬರೆಹದಿಂದ ಹಾಡು ಬರೆದ ಕಾಗದ ಒಂದಿತ್ತು. ಡ್ಯೂಕನ ಒತ್ತಾಯದಿಂದಲೇ ಅವಳು ಆ ಹಾಡು ಆವನಿಗೆ ಬರೆಕೊಟ್ಟಿದ್ದಳು.

ಬ್ಲೇಕ ಆ ಕಾಗದ ತಕ್ಕೊಂಡು ಲೇಡೀ ಎಲೀಸೆ ಈ ಮೊದಲು ಕೊಟ್ಟಿದ್ದ ಪತ್ರದ ಅಕ್ಷರಗಳೊಡನೆ ಹೋಲಿಸಿ ನೋಡತೊಡಗಿದ. ಕೆಲ ಕ್ಷಣಗಳ ಪರೀಕ್ಷಣದ ನಂತರ ಆತ ಗಂಭೀರ ವಾಣಿಯಿಂದ:-ಲೇಡಿಯವರೇ, ಈ ಪತ್ರ ನಿಮ್ಮ ಪ್ರಿಯ ಸಖಿಯ ಕೈಬರೆಹದ್ದೇ ಎಂಬದು ನಿಸ್ಸಂಶಯವಾದುದು; ಆದರೆ ನಾನು ಇನ್ನು ನಿಮ್ಮ ಬಳಿಯಲ್ಲಿ ಅದಾವ ವಿಷಯವನ್ನೂ ಬಚ್ಚಿಡಲಾರೆ. ಈಗ ನಿಮ್ಮ ಪ್ರಿಯ ಸಖಿ ಭಯಂಕರ ವಿಪತ್ತಿಗೀಡಾಗಿರುತ್ತಾಳೆ. ಈ ಪತ್ರದೊಳಗಿನ ಭಾಷೆ ಹಾಗು ಅಕ್ಷರಗಳ ಮೇಲಿಂದ ಆಕೆ ಪ್ರಾಣಭಯಕ್ಕಂಜಿ ಇದನ್ನು ಬರೆದಿರುವಂತೆ ಅನುಮಾನವಾಗುತ್ತಿದೆ. ಯಾಕಂದರೆ, ಈ ಪತ್ರ ಬರೆಯುವಾಗ ಅವಳ ಕೈ ಹೆಚ್ಚಾಗಿ ನಡುಗಿದೆ. ಲೇಡಿಯವರೇ, ಅವಳು ಈ ಪತ್ರವನ್ನು ಯಾರಿಗೆಂದು ಬರೆದಿರುತ್ತಾಳೆ?

'ಇದನ್ನು ಅವಳು ತನ್ನ ದಾಸಿಯ ಹೆಸರಿಗೆ ಬರೆದಿರುವಳು. ಒಬ್ಬ ಅಂದಗೇಡಿ ದಿನ ಹೋದ ಕಾಡು ದಾಸಿ ಇದನ್ನು ತಂದಿದ್ದಳಂತೆ.'

'ಇದನ್ನು ತಂದುದಾವಾಗ?'

'ಇಂದು ಬೆಳಿಗ್ಗೆ ಸರಾಸರಿ ಏಳು ಗಂಟೆಗೆ. ಬ್ಲೇಕರೇ, ಭಾಯೋಲೆ ಯಾವ ಬಗೆಯ ವಿಪತ್ತಿಗೀಡಾಗಿರುವಳು? ಅವಳಿಗೆ ಯಾವ ಕೇಡೂ ಉಂಟಾಗಿಲ್ಲವಷ್ಟೇ? ಅವಳ ಉದ್ಧಾರದ ವ್ಯವಸ್ಥೆಯೇನು?'

'ಇದುವರೆಗೂ ಅವಳಿಗಾವ ಅನಿಷ್ಟವೂ ಆಗಿಲ್ಲವೆಂದು ನನ್ನ ಭರವಸೆ. ಅವಳು ತನ್ನ ದಾಸಿಗೆ ಪತ್ರ ಬರೆದು ತನ್ನ ಬಟ್ಟೆ-ಬರೆಗಳನ್ನು ತರಿಸಿಕೊಂಡಿರುವದರಿಂದ, ಇನ್ನೂ ಕೆಲ ದಿನಗಳವರೆಗೆ ಅವಳ ಜೀವಕ್ಕೆ ಭಯವಿಲ್ಲೆಂಬಂತೆ ತೋರುತ್ತಿದೆ; ಆದರೂ ಅವಳು ತಾನಾಗಿ ಹೀಗೆ ಗುಪ್ತಳಾಗಿರುವಳೆಂಬ ಮಾತು ಮಾತ್ರ ನಂಬತಕ್ಕದ್ದಲ್ಲ. ಅದು ಹೇಗೆಯೇ ಇರಲಿ, ಲೇಡಿಯವರೇ, ನಾನು ಕೇಳುವ ಪ್ರಶ್ನೆಗೆ ಸರಿಯಾದ ಉತ್ತರ ಕೊಡುವಿರಾ? ಒಂದಿಷ್ಟೂ ಮರೆಮಾಜಕೂಡದು ಕಂಡಿರಾ. ತಮಗೆ ತಮ್ಮ ಆ ಪ್ರಿಯ ಸಖಿಯ ಭಾವಾಂತರವಾದದ್ದು ಇದುವರೆಗೇನಾದರೂ ಕಂಡು ಬಂದಿತ್ತೇನು?'

'ಅಹುದು; ಕೆಲ ದಿನಗಳಿಂದ ಅವಳ ಭಾವಭಂಗಿಯನ್ನು ಕಂಡು ಅವಳಿಗೆ ಸೌಖ್ಯವಿಲ್ಲೆಂದು ತಿಳಿದಿದ್ದೆ. ಯಾವದೊಂದು ದುಶ್ಚಿಂತೆಯಿಂದ ಅವಳ ಮನಸ್ಸು ಯಾವಾಗಲೂ ಮುಸುಕಿದಂತಾಗಿತ್ತು. ನಡು ನಡುವೆ ಅವಳು ನನಗೆ ಕೇಳುತ್ತಿದ್ದ ಪ್ರಶ್ನೆಗಳನ್ನು ನೆನೆಸಿಕೊಂಡರೆ, ಅವು ಅವಳ ಆಹಾರ ವಿನೋದದವೆಂದು ನನಗನಿಸುತ್ತಿತ್ತು. ಯಾಕಂದರೆ, ಅವಳ ಕೆಲಕೆಲವು ಪ್ರಶ್ನೆಗೆ ಉತ್ತರವನ್ನೀಯುವದೇ ಅಸಂಭವವಾಗಿ ಬಿಡುತ್ತಿತ್ತು. ಅವಳು ಅವುಗಳನ್ನೆಲ್ಲ ಏಕೆ ಕೇಳಿಕೊಳ್ಳುತಿದ್ದಳೆಂಬದು ತಿಳಿಯುಲಶಕ್ಯವಾಗುತ್ತಿತ್ತು.'

'ಆ ಪ್ರಶ್ನೆಗಳಾವವು?' ಎಂದು ಬ್ಲೇಕ ಉತ್ಸಾಹತೆಯಿಂದ ಕೇಳಲು,

'ನನ್ನ ತಂದೆಯು ಹಾಗು ಆತನ ಋಣಾನುಬಂಧಿಕರನೇಕರ ಕಾರ್ಯ-ಕಲಾಪಗಳ ಸಂಬಂಧದ ಯಾವ ಎಷ್ಟೋ ಪ್ರಸಂಗಗಳನ್ನು ನಾವು ಯತ್ನ ಪೂರ್ವಕವಾಗಿ ಒಚ್ಚಿಟ್ಟುಕೊಳ್ಳುತ್ತಿರುವೆವೋ, ಅವುಗಳನ್ನೇ ತಿಳಿಸುವ ಸಲುವಾಗಿ ಆಕೆ ಒತ್ತಾಯಪಡಿಸುತ್ತಿದ್ದಳು.'

'ಕ್ಯಾಪ್ಟನ್ ಉಯಿನ್‌ಕಾರನೆಂಬ ಅಮೇರಿಕನ್ ಸಭ್ಯಗೃಹಸ್ಥನ ಕೂಡ ಆಕೆಯ ಸ್ನೇಹ ಹೆಚ್ಚಾಗಿತ್ತೆಂದು ಕೇಳಿರುವೆನು; ಅದು ನಿಜವೋ?'

'ನಿಜ. ಅವಳ ಅಭಿಪ್ರಾಯವೇ ಬೇರೆಯಾಗಿತ್ತು. ಅದರಿಂದ ನನಗೆ ಕೆಡಕೆನಿಸಲಿಲ್ಲ. ಅವನೊಡನೆ ಹೆಡ್ಡವನ್ನಾಡಿ ಭಾಯೋಲೆ ಎಷ್ಟೋ ಪೌಂಡು ಕಳೆದಿರುತ್ತಾಳೆ.'

'ಹ್ಯಾಮನ್ ಆರ್ಟನ್ನನೂ ಭಾಯೋಲೆಯು ಸ್ನೇಹಿತನೇ?'

'ಅಲ್ಲ; ಭಾಯೋಲೆ ಅವನ ವಿಷಯಕ್ಕೆ ಅಂತರಂಗದಲ್ಲಿ ತಿರಸ್ಕಾರ ತಾಳಿದ್ದಳು. ಒಂದು ದಿನ ನಾನು ಯಾವ ಸಂದರ್ಭದಲ್ಲಿಯೋ ಅವಳೆದುರಿಗೆ ಆ ಆರ್ಟನ್ನನ ಹೆಸರೆತ್ತಲು, ಅವಳು ಒಮ್ಮೆಲೆ ಭಯಕಂಪಿತಳಾದಳು.'

---

## ೧೫ನೇ ತೆರೆ—ಭಯಂಕರ ಅತ್ಯಾಚಾರ

ಭಾಯೋಲೆ ಒಮ್ಮೆಲೆ ಮಾಯವಾಗಲು, ಆಕೆಯ ಆತ್ಮೀಯರಿಗೂ ಸಖಿಯರಿಗೂ ಎಷ್ಟು ಕೆಡಕೆನಿಸಿತೆಂಬದೂ ಅವರು ಯಾವ ಬಗೆಯ ದುಶ್ಚಿಂತೆಗೆ ಒಳಗಾದರೆಂಬದೂ ನಮ್ಮ ವಾಚಕರಿಗೆ ಹೇಳಬೇಕಾಗಿಲ್ಲ; ಆದರೆ ಅನುಮಾನಿಸಲಾರದ ಆ ಅದ್ಭುತ ವ್ಯಾಪಾರದಿಂದ ಅಂದು ಬ್ಲೇಕನಿಗಾದಷ್ಟು ವಿಸ್ಮಯವು ಅವನು ಪತ್ತೇದಾರಿಕೆಯ ಕಸಬು ಕೈಕೊಂಡಾಗಿನಿಂದೆಂದೂ ಆಗಿರಲಿಲ್ಲ. ಅದಲ್ಲದೆ, ಆ ಆಶ್ಚರ್ಯಕರ ಸಂಗತಿಯ ಶೋಧಕ್ಕೆ ತೊಡಗಿದ ಅವನಿಗೆ ಅಂದಿನಿಂದ ಆಗಾಗ್ಗೆ ವಿಪತ್ತುಗಳುಂಟಾಗಹತ್ತಿದವು. ಆಗ ಆತ ಸಾಕಷ್ಟು ಎಚ್ಚರ ಪಡದಿದ್ದರೆ, ಯಾವದೊಂದು ದಿನ ಆಕಸ್ಮಿಕವಾಗಿ ಪ್ರಾಣಕ್ಕೆ ಸಹ ಎರವಾಗುತ್ತಿದ್ದ. ಆ ಇಡಿ ವಾರದಲ್ಲಿ ಆತನ ಮನಸ್ಸಿಗೆ ಎಳ್ಳಷ್ಟೂ ಶಾಂತಿ ದೊರೆಯಲಿಲ್ಲ.

ಮುಂದೆ ಕೆಲ ದಿನಗಳಲ್ಲೇ ಬ್ಲೇಕನಿಗೆ ತಿಳಿದುದೇನಂದರೆ, ಯಾವ ಕೆಲ ಜನ ದುರ್ವೃತ್ತರು ಕಲೆತು ರಾಜಕೀಯ ಗುಪ್ತ ರಹಸ್ಯಗಳನ್ನು ಸಂಗ್ರಹಿಸುತ್ತಿರುವರೋ, ಹ್ಯಾಮನ್ ಆರ್ಟನ್ನನೇ ಅವರುಗಳ ಮುಖ್ಯದಳಪತಿಯೆಂದು; ಆದರೆ ಎಲ್ಲಿಯವರೆಗೆ ಆತನ ವಿರುದ್ಧ ಪ್ರಮಾಣಗಳು ದೊರೆಯುವದಿಲ್ಲವೋ, ಅಲ್ಲಿಯವರೆಗೆ ಆವನನ್ನು ಸೆರೆಹಿಡಿಯುವಂತಿರಲಿಲ್ಲ. ರಾಬರ್ಟ ಬ್ಲೇಕ ಸಾಕಷ್ಟು ಪ್ರಯತ್ನ ಪಟ್ಟರೂ ಯಾರ ಅಪರಾಧದ ಪ್ರಮಾಣವನ್ನೂ ಸಂಗ್ರಹಿಸಲಸಮರ್ಥನಾದ. ಆತನ ಪ್ರಯತ್ನ ಕಂಡು, ಆರ್ಟನ್ನನೂ ಆತನ ಸಹಕಾರಿಗಳೂ ಬಹು ಜಾಗರೂಕತೆಯಿಂದಿರ ತೊಡಗಿದರು; ಆದರೆ ಅವರು ಯಾವ ಕೆಲಸಕ್ಕೆ ತೊಡಗಿದ್ದರೋ, ಬ್ಲೇಕನ ಭಯದಿಂದ ಅದನ್ನು ಮಾತ್ರ ಬಿಟ್ಟುಗೊಡ

ಲಿಲ್ಲ. ಬ್ಲೇಕ ವಿಫಲ ಮನಸ್ಕನಾದರೂ ನಿರುತ್ಸಾಹಗೊಳ್ಳಲಿಲ್ಲ; ಅಲ್ಲದೆ ತನ್ನ ಕಾರ್ಯ ಬೇಗನೆ ಸಾಧಿಸದ್ದರಿಂದ ಆತನ ವಿರೋಧ ಮತ್ತಿಷ್ಟು ಹೆಚ್ಚಲಾರಂಭಿಸಿತು.

ಬ್ಲೇಕನಿಂದ ಬಿಡುಗಡೆ ಹೊಂದಿದ ಡಚ್ಚ ಓಡಿ ಹೋಗಿ ಯಾವ ಸ್ಥಳದಲ್ಲಿ ಮಾಯವಾಗಿದ್ದನೋ, ಹೆನ್ರಿಯನ್ನು ಗಾಯಗೊಳಿಸಿದ ವೈರಿಯಾದರೂ ಅದೇ ಸ್ಥಳದಲ್ಲಿ ಮಾಯವಾಗಿದ್ದನೆಂಬದು ಅಂದು ರಾತ್ರಿ ಟಿಪ್ಪನಾಯಿಯೊಡನೆ ಆತನ ಸಂಧಾನಕ್ಕೆಂದು ತೆರಳಿದ್ದ ಸ್ಮಿಥನಿಗೆ ಗೊತ್ತಾಗಿತ್ತೆಂಬದನ್ನು ನಮ್ಮ ವಾಚಕರು ಬಲ್ಲರು. ಆ ಸ್ಥಳದಲ್ಲಿಯೇ ಹ್ಯಾಮನ್ ಆರ್ಟನ್ನನ ಮನೆಯಿದ್ದಿತು; ಮತ್ತು ಅದಕ್ಕೆ ಸಮೀಪದಲ್ಲಿಯೇ ೨೦ನೇ ನಂಬರಿನ ಕೋಲಾನ ಸ್ಟ್ರೀಟನೊಳಗಿನದೊಂದು ಹಾಳು ಮನೆಯಿದ್ದಿತು. ಆ ಹಾಳು ಮನೆಯ ಒಳಭಾಗದಲ್ಲಿಯೇ ಆ ದುರ್ವೃತ್ತರ ವಾಸಸ್ಥಳವಿರಬೇಕೆಂದು ಬ್ಲೇಕನಿಗನಿಸುತ್ತಿತ್ತು.

ಬ್ಲೇಕ ಆ ಹಾಳು ಮನೆಯ ಮೇಲೆ ತನ್ನ ನಜರನ್ನಿಟ್ಟಿದ್ದರೂ ಅದನ್ನು ಝಡತಿ ಮಾಡಬೇಕೆಂಬದು ಮಾತ್ರ ಆತನಿಗೆ ಸರಿದೋರಲಿಲ್ಲ ಯಾಕಂದರೆ ಆರ್ಟನ್ನನ ಗುಂಪಿನವರು ತನ್ನ ಆ ಮನೋಗತ ತಿಳಿದು ತನ್ನ ಸಂಕಲ್ಪ ಕೀಡೇರದಂತೆ ಯಾವದೊಂದು ಹೊಸ ಜಾಲವನ್ನು ಕೌಶಲ್ಯದಿಂದ ಹರಡಬಹುದೆಂದಾಗಲಿ, ಆ ಜಾಲದಲ್ಲಿ ತನ್ನನ್ನು ತೊಡಕಿಸಿ ಅವರು ಪಾರಾಗಬಹುದೆಂದಾಗಲಿ ಆತನಿಗೆ ಅನಿಸಲಿಲ್ಲ. ಬೇರೆ ಯಾವನೊಬ್ಬ ಮುಂದ ಒಡ್ಡಿಯ ಪತ್ತೆದಾರನಿದ್ದರೆ ಇಲ್ಲವೆ ಪೋಲೀಸನಿದ್ದರೆ, ಆತ ಎಲ್ಲಕ್ಕೂ ಮೊದಲು ಆ ಹಾಳು ಮನೆಯ ಝಡತಿಗೇ ಪ್ರವೃತ್ತನಾಗುತ್ತಿದ್ದ. ಹುಚ್ಚ-ಬೆಪ್ಪರಂತೆ ಆಗ ಬ್ಲೇಕ ಥೈ-ಥೈ ಎಂದು ಕುಣಿಯದೆ, ಧೈರ್ಯದಿಂದ ಸುಯೋಗ ನಿರೀಕ್ಷಿಸ ತೊಡಗಿದ. ಇದೇ ಕಾಲಕ್ಕೆ ಲಂಡನ್ನ ನಗರದ ಮಾನ್ಯವಂತರ ಕುಟುಂಬಗಳಲ್ಲಿ ಕಳವು-ಹಾಕಿನ ಗೊಂದಲ ಆಕಸ್ಮಿಕ ಹೆಚ್ಚಾಗಿ ಸಮಾಜದಲ್ಲಿ ಸಾರ್ವತ್ರಿಕ ಅಂಜಿಕೆಯೂ ಉದ್ವೇಗವೂ ತೋರಹತ್ತಿದವು. ಇದು ಆರ್ಟನ್ನನ ಗುಂಪಿನವರ ಕೆಲಸವೇ ಎಂದು ಬ್ಲೇಕ ನಿರ್ಧರಿಸಿದ ಆರ್ಟನ್ನ ತನ್ನ ಗುಪ್ತ ಹೇರರ ಮುಖಾಂತರವಾಗಿ ದೊಡ್ಡ ದೊಡ್ಡ ಲಾರ್ಡರ ಮನೆಯ ಖಜಾನೆಯೊಳಗಿನ ಗುಪ್ತಧನವನ್ನೂ ಮುತ್ತು-ರತ್ನಗಳನ್ನೂ ಪತ್ತೆ ಹಚ್ಚಿ, ತನ್ನ ಸಂಗಡಿಗರಲ್ಲಿಯ ಸಪ್ರಸಿದ್ಧ ಕಳ್ಳರಿಂದ ಅವುಗಳನ್ನು ಬಹು ಕೌಶಲ್ಯದಿಂದ ಎಬ್ಬಿಸುತ್ತಿದ್ದ; ಆದರೆ

ಸಚಿವಶ್ರೇಷ್ಠ ಲಾರ್ಡ ಬೋರ್ಲರ ಮನೆಯೊಳಗಿನ ಪದಾರ್ಥಗಳಾವವೂ ಕಳವಾಗದೆ, ಅವರ ಸುರಕ್ಷಿತವಾದ ಮಂತ್ರಣಾಗಾರದೊಳಗಿನ ರಾಜಕೀಯ ಗುಪ್ತರಹಸ್ಯಗಳು ಮಾತ್ರ ಯಾವದೊಂದು ಅಲೌಕಿಕ ಶಕ್ತಿಪ್ರವಾಹದಿಂದ ತಪ್ಪದೆ ಪ್ರಕಟವಾಗುತ್ತಿದ್ದವು. ರಾಜಕಾರ್ಯದೊಳಗಿನ ಅತಿ ಮಹತ್ವದ ಅಂಗವೆಂದರೆ, ರಾಜಕೀಯ ರಹಸ್ಯಗಳನ್ನೆಲ್ಲ ಗುಪ್ತವಾಗಿರಿಸುವದು ಎಲ್ಲ ಬಗೆಯ ತತ್ಪರತೆಯಿಂದಿದ್ದರೂ ಈಗ ಅವುಗಳನ್ನು ಗುಪ್ತವಾಗಿರಿಸುವದು ಅಶಕ್ಯವಾಯಿತು. ಆದರಿಂದ ಮಂತ್ರಿಮಂಡಳದಲ್ಲಿ ಬಹು ಆಲೋಚನೆಯೂ ಕೋಲಾಹಲವೂ ಉಂಟಾಯಿತು. ಈ ಗೊಂದಲದಲ್ಲಿ ಭಾಯೋಲೆಯ ಆಕಸ್ಮಿಕ ಅಂತರ್ಧಾನದ ಭೀಷಣ ಸುದ್ದಿ ತುಸ ತಣ್ಣಗಾಯಿತು. ಇದನ್ನೆಲ್ಲ ನೋಡಿ ಬ್ಲೇಕನ ಬುದ್ಧಿ ಮಸಣಿಸಿತು. ಈ ಬಗೆಯ ಅದ್ಭುತ-ಅಸಂಭವ ಗೊಂದಲ ಆತನ ಜೀವನದಲ್ಲಿ ಇದೇ ಮೊದಲಿನದಾಗಿತ್ತು.

ಕ್ಯಾಪ್ಟನ್ ರೆನ್‌ಹ್ಯಾಮ ಯಾವ ದಿವಸ ಗೌಪ್ಯ ಕರಾರುಗಳೊಡನೆ ಕೇನಿಯಾ ದೇಶಕ್ಕೆ ನಡೆದಿದ್ದನೋ, ಆದರ ಎಂಟನೇ ದಿನ ಸಾಯಂಕಾಲವೇ ಬೋರ್ಲರ ಮನೆಯ ಮಂತ್ರಣಾಗಾರದೊಳಗಿನ ಟೆಲಿಫೋನದಿಂದ ಬ್ಲೇಕನಿಗೆ ಜರೂರಿಯ ಕರೆ ಬಂತು. ಕೂಡಲೆ ಆತ ಅಲ್ಲಿಗೆ ಹೋದ. ಬೋರ್ಲರ ಮನೆಯ ಆ ಮಂತ್ರಣಾಗಾರಕ್ಕೆ ಬ್ರಿಟಿಶ ಸಾಮ್ರಾಜ್ಯದ ಹೃತ್ಪಿಂಡವೆಂದರೆ ಅತಿಶಯೋಕ್ತಿಯೆನಿಸದು. ಆದರೆ ಆ ಮೋಲಂತಸ್ತಿನ ಮನೆ ಯಾವ ಆಡಂಬರದಿಂದಲೂ ಯುಕ್ತವಾಗಿರಲಿಲ್ಲ. ಅದು ಸಾಮಾನ್ಯವಾದೊಂದು ಕೋಣೆ. ಬ್ಲೇಕ ಅವಸರದಿಂದ ಹೋಗಿ ಆ ಕೋಣೆಯಲ್ಲಿ ಕಾಲಿಡುತ್ತಲೆ, ವಿಲ್ಯಮ್ಸ ಅವನನ್ನು ಎದುರುಗೊಂಡು ಸ್ವಾಗತ ಮಾಡಿದ. ಬ್ಲೇಕ ಡ್ಯೂಕನ ಆಗಿನ ಮುಖಭಾವದ ಕಡೆಗೆ ನೋಡಿ ವಿಸ್ಮಯಗೊಂಡ. ನಡುವಿನ ಒಂದೆರಡು ದಿನಗಳಲ್ಲಿ ಮಾತ್ರ ಅವನ-ಡ್ಯೂಕನ ಭೇಟ್ಟಿಯಾಗಿರಲಿಲ್ಲ; ಆದರೆ ಆ ಅಲ್ಪಾವಧಿಯಲ್ಲೇ ಡ್ಯೂಕ ಹತ್ತೆಂಟು ವರ್ಷಗಳ ಹೆಚ್ಚಿನ ವಯಸ್ಸಿನವನಾಗಿ ತೋರಿದ. ಯಾಕಂದರೆ, ಆಗ ಆ ತರುಣನ ಸೊಂಡೆ ಒಣಗಿ ಹೋಗಿತ್ತು; ಕಣ್ಣುಗಳ ಸುತ್ತಲೂ ಕಪ್ಪುಬಣ್ಣದ ಆವರಣವುಂಟಾಗಿತ್ತು; ಹಾಗು ಕಣ್ಣುಗಳಲ್ಲಿ ಉದ್ವೇಗದ ಚಿಹ್ನ ಹೆಚ್ಚಾಗಿ ಒಡೆದು ಕಾಣುತ್ತಿತ್ತು.

ಡ್ಯೂಕ ಬ್ಲೇಕನನ್ನು ಅಭಿವಂದಿಸಿ, ಇಳಿಮೋರೆಯಿಂದಲೇ:—ತಮ್ಮ ಆಗಮನದಿಂದ ನಾನು ಬದುಕಿಕೊಂಡಂತಾಯಿತು! ತಾವು ಬಾಗಿಲ ಹೊರಗೆ

ಷೇಕರಿಸುತ್ತ ಬಂದಾಗ ರೆನ್‌ಹ್ಯಾಮನೇ ಬಂದನೆಂದು ನನಗನಿಸಿತ್ತು; ತಾವು ಇಷ್ಟು ಬೇಗನೆ ಬಂದೀರೆಂದು ನನಗನಿಸಿರಲಿಲ್ಲ!

'ಅದೇಕೆ? ಆದದ್ದಾದರೂ ಏನೆಂಬದನ್ನು ತಿಳಿಸಿರಿ. ನಿಮ್ಮ ಮುಖ ಭಾವ ನೋಡಿದರೆ ಸುಚಿಹ್ನ ತೋರುವದಿಲ್ಲ.'

ಮತ್ತಿಷ್ಟು ಕುಂಠಿತವಾಣಿಯಿಂದ ಡ್ಯೂಕ:—ಯಜಮಾನರಿಂದಲೇ ನಿಮಗೆಲ್ಲ ತಿಳಿಯತಕ್ಕದ್ದಾಗಿದೆ. ಪ್ರಯಾಣದೊಳಗಿಂದ ರೆನ್‌ಹ್ಯಾಮ ಸುರಕ್ಷಿತ ಹಿಂದಿರುಗಿ ಬರಲಿಕ್ಕೆ ತಕ್ಕ ಉಪಾಯ ನೀವೇ ಮಾಡಬೇಕಾಗಿದೆ. ನಿಮಗೆ ಈಗ ಇದಕ್ಕೂ ಹೆಚ್ಚಿಗೆ ಹೇಳತಕ್ಕದ್ದೇನೂ ಇರುವದಿಲ್ಲ.

ಬಳಿಕ ಬ್ಲೇಕನನ್ನು ಬೇರೊಂದು ಕೋಣೆಗೆ ಕರೆದೊಯ್ದರು. ಆ ಕೋಣೆಯೊಳಗೂ ಖುರ್ಚಿ, ಮೇಜು ಮುಂತಾದವುಗಳ ಆಡಂಬರ ಹೆಚ್ಚಾಗಿರಲಿಲ್ಲ. ಅದೊಂದು ಸರ್ವ ಸಾದಾರಣ ಆಫೀಸ ರೂಮು. ಆ ರೂಮಿನ ನಡುವೆ ಒಂದು ದುಂಡು ಮೇಜು. ಆ ಮೇಜಿಗೆ ಸುತ್ತುವರೆದು ಮುಖ್ಯ ಮಂತ್ರಿಯಾದ ಲಾರ್ಡ ಬೋರ್ಲ, ಪರರಾಷ್ಟ್ರದ ಪ್ರಧಾನ ಸಚಿವ, ಅಲ್ಲದೆ ಮತ್ತಿಬ್ಬರು ಸಚಿವರು ಹೀಗೆ ನಾಲ್ಕು ಜನರು ಕುಳಿತಿದ್ದರು. ಆ ನಾಲ್ವರ ಹೊರತು ಅಲ್ಲಿ ಒಬ್ಬ ಗಿಡ್ಡಹಾಗು ಟೊಣಪನಾದ ಪ್ರೌಢ ಸಭ್ಯಗೃಹಸ್ಥನೂ ಕುಳಿತಿರುವದನ್ನು ಬ್ಲೇಕ ಕಂಡ. ಬ್ಲೇಕನಿಗೆ ಆತನ ಗುರ್ತ ಹೆಚ್ಚಾಗಿತ್ತು. ಆತ ಲಂಡನ್ನ ಪಟ್ಟಣದ ಚೀಫ ಪೋಲಿಸ ಕಮಿಶನರ. ಆತನ ಹೆಸರು ಮೇಜರ ಜೋಸ್ಲಿನ್ನ.

ಲಾರ್ಡ ಬೋರ್ಲ ಕೂಡ್ರಲಿಕ್ಕೆ ಸಂಜ್ಞೆ ಮಾಡಲು, ಬ್ಲೇಕ ಆತನ ಪಕ್ಕದ ಕುರ್ಚಿಯ ಮೇಲೆ ಕುಳಿತುಕೊಂಡ. ಅನಂತರ ಬೋರ್ಲ ಆತನನ್ನುದ್ದೇಶಿಸಿ ಗಂಭೀರ ವಾಣಿಯಿಂದ:—ನನ್ನ ಬಿನ್ನಹದ ಮೇರೆಗೆ ಇಲ್ಲಿಗೆ ದಯಮಾಡಿಸಿರುವ ಎಲ್ಲ ಸಭ್ಯಗೃಹಸ್ಥರೇ, ನಾನು ನಿಮ್ಮಿಂದೊಂದು ಸಹಾಯ ಪಡೆಯಬೇಕೆಂದಿರುತ್ತೇನೆ. ಯಾವ ತರುಣನನ್ನು ನಾನು ಚಿಕ್ಕಂದಿನಿಂದಲೂ ನೋಡುತ್ತಿರುವೆನೋ, ಯಾವಾತನ ಕರ್ತವ್ಯಪರಾಯಣತೆಗೂ ನಂಬುಗೆಗೂ ಸ್ವತಃ ಜಾಮೀನಾಗಲಿಕ್ಕೆ ನನಗೆ ಸ್ವಲ್ಪವೂ ಅನುಮಾನ ಉಂಟಾಗುವದಿಲ್ಲವೋ, ಅಂಥವನ ಅಪರಾಧಕ್ಕೆ ತಕ್ಕ ಶಿಕ್ಷೆವಿಧಿಸುವ ಮೊದಲು ಆ ಬಗ್ಗೆ ನಿಮ್ಮೆಲ್ಲರ ಅಭಿಪ್ರಾಯ ಪಡೆಯುವದು ಯೋಗ್ಯವೆಂದು ತಿಳಿ

ದಿರುವೆನು; ಹಾಗು ಅದಕ್ಕಾಗಿಯೇ ನಿಮ್ಮೆಲ್ಲರನ್ನು ಇಲ್ಲಿಗೆ ಬರಮಾಡಿಕೊಂಡಿರುತ್ತೇನೆ.

ಅದಕ್ಕೆ ಬ್ಲೇಕ ಅನ್ನುತ್ತಾನೆ:—ಕೈಲಾದ ಮಟ್ಟಿಗೂ ನಾವು ನಿಮಗೆ ಸಹಾಯ ಮಾಡುತ್ತೇವೆ; ಆದರೆ ಯಾವ ಅಡ್ಡಿಯೂ ಇರದಿದ್ದರೆ ನಡೆದ ಸಂಗತಿಗಳನ್ನೆಲ್ಲ ನಮ್ಮೆದುರಿಗೆ ಚೆನ್ನಾಗಿ ವಿವರಿಸಬೇಕು; ಅಂದರೆ ನಾವು ಆ ವಿಷಯದಲ್ಲಿ ಏನು ಮಾಡಬೇಕೆಂಬದನ್ನು ತಿಳಿಯಲಿಕ್ಕೆ ಶಕ್ತರಾಗುವೆವು. ನಡೆದ ಸಂಗತಿ ವಿವರವಾಗಿ ತಿಳಿಯದ ಹೊರತು, ನಾವು ನಿಮಗೆ ಸಹಾಯ ಮಾಡುವದಾದರೂ ಹೇಗೆ?

ಲಾರ್ಡ ಬೋರ್ಲ ಕ್ಯಾಪ್ಟನ್ ರೆನ್‌ಹಾಮನಿಗೊಪ್ಪಿಸಿದ ಮಹತ್ವದ ಕೆಲಸವನ್ನೂ, ಅದಕ್ಕಾಗಿ ಅವನನ್ನು ಕೆನಿಯಾದ ರಾಜಧಾನಿ ಹಾಕಿವಾಯೋಕ್ಕೆ ಕಳಿಸಿಕೊಟ್ಟಿದ್ದನ್ನೂ ಬ್ಲೇಕನಿಗೆ ಸಂಕ್ಷೇಪವಾಗಿ ತಿಳಿಸಿದ. ಬಳಿಕ ಲಾರ್ಡ:—ಕ್ಯಾಪ್ಟನ್ ರೆನ್‌ಹ್ಯಾಮ ಯಥಾ ಸಮಯಕ್ಕೆ ಹಾಕಿವಾಯೋ ಪಟ್ಟಣಕ್ಕೆ ತಲುಪಿ, ನಮ್ಮ ಸೂಚನೆಯ ಮೇರೆಗೆ ಆ ಗುಪ್ತಕರಾರಪತ್ರವನ್ನು ಅಲ್ಲಿಯ ಸಭಾಪತಿಯ ಕೈಗಿತ್ತನೆಂದು ಅಲ್ಲಿರುವ ನಮ್ಮ ರಾಜದೂತನಿಂದ ಬಂದ ತಂತಿಯಿಂದ ತಿಳಿಯುತ್ತಿದೆ; ಆದರೆ ಇಲ್ಲಿಯ ಪೋಲಿಸ ಖಾತೆಯ ಮುಖ್ಯಸ್ಥರಿಗೆ ನಮ್ಮ ಆ ಕರಾರುಗಳ ಛಾಯಾಚಿತ್ರವೂ ನಾನು ಯಾವ ತೀರ ಮಹತ್ವದ ಕರಾರನ್ನು ಪತ್ರದಲ್ಲಿ ಬರೆದುಕೊಡದೆ, ರೆನ್‌ಹ್ಯಾಮನಿಗೆ ಬಾಯಿಪಾಠ ಮಾಡಿಸಿ ಕಳಿಸಿದ್ದೆನೋ ಅದರ ಹಸ್ತಲಿಖಿತ ಪ್ರತಿಯೂ ಆ ಮೊದಲೇ ಯಾವನೊಬ್ಬ ಸಾಮಾನ್ಯ ಮನುಷ್ಯನಿಂದ ಬಂದು ತಲುಪಿರುತ್ತವಂತೆ! ಈ ಎಲ್ಲ ಘಟನೆಯಿಂದ ನಾನು ಎಷ್ಟು ಮುಗ್ಧನೂ ಕರ್ತವ್ಯವಿಮೂಢನೂ ಆಗಿರುವೆನೆಂಬದನ್ನು ನೀವು ಸಹಜವಾಗಿ ತಿಳಿಯಬಲ್ಲಿರಿ. ಯಾವ ಅತಿ ಮಹತ್ವದ ಶರ್ತನ್ನು ಆ ಸಭಾಪತಿಗೆ ಬಾಯಿಂದಲೇ ಹೇಳತಕ್ಕದ್ದೆಂದು ರೆನ್‌ಹ್ಯಾಮನಿಂದ ಬೇಕಂತ ನಾನು ಇಲ್ಲಿಯೇ ಬಾಯಿಪಾಠ ಮಾಡಿಸಿದ್ದೆನೋ, ಅದು ರೆನ್‌ಹ್ಯಾಮನ ಹೊರತು ಬೇರೆ ಯಾರಿಗೂ ಗೊತ್ತಿರಲಿಲ್ಲೆಂಬದನ್ನು ನಿಮಗೆ ಪ್ರತ್ಯೇಕವಾಗಿ ತಿಳಿಸಿಡುತ್ತೇನೆ. ಕ್ಯಾಪ್ಟನ್ ರೆನ್‌ಹ್ಯಾಮ ಆ ಮಹತ್ವದ ಕೆಲಸ ನಿರ್ವಹಿಸಲಿಕ್ಕೆ ಯೋಗ್ಯನೆಂಬದಕ್ಕೆ ತಿಲಮಾತ್ರವೂ ಸಂಶಯವಿರಲಿಲ್ಲ; ಅಲ್ಲದೆ ಆತ ಯಾವ ಬಗೆಯಿಂದಾದರೂ ವಿಶ್ವಾಸಘಾತ ಮಾಡಬಹುದೆಂಬದನ್ನು ನಾನು ಈಗಲೂ ನಂಬಲಾರೆ. ನಾನು ಆ ಕರಾರ

ಪತ್ರ ಆ‍ತನ ಕಡೆಗೆ ಕೊಟ್ಟಿದ್ದು ಆತನ ಇಲ್ಲವೆ ನನ್ನ ಅಜ್ಞಾನ ಬಲದಿಂದ ಯಾವನೋ ಒಬ್ಬ ಸುದಕ್ಷ ಕಳ್ಳರರಸನ ಕಣ್ಣಿಗೆ ಬಿದ್ದಿರಬೇಕೆಂದು ಈಗ ನನ ಗನಿಸುತ್ತಿದೆ; ಆದರೆ-ಆದರೆ ಅವನಿಗೆ ಯಾವ ತೀರ ಮಹತ್ವದ ಕರಾರನ್ನು ನಾನು ಬಾಯಿಪಾಠ ಮಾಡಿಸಿದ್ದೆನೋ, ಆತ ಸ್ವಂತ ಬಾಯಿಂದ ಒಡನುಡಿ ಯದ ಹೊರತು ಬೇರೊಬ್ಬರು ಅದನ್ನು ಬರೆಕೊಳ್ಳುವ ಬಗೆ ಹೇಗೆ?

ಅದಕ್ಕೆ ಬ್ಲೇಕ ಅನ್ನುತ್ತಾನೆ:— ತಾವು ಕ್ಯಾಪ್ಟನ್ ರೆನ್‌ಹ್ಯಾಮನಿಗೆ ಪಾಠಮಾಡಿಸಿದ ಆ ಮಹತ್ವದ ಕರಾರು ಕೇವಲ ಅದರಂತೆಯೇ ಲಿಪಿಬದ್ಧ ಪ್ರಕಟವಾಗಿದೆಯೊ?

'ಅಹುದು; ಆ ನಕಲಿನಲ್ಲಿ ಒಂದು ಶಬ್ದವೂ ಹೆಚ್ಚುಕಡಿಮೆಯಾಗಿ ರುವದಿಲ್ಲ.'

'ರೆನ್‌ಹ್ಯಾಮ ತಿರುಗಿ ಬರುವ ಅವಧಿ ಆಯಿತೇ?'

'ಆಗಿರುತ್ತದೆ. ಕ್ಷಣಕ್ಷಣಕ್ಕೂ ನಾನು ಆತನ ದಾರಿಯನ್ನೇ ಕಾಯು ತ್ತಿರುವೆ.'

'ಆತ ದೋಷಿಯಹುದೋ-ಅಲ್ಲವೋ ಎಂಬದು ಆತ ಇಲ್ಲಿಗೆ ಬಂದ ಮೇಲೆಯೇ ತಿಳಿಯಬೇಕಾಗಿದೆ.'

ಇದುವರೆಗೆ ಸುಮ್ಮನೆ ಕುಳಿತು ಆ ಸಂಭಾಷಣ ಕೇಳುತ್ತಿದ್ದ ಪರರಾಷ್ಟ್ರ ವಿಭಾಗದ ಮುಖ್ಯ ಪ್ರಧಾನಿ ಇನ್ನು ಸುಮ್ಮನಿರಲಾರದೆ, ಬ್ಲೇಕನಿಗನ್ನು ತ್ತಾನೆ:— ನಮ್ಮಗಳ ಅಡ್ಡಸವಾಲುಗಳಿಂದ ಆತ ತನ್ನ ಅಪರಾಧ ಒಪ್ಪಿ ಕೊಳ್ಳಬಹುದೆಂದು ನಿಮಗನಿಸುತ್ತಿದೆಯೇ?

'ಅವನಿಗೆ ಅಡ್ಡ ಸವಾಲು ಮಾಡುವ ಕಾರಣವೇ ಬೀಳಲಿಕ್ಕಿಲ್ಲ. ಆತ ಇಲ್ಲಿಗೆ ತಾನಾಗಿ ತಿರುಗಿ ಬಂದರೆ, ಅದೇ ಆತನ ನಿರಪರಾಧಿತ್ವದ ಮುಖ್ಯ ಪ್ರಮಾಣ; ಇದಲ್ಲದೆ ಆತ ಅಪರಾಧಿಯೋ-ನಿರಪರಾಧಿಯೋ ಎಂಬದನ್ನು ಆತನ ಮೋರೆ ನೋಡಿದ ಕೂಡಲೆ ಪರೀಕ್ಷಿಸಬಹುದಾಗಿದೆ. ಯಾವಾತನಿಗೆ ನಿಜವಾದ ದೃಷ್ಟಿಯಿರುವದೋ, ಆತ ಅದನ್ನು ಸಹಜವಾಗಿ ಕಂಡುಕೊಳ್ಳ ಬಲ್ಲ' ಹೀಗೆಂದು ಬ್ಲೇಕ ಹೇಳುತ್ತಿರಲು, ಅಲ್ಲಿಯವರಾರೂ ಆತನಿಗೆ ಪ್ರತಿ ಭಟಿಸಲುದ್ಯುಕ್ತರಾಗಲಿಲ್ಲ. ಇಷ್ಟರಲ್ಲಿ ಒಬ್ಬ ದ್ವಾರ ಪಾಲಕ ಹೊರಗಿನ ಕೋಣೆಯಿಂದ ಅಲ್ಲಿಗೆ ಬಂದು:— ಹೊರಗೆ ಕ್ಯಾಪ್ಟನ್ ರೆನ್‌ಹ್ಯಾಮರು ಕಾದಿರುತ್ತಾರೆ, ಎಂದು ತಿಳಿಸಿದ.

ಕೂಡಲೆ ಅಲ್ಲಿದ್ದವರೆಲ್ಲರೂ ಸರಿಯಾಗಿ ಕುಳಿತರು. ಕೆಲ ನಿಮಿಷಗಳಲ್ಲಿಯೇ ರೆನ್‌ಹ್ಯಾಮು ಅಲ್ಲಿಗೆ ಬಂದು, ಎಲ್ಲರನ್ನೂ ಅಭಿವಂದಿಸಿ, ಲಾರ್ಡ ಬೋರ್ಲರನ್ನುದ್ದೇಶಿಸಿ:—ನಾನು ನಮ್ಮ ಮನೆಯ ಬಾಗಿಲಿಗೆ ಹೋದ ಕೂಡಲೆ ನನ್ನನ್ನು ಇಲ್ಲಿಗೆ ತತ್‌ಕ್ಷಣವೇ ಬರಲಿಕ್ಕೆ ಅಪ್ಪಣೆಯಾಗಿದೆಯೆಂಬದು ತಿಳಿಯಿತು. ಆದಕ್ಕಾಗಿ ಹಾಗಿಂದ ಹಾಗೆಯೇ ಇಲ್ಲಿಗೆ ಬಂದಿರುತ್ತೇನೆ, ಎಂದು ಹೇಳಿದ.

ಲಾರ್ಡಬೋರ್ಲರ ಸ್ವಾಭಾವಿಕವಾದ ನಗೆಮೊಗದಲ್ಲಿ ಅಂದು ಅಸ್ವಾಭಾವಿಕವಾದ ಗಾಂಭೀರ್ಯ ಕಂಡು, ರೆನ್‌ಹ್ಯಾಮು ಬಹು ಸೋಜಿಗಗೊಂಡನು. ಬಳಿಕ ಆತ ಅಲ್ಲಿದ್ದವರೆಲ್ಲರ ಮುಖದ ಕಡೆಗೂ ದಿಟ್ಟಿಸಿ ನೋಡಲು, ಎಲ್ಲರೂ ಗಂಭೀರರೂ, ಅಪ್ರಸನ್ನರೂ, ಹುಬ್ಬು ಗಂಟಿಕ್ಕಿದವರೂ ಆಗಿದ್ದರು.

ಆಗ ಲಾರ್ಡ ಬೋರ್ಲ ನೀರಸ ದನಿಯಿಂದ:— ರೆನ್‌ಹ್ಯಾಮರೇ, ನಿಮ್ಮ ಪ್ರತ್ಯಾಗಮನವನ್ನು ಕಂಡು ನಮ್ಮೆಲ್ಲರಿಗೂ ಬಹು ಆನಂದವಾಗಿರುತ್ತದೆ; ಯಾಕಂದರೆ, ಇದು ನಿಮ್ಮ ನಿರ್ದೋಷಿತ್ವದ ಮುಖ್ಯ ಪ್ರಮಾಣವೆಂದೇ ಅನುಮಾನವಾಗುತ್ತದೆ.

ಆ ನುಡಿ ಕೇಳಿ ರೆನ್‌ಹ್ಯಾಮುನ ಅಂತಃಕರಣದ ಮೇಲೆ ಒಮ್ಮೆಲೆ ಕಬ್ಬಿಣದ ಬಹು ದೊಡ್ಡ ಘನ್ನಿನ ಪೆಟ್ಟು ಬಿದ್ದಂತಾಯಿತು! ಆಗಲಾತ ತನ್ನ ಕಣ್ಣುಗಳೆರಡನ್ನೂ ಹುಬ್ಬಿನಲ್ಲಿರಿಸುತ್ತ:— ನನ್ನ ನಿರಪರಾಧವೇ? ಈ ಮಾತಿನ ಇಂಗಿತವೇ ನನಗೆ ತಿಳಿಯುದಾಗಿದೆ.

ಅಲ್ಲಿದ್ದ ಲಂಡನ್ನಿನ ಪೋಲೀಸ ಚೀಫ ಕಮಿಸನರನು ಆ ವಾಕ್ಯವನ್ನು ಕೇಳಿ, ರೆನ್‌ಹ್ಯಾಮುನ ಕಡೆಗೆ ಕಡೆಗಣ್ಣಿನಿಂದ ನೋಡುತ್ತ, ಪರರಾಷ್ಟ್ರಪ್ರಧಾನನ ಕಿವಿಗೆ ತನ್ನ ತುಟಿಗಳನ್ನು ಹಚ್ಚಿ ಮೆಲ್ಲಮೆಲ್ಲನೆ ಏನನ್ನೋ ಹೇಳತೊಡಗಿದ. ಆಗಿನ ಆತನ ಮಾತಿನ ಅಭಿಪ್ರಾಯವೇನಂದರೆ:—ಈ ತರುಣ ನಾಟಕಶಾಲೆಯನ್ನು ಪ್ರವೇಶಿಸಿದರೆ, ಒಳ್ಳೇ ಅಭಿನಯ ಪಟುವೆಂದು ಪ್ರಖ್ಯಾತನಾಗಬಹುದು. ಬ್ಲೇಕನೆನ್ನುತ್ತಾನೆ, ಯಾವನೊಬ್ಬನ ಅಂತರಂಗದ ಭಾವವನ್ನು ಆತನ ಮುಖದರ್ಶನದಿಂದಲೇ ತಿಳಿಯಬಹುದೆಂದು; ಆದರೆ ಅದು ಕೇವಲ ಭ್ರಮೆ. ಯಾವನು ಎಷ್ಟು ಹೆಚ್ಚು ಭಂಡನೋ, ಅವನು ಅಷ್ಟು ದೊಡ್ಡ ಧಾರ್ಮಿಕನೆಂದಂತೆಯೇ ಸರಿ!

ಆಗ ಲಾರ್ಡ ಬೋರ್ಲ:—ರೆನ್‌ಹ್ಯಾಮ, ನಿನ್ನ ನಿರಪರಾಧಿತ್ವಕ್ಕೆ ಸಾಕಷ್ಟು ಪ್ರಮಾಣಗಳಿಲ್ಲ; ಯಾಕಂದರೆ, ನಮ್ಮ ಗುಪ್ತಹೇರನು ಕೆಲ ನಿಮಿಷಗಳ ಮುಂಚೆ ನಮಗೊಂದು ಫೋಟೋ ತಂದು ಕೊಟ್ಟಿರುತ್ತಾನೆ. ನೀನು ಯಾವ ಗುಪ್ತ ಕರಾರ ಪತ್ರವನ್ನು ಕೆನಿಯಾ ಗವರ್ನಮೆಂಟಗೆ ಒಯ್ದಿದ್ದೆಯೋ, ಆ ಪತ್ರದ ಫೋಟೋವೇ ಅದಾಗಿದೆ. ಆ ಫೋಟೋ ಬಹು ಸ್ಪಷ್ಟವಾಗಿ ಮೂಡಿರುವದರಿಂದ, ಬೇಕಾದಂಥ ಮುದುಕರೂ ಅದನ್ನು ಉಪನೇತ್ರಗಳಿಲ್ಲದೆ ಚೆನ್ನಾಗಿ ಓದಬಹುದಾಗಿದೆ. ಇದಲ್ಲದೆ ನೀನು ಯಾವ ಅತಿ ಮಹತ್ವದ ಕರಾರನ್ನು ಕೇವಲ ಬಾಯಿಪಾಠಮಾಡಿಕೊಂಡು ಹೋಗಿದ್ದೆಯೋ, ಅದರ ಫೋಟೊ ತೆಗೆಯುವದು ತೀರ ಅಶಕ್ಯವಾಗಿದ್ದರೂ, ಅದರ ನಿಜವಾದ ನಕಲೂ ಆ ಗುಪ್ತಚರನ ಮುಖಾಂತರ ನಮ್ಮ ಹಸ್ತಗತವಾಗಿದೆ. ಒಳ್ಳೇ ಮಹತ್ವದ ಕಾರ್ಯದಲ್ಲಿ ನಿನ್ನ ಕಾರ್ಯಸಾಫಲ್ಯದ ಬಗೆ ಇದೇ ಏನು?'

ರೆನ್‌ಹ್ಯಾಮ ಒಳ್ಳೇ ಆವೇಗದಿಂದ:— 'ಅಸಂಭವ! ಇದು ತೀರ ಅಸಂಭವ!! ಒಂದುವೇಳೆ ಇದು ನಿಜವಾಗಿದ್ದರೆ, ಅವಿಶ್ವಾಸವೆಂಬದು ಬೇರೆ ಇಲ್ಲವೇ ಇಲ್ಲ! ದೈವಶಕ್ತಿಯ ಪ್ರಭಾವದಿಂದ ಇದು ಶಕ್ಯವಾದರೂ ಆಗಬಹುದು; ಆದರೆ ನಾನು ದೇವರ ಆಣೆ ಮಾಡಿ ಹೇಳುತ್ತೇನೆ, ಯಾರಿಗೆ ತಿಳಿಸಬೇಕೆಂದು ನನ್ನಿಂದ ಆ ಅತಿ ಮಹತ್ವದ ಕರಾರು ಪಾಠಮಾಡಲ್ಪಟ್ಟಿತ್ತೋ, ಅವರ ಹೊರತು ಮತ್ತೆ ಯಾರ ಎದುರಿಗೂ ನಾನದನ್ನು ಹೇಳಿರುವದಿಲ್ಲ. ತಮ್ಮ ಎದುರಿಗೆ ಈ ಮಂತ್ರಣಾಗಾರದಲ್ಲಿ ಅಂದು ತಮಗೊಪ್ಪಿಸಿದ ಪಾಠದಂತೆಯೇ, ಆ ಕೆನಿಯಾ ದೇಶದೊಳಗಿನ ರಾಜನಿಗೂ ಅದನ್ನು ಹೇಳಿಬಂದಿರುತ್ತೇನೆ. ಹೀಗಿದ್ದು, ಬೇರೆಯವರು ಅದರ ನಕಲು ಮಾಡಿಕೊಂಡ ಬಗೆ ಹೇಗೆ?'

ಆಗ ಲಾರ್ಡ ಬೋರ್ಲ ಉಳಿದ ಮಂತ್ರಿಗಳನ್ನುದ್ದೇಶಿಸಿ:—ರೆನ್‌ಹ್ಯಾಮನು ಆ ಮಹತ್ವದ ಕರಾರಿನೊಳಗಿನ ಶಬ್ದಗಳಾವನ್ನಾದರೂ ಮರೆಯಗಿರಿಯಬಹುದೆಂದು ಅದನ್ನು ನಾನು ಒಂದು ಕಾಗದದಲ್ಲಿ ಒರೆದು ಇವನಿಗೆ ಪಾಠಮಾಡಲು ಕೊಟ್ಟಿದ್ದೆ; ಮತ್ತು ಈ ಮಂತ್ರಣಾಗಾರದಲ್ಲಿಯೇ ಇವನಿಂದ ಪಾಠ ಹೇಳಿಸಿಕೊಂಡ ನಂತರ ಆ ಕಾಗದವನ್ನು ನಾನೇ ನನ್ನ ಕೈಮುಟ್ಟಿ ಸುಟ್ಟು ಬೂದಿಮಾಡಿ ಬಿಟ್ಟಿದ್ದೆ.

ಅದಕ್ಕೆ ಮೇಜರ ಜೋಸ್ಲಿನ್ನ ಗೋಣು ಹಾಕಿ ಸ್ವಮ್ಮತಿಯುನ್ನಿತ್ತು:— ತಾವು ಈಗ ಹೇಳಿದ ಮಾತನ್ನು ಈ ಮೊದಲೇ ನಮಗೆ ತಿಳಿಸಿಟ್ಟಿರುತ್ತೀರಿ. ಈ ಆಸಾಮಿಯ ಅಪರಾಧದ ಪ್ರಮಾಣ ನನ್ನ ಕೈಯಲ್ಲಿರುತ್ತದೆ. ಈತ ನೊಡನೆ ಬಹಳ ಮಾತಾಡಿ ಹೊತ್ತುಗಳೆಯುವದು ಅನವಶ್ಯಕ. ಈತನಿಗೆ ತಕ್ಕ ಶಿಕ್ಷೆ ಕೊಟ್ಟರೆ, ಈತನ ಈ ವೇಷಧಾರೀ ಅಭಿನಯ ಹೇಳಹೆಸರಿಲ್ಲ ದಾಗಿ, ಈತ ತನ್ನ ಅಪರಾಧ ಒಪ್ಪಿಕೊಳ್ಳುತ್ತಾನೆ, ಎಂದು ತನ್ನ ಪೋಲೀಸ ದರ್ಪದಿಂದ ನುಡಿದನಲ್ಲದೆ, ಆತ ರೆನ್‌ಹ್ಯಾಮನ ಕಡೆಗೆ ಹೊರಳಿ, ಕೆಂಗಣ್ಣಿ ನಿಂದ ಅವನನ್ನು ಹುಳು ಹುಳು, ಎಂದು ನೋಡುತ್ತ ಒಳ್ಳೇ ಸಿಟ್ಟಿನಿಂದ:— ಕ್ಯಾಪ್ಟನ್ ರೆನ್‌ಹ್ಯಾಮ, ನನ್ನೆದುರಿಗೆ ನಿನ್ನೀ ಮೋಸ ಎಳ್ಳಷ್ಟೂ ನಡೆ ಯದು. ನೀನು ವಿಶ್ವಾಸಘಾತ ಮಾಡಿರುತ್ತೀ, ಎಂಬ ಬಗ್ಗೆ ನಮ್ಮಲ್ಲಿ ಬೇಕಾದಷ್ಟು ಪ್ರಮಾಣಗಳಿವೆ. ಈ ನಿನ್ನ ಅಪರಾಧಕ್ಕೆ ತಕ್ಕ ಶಿಕ್ಷೆಯಾಗು ವದೆಂಬದನ್ನು ನಿನಗೆ ಹೇಳಬೇಕಾಗಿಲ್ಲ. ಯೋಗ್ಯ ಶಿಕ್ಷೆಗಾಗಿ ನೀನು ಸನ್ನ ದ್ಧನಾಗು, ಎಂದು ಹೇಳಿದ.

ರೆನ್‌ಹ್ಯಾಮ ದೃಢಸ್ವರದಿಂದ:- ಮೇಜರ ಜೋಸ್ಲಿನ್ನ, ನಾನು ವಿಶ್ವಾಸ ಘಾತಕನಲ್ಲ. ನಾನು ಹಾಗೆ ವಿಶ್ವಾಸಘಾತುಕನೇ ಆಗಿದ್ದರೆ, ಈ ಲಂಡನ್ನಿಗೆ ತಿರುಗಿ ಬಂದು ನಿಮ್ಮಗಳೆಲ್ಲರಿಗೆ ನನ್ನ ಮೋರೆ ತೋರಿಸುತ್ತಲೇ ಇರಲಿಲ್ಲ. ಆತ್ಮಹತ್ಯೆ ಮಾಡಿಕೊಂಡು ಆ ಪಾಪಕ್ಕೆ ತಕ್ಕದ್ದಾದ ಪ್ರಾಯಶ್ಚಿತ್ತ ಭೋಗಿ ಸುತ್ತಿದ್ದೆ. ನನ್ನ ದುರ್ದೈವವೆಂದೇ ನೀವು ನನ್ನ ಮಾತನ್ನು ನಂಬುವದಿಲ್ಲ; ಆದರೆ ಅಪರಾಧ ಮಾಡಿ, ಶಿಕ್ಷೆಯ ಭಯದಿಂದ ಸುಳ್ಳು ಹೇಳುವಂತಹ ಹೇಡಿ ಮನುಷ್ಯ ನಾನಾಗಿಲ್ಲ. ಯಾವನು ಸ್ವದೇಶದ ಗೌರವಕ್ಕಾಗಿ ರಣ ಕ್ಷೇತ್ರದಲ್ಲಿ ಶತ್ರುಗಳ ತೋಫಿನ ಗುಂಡುಗಳ ಎದುರಿಗೆ ತನ್ನ ಎದೆಯನ್ನು ಸೆಟೆಸಿ ನಿಂತಿದ್ದನೋ, ಆತ ಇಂದು ಸ್ವದೇಶದ ವಿಶ್ವಾಸಘಾತ ಮಾಡಿ, ತನ್ನ ತುಚ್ಛವಾದ ಜೀವದ ಹೆದರಿಕೆಗಾಗಿ ಸುಳ್ಳು ಹೇಳುತ್ತಾನೆಂದು ತಮಗನಿಸು ವದೇ? ಧಿಕ್! ಧಿಕ್, ನನ್ನೀ ಜೀವನಕ್ಕೆ!!!

ಕೂಡಲೆ ಡ್ಯೂಕ ಭರದಿಂದ ಮುಂದುವರಿದು, ಆತನ ಮುಂಗೈ ಹಿಡಿದು:- ರೆನ್‌ಹ್ಯಾಮ ಮಿತ್ರಾ, ಈ ಮಾತು ನಿನಗೇ ಸಲ್ಲತಕ್ಕದ್ದು ನಿನ್ನಿಂದ ಇಂಥ ನೀಚ ಕೆಲಸ ಎಂದಿಗೂ ಆಗಲಾರದೆಂದು ನಾನೂ ಎದೆತಟ್ಟಿ ಹೇಳ ಬಲ್ಲೆ, ಎಂದಂದ.

ಪರರಾಷ್ಟ್ರದ ಪ್ರಧಾನ ಸಚಿವನೆಂದರೆ ಗರ್ವದ ಮೂರ್ತಿಮಂತ ಅವತಾರವಾಗಿದ್ದ ತನ್ನ ಶ್ರೇಷ್ಠ ನೌಕರಿಯ ಬಿಂಕದಿಂದ ಮತ್ತನಾದ ಆತ ಉಳಿದವರೆಲ್ಲರನ್ನೂ ಕ್ಷುದ್ರ ಮಶಕಗಳೆಂದೇ ಭಾವಿಸುತ್ತಿದ್ದ. ಆತನ ಆಜ್ಞಾ-ಮುತ್ತಜ್ಜಂದಿರೆಲ್ಲರೂ ಸಾಮಾನ್ಯ ಸೆರೆಯದಂಗಡಿಯ ಮಾಲಿಕರಾಗಿದ್ದರು! ಆದರೆ ದೈವಗತಿಯಿಂದ ಈತನಿಗೆ ಪರರಾಷ್ಟ್ರ ಮಂತ್ರಿತ್ವ ದೊರೆತಿತ್ತು. ಆ ಮಹಾ ಗರ್ವಿಷ್ಠ ನಿಜ ಸಂಗತಿಯನ್ನು ಸ್ವಲ್ಪವೂ ವಿಮರ್ಶಿಸದೆ, ತನ್ನ ಕೈ ಕೆಳಗಿನವನಾದ ರೆನ್‌ಹ್ಯಾಮನಿಗೆ ಬಾಯಿಗೆ ಬಂದ ಹಾಗೆ ಅಂದು ಅವಮಾನಗೊಳಿಸಿದ. ಇಷ್ಟೇ ಅಲ್ಲ, ಆತ ರೆನ್‌ಹ್ಯಾಮನನ್ನು ಮೇಲುಗಟ್ಟಿ ನುಡಿದಿದ್ದ ಡ್ಯೂಕನ ಮೇಲೆ ಕೂಡ ಸಿಟ್ಟು ಬೆಂಕಿಯಾದ; ಆದರೆ ಡ್ಯೂಕ ಮುಖ್ಯ ಮಂತ್ರಿಯಾದ ಲಾರ್ಡ ಬೋರ್ಲರ ಪ್ರಾಯವ್ಹೇಟ ಸೆಕ್ರೆಟರಿ, ಅವರ ಭಾವೀ ಜಾಮಾತ, ಎಂದು ತಿಳಿದು, ಅವನಿಗೆ ಬಾಯಿಗೆ ಬಂದಹಾಗೆ ಅನ್ನದೆ, ಸೌಮ್ಯ ವಾಣಿಯಿಂದಲೇ:—ಡ್ಯೂಕರೇ, ನಿಮ್ಮ ಮಿತ್ರವಾತ್ಸಲ್ಯ ಪ್ರಶಂಸನೀಯವೇ ಸರಿ; ಆದರೆ ಬ್ರಿಟಿಶ ಮಂತ್ರಣಾಗಾರದಲ್ಲಿ ಮಂತ್ರಿಗಳೆಲ್ಲರೆದುರಿಗೆ ನಿಮ್ಮ ಮಿತ್ರನ ವಕೀಲಿ ನಡೆಸಲಿಕ್ಕೆ ನಾವು ನಿಮಗೆ ಸಮ್ಮತಿ ಕೊಡಲಾರೆವು; ಅಲ್ಲದೆ, ಸರಕಾರವೂ ನಿಮ್ಮೊ ಮಿತ್ರನ ಮಾತು ನಿಜವೆಂದು ತಿಳಿದು, ಅವನನ್ನು ದಂಡಿಸದೆ ಬಿಡಲಾರದು. ಅಪರಾಧಿ ಆತ್ಮಸಮರ್ಥನಕ್ಕಾಗಿ ಯಾವಾಗಲೂ ಸುಳ್ಳಾಡತಕ್ಕವನೇ. ಅದನ್ನು ನಿಜವೆಂದು ತಿಳಿದು ನಡೆಯಲಿಕ್ಕಾದೀತೇ? ಯಾವ ಮುಖ್ಯ ಆಧಾರ ನಮ್ಮ ಕೈಸೇರಿರುವದೋ, ಅದನ್ನು ಸುಳ್ಳೆಂದು ಹೇಳುವ ಯಾವ ಪ್ರಮಾಣಗಳಾದರೂ ಇವನಲ್ಲಿವೆಯೋ?

ಬಳಿಕ ಮತ್ತೊಬ್ಬ ಮಂತ್ರಿ:—ರೆನ್‌ಹ್ಯಾಮ, ನೀನು ನಿನ್ನೀ ಗುಪ್ತ ರಹಸ್ಯವನ್ನು ಯಾವಳೊಬ್ಬ ಹೆಂಗಸಿನೆದುರಿಗೆ ಉಸುರಿದ್ದೆಯಾ? ಎಂದು ಕೇಳಿದ.

ಆ ಪ್ರಶ್ನೆ ಕೇಳುತ್ತಲೇ ರೆನ್‌ಹ್ಯಾಮನ ಸೊಂಡೆಯೊಣಗಿ, ಅದು ಒತ್ತಿ ಕರಡಿನ ಕಾಗದದಂತೆ ತೀರ ನಿರ್ವಿಣ್ಣವಾಯಿತು; ಆದರೆ ಆತ ಪರಕ್ಷಣದಲ್ಲೇ ಆತ್ಮಸಂಯಮನ ಮಾಡಿಕೊಂಡು, ದೃಢಸ್ವರದಿಂದ:— ಇಲ್ಲ, ಎಂದಂದ.

ಆಗಿನ ಆತನ ಕ್ಷಣಿಕ ಮುಖಭಾವ ತೀಕ್ಷ್ಣ ದೃಷ್ಟಿಯು ಮೇಜರ ಜೋಸ್ಲಿನ್ನನ ಕಣ್ಣಿಗೆ ಕಾಣದಿರಲಿಲ್ಲ. ಆಗ ಆತ ಲಾರ್ಡ ಬೋರ್ಲರಿಗೆ ಹೇಳುತ್ತಾನೆ:—ಮೊದಲು ಈತನ ಲೇಖೀ ಜವಾಬು ತಕ್ಕೊಳ್ಳುವದೇ ವಿಹಿತ ವೆಂದು ನನಗನಿಸುತ್ತದೆ.

ಅದನ್ನು ಕೇಳಿ ರೆನ್‌ಹ್ಯಾಮು ನಿರ್ದಾಕ್ಷಿಣ್ಯದಿಂದ:—ನನ್ನ ಜವಾಬು ಮತ್ತೇನಿರಬೇಕು? ನಾನು ನನ್ನ ಕರ್ತವ್ಯಕರ್ಮಕ್ಕಾಗಿ ಕೈಲಾದಮಟ್ಟಿಗೆ ಪ್ರಯತ್ನಿಸಿರುತ್ತೇನೆ; ಹಾಗು ಅದನ್ನು ಪೂರೈಸಿಕೊಂಡು ಬಂದಿರುತ್ತೇನೆ. ಇದರ ಹೊರತು ನಾನು ಹೇಳತಕ್ಕದ್ದೇನೂ ಇರುವದಿಲ್ಲ.

ಆಗ ಪರರಾಷ್ಟ್ರ ಸಚಿವ ಎದ್ದು ನಿಂತು:—ರೆನ್‌ಹ್ಯಾಮು ತನ್ನ ಅಪ ರಾಧವನ್ನು ಒಪ್ಪಿಕೊಳ್ಳುವದಿಲ್ಲ; ಆದರೆ ಆಧಾರಗಳಿಲ್ಲದ ಈತನ ಮಾತು ನಂಬತಕ್ಕದ್ದಲ್ಲ. ತನ್ನ ವಿರುದ್ಧವಾಗಿರುವ ಪ್ರಮಾಣಗಳು ನಿಜವಲ್ಲೆಂಬ ದನ್ನು ತಿಳಿಸುವ ಯೋಗ್ಯ ಆಧಾರಗಳನ್ನು ಇವನು ತೋರಿಸುವಂತಿದ್ದರೆ ತೋರಿಸಲಿ; ಅಂದರೇ ಈತ ನಿರಪರಾಧಿ, ಹೀಗೆನ್ನಲು, ಉಳಿದ ಎಲ್ಲ ಮಂತ್ರಿ ಗಳೂ ಅದನ್ನೇ ಸಮರ್ಥಿಸಿದರು.

ರಾಬರ್ಟ ಬ್ಲೇಕ ಇದುವರೆಗೆ ತನ್ನ ಖುರ್ಚಿಯ ಮೇಲೆ ಸುಮ್ಮನೆ ಕುಳಿತು ಆ ಸಭಾಗೃಹದೊಳಗಿನ ಸಂಭಾಷಣಗಳನ್ನೆಲ್ಲ ಲಕ್ಷ್ಯಗೊಟ್ಟು ಕೇಳು ತ್ತಿದ್ದ. ಡ್ಯೂಕ ವ್ಯಾಕುಲಭಾವದಿಂದ ಅವನ ಕಡೆಗೆ ನೋಡಹತ್ತಿದ. ಆ ನೋಟದಿಂದ 'ಬ್ಲೇಕರೇ, ನನ್ನೀ ವಿಪದ್ಗ್ರಸ್ತ ಮಿತ್ರನನ್ನು ಪಾರುಮಾಡಿರಿ; ಇಲ್ಲದಿದ್ದರೆ ಇವನು ಗತಿಗಾಣನು!' ಎಂಬರ್ಥವು ವ್ಯಕ್ತವಾಗುವಂತಿತ್ತು. ಕಡೆಗೆ ಬ್ಲೇಕ ಎದ್ದು ನಿಂತು ಮುಖ್ಯ ಮಂತ್ರಿಗೆ ಹೇಳಿದನೇನಂದರೆ:—ತಾವು ನನ್ನ ಸಹಾಯ ಬೇಡಿದಾಗಲೇ ಈ ವಿಷಯ ಹೆಚ್ಚು ಗಹನವಾಗಿದೆಯೆಂದು ನಾನು ತಿಳಿದಿದ್ದೆ. ನಾನು ಈ ರಹಸ್ಯ ಭೇಧವನ್ನು ಮಾಡಬೇಕೆಂಬುದೇ ತಮ್ಮ ಆಶಯವಾಗಿದ್ದಿತು. ಯಾವ ತರುಣ ಭಯಂಕರ ಅಪರಾಧಿಯಾಗಿ ತಮ್ಮಗಳ ಸುವಿಚಾರದ ಮಾರ್ಗ ಪ್ರತೀಕ್ಷಿಸುತ್ತಿರುವನೋ, ಆತನ ಅಪ ರಾಧದ ಬಗ್ಗೆ ತಮ್ಮಲ್ಲಿ ಎಂಥ ಸ್ಪಷ್ಟವಾದ ಪ್ರಮಾಣವೇ ಏಕಿರಲೊಲ್ಲದೇಕೆ, ಆತನ ನಿಷ್ಕಲಂಕಿತವಾದ ಜೀವನ, ಸ್ವಕರ್ತವ್ಯ ಪರಾಯಣತೆ, ಸ್ವದೇಶ ಪ್ರೀತಿ ಇವೇ ಮೊದಲಾದ ಶ್ರೇಷ್ಠ ಗುಣಗಳನ್ನು ವಿಮರ್ಶಿಸಿದರೆ, ಈ ಗುಪ್ತ ರಹಸ್ಯಭೇದದ ವಿಷಯದಲ್ಲಿ ಯಾವುದೋ ಒಂದು ದುರ್ಭೇದ್ಯವಾದ ರಹಸ್ಯ

ವಿರುವದೆಂದು ನಿಮಗೆಲ್ಲರಿಗೂ ಕಂಡು ಬರಬಹುದಾಗಿದೆ. ಈ ಎಲ್ಲ ಕಾರಣ ಗಳ ಮೂಲಕ ಆ ರಹಸ್ಯವನ್ನು ತಿಳಿಯಲಿಕ್ಕೆ ಆಸ್ಪದ ದೊರಿಯುಬೇಕೆಂದು ನೀವು ರೆನ್‌ಹ್ಯಾಮುನಿಗೆ ಸದ್ಯಕ್ಕೆ ಬೇರೆ ಯಾವ ಶಿಕ್ಷೆಯುನ್ನೂ ವಿಧಿಸದೆ, ಅವನ ಮನೆಯಲ್ಲೇ ಅವನನ್ನು ನಜರಬಂದಿಯಾಗಿರಿಸಬೇಕು; ಅಂದರೆ ಅದ ರಿಂದ ನಿಮ್ಮ ಸುವಿಚಾರಕ್ಕೂ ಭಂಗಬರಲಾರದು.

'ಬ್ಲೇಕರ ಈ ಸೂಚನೆಗೆ ನನ್ನ ಸಂಪೂರ್ಣ ಸಮ್ಮತಿಯಿದೆ. ರೆನ್ ಹ್ಯಾಮರೇ, ನಮ್ಮ ಎರಡನೇ ಆಜ್ಞೆಯಾಗುವವರೆಗೆ ನೀವು ನಿಮ್ಮ ಮನೆ ಬಿಟ್ಟು ಚಲಿಸಕೂಡದು. ಈ ಬಗ್ಗೆ ನಿಮ್ಮ ಸಮ್ಮತಿಯಿದೆಯೋ?' ಎಂದು ಬೋರ್ಲರ ಕೇಳಲು,

'ನಾನು ಇದಕ್ಕೆ ಒಪ್ಪುತ್ತೇನೆ. ತಮ್ಮ ಅಪ್ಪಣೆಯ ಹೊರತು ಹೊರ ಹೊರಡುವದಿಲ್ಲ; ಆದರೆ ನನ್ನ ಕೆಲ ಖಾಸಗೀ ಕೆಲಸಗಳ ವ್ಯವಸ್ಥೆಗಾಗಿ ನನಗೆ ಇಪ್ಪತ್ನಾಲ್ಕು ತಾಸುಗಳ ಅವಧಿ ಬೇಕಾಗುವದು. ಈ ಅವಧಿಯಲ್ಲಿ ನಾನು ತಮ್ಮ ಆಜ್ಞೆಯುನ್ನುಲ್ಲಂಘಿಸಿ ನಡೆಯುವದಿಲ್ಲ.'

ಕಡೆಗೆ ಬೋರ್ಲರ ಆಜ್ಞೆಯ ಮೇರೆಗೆ ರೆನ್‌ಹ್ಯಾಮ ತನ್ನ ಮನೆಗೆ ನಡೆದ. ಒಬ್ಬ ಸಾರ್ಜಂಟನೂ ಒಬ್ಬ ಸಾದಾ ಪೋಷಾಕಿನ ಗುಪ್ತ ಪೋಲೀ ಸನೂ ಅವನನ್ನು ಹಿಂಬಾಲಿಸಿ ಹೋದರು. ಒಬ್ಬ ಸಭ್ಯ ಗೃಹಸ್ಥ ಮಾಳಿಗೆ ಗಳ ಮೇಲಿಂದಲೇ ನಡೆದು, ಅವನನ್ನನುಸರಿಸಿ ನಡೆದಿರುವದು ಎದುರಿಗಿನ ಕಿಡಕಿಯೊಳಗಿಂದ ಬ್ಲೇಕನ ತೀಕ್ಷ್ಣದೃಷ್ಟಿಗೆ ಕಾಣಿಸಿತು. ಆ ಸಭ್ಯಗೃಹಸ್ಥ ನನ್ನು ಹ್ಯಾಮನ್ ಆರ್ಟನ್ನನ ಗುಪ್ತ ಹೇರನೆಂದೇ ಆತ ಊಹಿಸಿದ. ಆರ್ಟ ನ್ನನಿಗೆ ಇಲ್ಲಿ ನಡೆದ ಸಂಗತಿ ತಿಳಿಸಲಿಕ್ಕೆಂದೇ ಆತ ನಡೆದಿರುವನೆಂದು ತಿಳಿದ ಬ್ಲೇಕ ಕೂಡಲೆ ಸ್ಮಿತ್ಥನನ್ನು ಕರೆದು, ಕಿಟಕಿಯೊಳಗಿನ ಆ ಮನುಷ್ಯನ ಕಡೆಗೆ ಬೊಟ್ಟು ಮಾಡಿ ತೋರಿಸಿ, ಅವನನ್ನನುಸರಿಸಿ ಹೋಗಲಿಕ್ಕೆ ಹೇಳಿದ.



## ೧೬ನೇ ತೆರೆ:—ಬೋರ್ಲರ ಮಂತ್ರಣಾಗಾರದಲ್ಲಿ.

ಯಾವ ದಿವಸ ಕ್ಯಾಪ್ಟನ್ ರೆನ್‌ಹ್ಯಾಮ ವಿಶ್ವಾಸಘಾತದ ಪ್ರಕರಣ ದಲ್ಲಿ ತನ್ನ ಮನೆಯಲ್ಲೇ ನಜರ ಬಂದಿಯಾದನೋ, ಅದೇ ದಿನ ಮಧ್ಯರಾತ್ರಿ ಯಲ್ಲಿ ಬ್ಲೇಕ ಲಾರ್ಡ ಬೋರ್ಲರ ಮನೆಗೆ ಹೋದ. ಲಾರ್ಡ ಬೋರ್ಲರು ತಮ್ಮ ಮನೆಯ ಮಂತ್ರಣಾಗಾರದ ಸುತ್ತಲೂ ಸಂತತವಾದ ಪಹರೆಯನ್ನಿ ರಿಸಿ, ತಮ್ಮಲ್ಲಿಯ ಗುಪ್ತರಹಸ್ಯ ಸ್ಫೋಟನಕ್ಕೆ ತಡೆಯನ್ನುಂಟು ಮಾಡಲೆತ್ನಿ ಸಿದ್ದರೂ, ಅದು ಕೊಂಚವೂ ಸಾಧಿಸಿರಲಿಲ್ಲ. ಬ್ಲೇಕನಾದರೂ ಇಂದು ಅದೇ ಕೆಲಸಕ್ಕಾಗಿ ಟೊಂಕಕಟ್ಟಿದ್ದು, ಅದನ್ನು ಸಾಧಿಸದ ಹೊರತು ಮನೆಗೆ ಹಿಂದಿ ರುಗಲಿಕ್ಕಿಲ್ಲೆಂದೇ ಸಂಕಲ್ಪ ಮಾಡಿದ್ದ. ಈ ಭಯಂಕರ ಗೂಢವನ್ನು ಬೈಲಿಗೆ ಇಡದ ಹೊರತು, ರೆನ್‌ಹ್ಯಾಮನ ಮೇಲಿನ ಕಲಂಕ ಕ್ಷಾಲನವಾಗದೆಂದು ಆತ ನಿಶ್ಚಯಿಸಿಕೊಂಡಿದ್ದ.

ಬ್ಲೇಕ ನಡುಮನೆಗೆ ಹೋದವನೇ ಲೇಡೀ ಎಲೀಸೆಯನ್ನು ಕಂಡ. ಆವಳು ಉತ್ಸುಕತೆಯಿಂದ:—ಬ್ಲೇಕರೇ, ಭಾಯೋಲೆಯ ಪತ್ತೆ ಹತ್ತಿತೆ? ಎಂದು ಕೇಳಿದಳು.

ಇಲ್ಲೆಂಬದನ್ನು ಸೂಚಿಸುವದಕ್ಕಾಗಿ ಗೋಣು ಅಲ್ಲಾಡಿಸಿ, ಕುಂಠಿತ ವಾಣಿಯಿಂದ ಬ್ಲೇಕ:—ಇಲ್ಲ; ಆಕೆಯ ಪತ್ತೆ ಯಾವ ಬಗೆಯಿಂದಲೂ ಹತ್ತಲೊಲ್ಲದು. ಆಕೆಯ ಮಾಯದ ರಹಸ್ಯ ಬಹು ಅದ್ಭುತವೂ ವಿಸ್ಮಯ ಕರವೂ ಆಗಿದೆ. ಆಕೆ ಯಾವ ಬಾಡಿಗೆಯ ಮೋಟರ ಕಾರಿನಲ್ಲಿ ನಿಮ್ಮ ಮನೆಯಿಂದ ಹೊರಟಿದ್ದಳೋ, ಆ ಕಾರಿನ ನಂಬರು ಸಿಕ್ಕಿದೆ; ಆದರೆ ಅಂದಿ ನಿಂದ ಆ ನಂಬರಿನ ಕಾರು ಮತ್ತೆ ಬಾಡಿಗೆಗೇ ಹೊರಟಿಲ್ಲ. ಅದರ ಒಡೆ ಯನು ಅಂದೇ ಪೂರ್ವ ರಾತ್ರಿಯಲ್ಲಿ ಬಾಡಿಗೆಯ ವಸೂಲಿಯ ನೆವದಿಂದ ಒಬ್ಬ ಪ್ರಯಾಣಿಕನ ಕೊಲೆಗೈದು ಜೇಲಿಗೆ ಹೋಗಿರುತ್ತಾನೆ. ಆ ಕಾರಿನ ನಂಬರು ತಮ್ಮ ಗಾಡಿಗೆ ಹಚ್ಚಿಕೊಂಡು, ನಿಮ್ಮ ಸಖಿಯಾದ ಭಾಯೋಲೆ ಯನ್ನು ಠಕ್ಕರು ಓಡಿಸಿಕೊಂಡು ಹೋಗಿರಬಹುದಾಗಿದೆ. ಆವರು ಯಾವ ಉದ್ದೇಶದಿಂದ ಈ ದುಷ್ಟ ಕೆಲಸಕ್ಕೆ ಪ್ರವೃತ್ತರಾಗಿರುತ್ತಾರೆಂಬದನ್ನು ಅನು ಮಾನಿಸುವದು ಆಶಕ್ಯವಾಗಿದೆ. ಅವರ ಪತ್ತೆ ಹತ್ತದ ಹೊರತು, ಅವರು

ಯಾವ ದುರುದ್ದೇಶದಿಂದ ಛಾಯೋಲೆಯನ್ನೆಬ್ಬಿಸಿರುತ್ತಾರೆಂಬದು ತಿಳಿಯುವ ಸಂಭವವಿಲ್ಲ.

'ಹಾಗಾದರೆ ತಮ್ಮಿಂದ ಛಾಯೋಲೆಯನ್ನು ಪತ್ತೆ ಹಚ್ಚುವದಾಗುವದಿಲ್ಲೆಂದಂತಾಯಿತೇ?'

'ಲೇಡಿಯವರೇ, ನಾನು ಸರ್ವಜ್ಞನಾಗಿದ್ದರೆ ನಿಮ್ಮ ಪ್ರಶ್ನೆಗೆ ತಕ್ಕ ಉತ್ತರ ಕೊಡಬಹುದಾಗಿತ್ತು. ನಾನು ಆಕೆಯ ಪತ್ತೆಯ ವಿಚಾರದಲ್ಲಿ ಎಳ್ಳಷ್ಟೂ ಮನಸರಿ ಮಾಡುವದಿಲ್ಲೆಂಬದನ್ನಷ್ಟು ಮಾತ್ರ ತಿಳಿಸಬಲ್ಲೆ.'

ಬಳಿಕ ಆತ ಬೋರ್ಲರಿಗೆ ಭೆಟ್ಟಿಯಾದ; ಹಾಗು ಅವರ ಮಂತ್ರಣಾಗಾರವನ್ನು ಬಹು ಸೂಕ್ಷ್ಮವಾಗಿ ಪರೀಕ್ಷಿಸಿಕೊಳ್ಳುವ ಬಗ್ಗೆ ಅನುಮತಿ ಪಡೆದ. ಆ ಮೇಲೆ ಆತ ಆ ಮಂತ್ರಣಾಗಾರವನ್ನು ಪ್ರವೇಶಿಸಿದ. ಆತ ಅಲ್ಲಿಯ ಮೇಜು, ಖುರ್ಚಿ, ಗೋಡೆ, ಮಾಡ, ಕಪಾಟು, ಕಿಟಕಿ, ಬಾಗಿಲು, ಚಿಲಕ, ಕೊಂಡಿ ಮುಂತಾದವುಗಳನ್ನು ಪರೀಕ್ಷಿಸಿದನಲ್ಲದೆ, ಆ ಕೋಣೆಯ ನೆಲ-ಮಾಳಿಗೆಗಳನ್ನೂ ಪರೀಕ್ಷಿಸಿದ. ಏನು ಮಾಡಿದರೂ ಅಲ್ಲಿಯ 'ಗುಪ್ತರಹಸ್ಯ'ಗಳು ಹೇಗೆ ಪರಿಸ್ಫೋಟಗೊಳ್ಳುತ್ತವೆಂಬದರ ಸೂತ್ರ ಅವನ ಕೈಸೇರಲಿಲ್ಲ. ಆತ ಮತ್ತೆ ೨-೩ ತಾಸುಗಳ ವರೆಗೆ ಆ ಮನೆಯನ್ನು ಒಂದೇಸವನೆ ಶೋಧಿಸುತ್ತಲೇ ಇದ್ದ. ಕಡೆಗೆ ಆತ ಮಗ್ಗಲಿನ ಕೋಣೆಗೆ ಹೋಗಿ, ಒಂದು ಆರಾಮ ಕುರ್ಚಿಯ ಮೇಲೆ ಬಿದ್ದುಕೊಂಡು ದೀರ್ಘವಾದ ವಿಚಾರದಲ್ಲಿ ಮಗ್ನನಾದ. ಅಲ್ಲಿ ಹಾಗೆ ಎಷ್ಟೋ ಹೊತ್ತಿನ ವರೆಗೆ ಆಲೋಚಿಸಿದ ಮೇಲೆ ಅವನಿಗೆ ಯಾವದೋ ಒಂದು ಮಾತಿನ ನೆನಪಾಗಲು, ಆತ ತಟ್ಟನೆ ಎದ್ದು ನಿಂತ; ಹಾಗು ಟೆಲಿಫೋನದ ಬಳಿಗೆ ಹೋಗಿ, ತನ್ನ ಮನೆಯಲ್ಲಿದ್ದ ಸ್ಮಿತ್ಥನಿಗೆ ತೀವ್ರವಾಗಿ ಬರಹೇಳಿದ. ಸ್ಮಿತ್ಥ ಮನೆಯಲ್ಲಿ ಎಚ್ಚತ್ತಿದ್ದು, ಬ್ಲೇಕನ ದಾರಿಯನ್ನೇ ಕಾಯುತ್ತಿದ್ದ. ಕೂಡಲೆ ಆತ ಬ್ಲೇಕನ ಆಜ್ಞೆಯ ಮೇರೆಗೆ ಟಪುನಾಯಿ ಸಹಿತವಾಗಿ ಬೋರ್ಲರ ಮನೆಗೆ ಹೊರಟ. ಬರುವಾಗ ದಾರಿಯೊಳಗಿನ ಒಂದು ಅಮೇರಿಕನ್ ಅಂಗಡಿಯೊಳಗಿಂದ (ತಂತಿಯಿಲ್ಲದ ಟೆಲಿಗ್ರಾಫಿನ) ರೆಡಿಯೋ ಯಂತ್ರವನ್ನು ಬ್ಲೇಕನ ಅಪ್ಪಣೆಯ ಮೇರೆಗೆ ಕೊಂಡುಕೊಂಡು ಬಂದ. ಆತ ಹೆಚ್ಚು ದುಡ್ಡು ಕೊಟ್ಟು ಹೊಸ ಯಂತ್ರವನ್ನು ತರದೆ, ಅಲ್ಪ ಧನಕ್ಕೆ ಸಿಕ್ಕ ಒಂದು ವಾಯರ್ಲೆಸ್ಸ ರಿಸೀವರನ್ನು ಕೊಂಡುಕೊಂಡಿದ್ದ. ಮನೆಯಿಂದ ಹೊರಟ ಹತ್ತು-ಹದಿನೈದು ನಿಮಿಷ

ಗಳಲ್ಲೇ ಸ್ಮಿತ್ಥ ನಾಯಿಯೊಡನೆ ಬೋರ್ಲರ ಮನೆಗೆ ತಲುಪಿ, ಬ್ಲೇಕನ ಎದು ರಿಗೆ ಹೋಗಿ ನಿಂತುಕೊಂಡ.

ಕೂಡಲೆ ಬ್ಲೇಕ ಸ್ಮಿತ್ಥನಿಗೆ ಹೇಳುತ್ತಾನೆ:—ಸ್ಮಿತ್ಥಾ, ಈ ಕೋಣೆಯ ಲ್ಲಿಲ್ಲೋ ತಂತಿವಿರಹಿತ ಟೆಲಿಗ್ರಾಫಿನ (ರೆಡಿಯೋ) ಯಂತ್ರ ಗೌಪ್ಯವಾಗಿರಿ ಸಿರುವಂತೆ ನನಗನಿಸಹತ್ತಿದೆ.

'ಹೀಗೆಯೇ ಇರಬಹುದೆಂದು ನನಗೆ ಎಷ್ಟೋ ದಿನಗಳ ಹಿಂದೆಯೇ ಅನುಮಾನವಾಗಿದೆ; ಆದರೆ ಆಗಿನ ನನ್ನ ಆ ಅನುಮಾನದ ಕಡೆಗೆ ತಾವು ಕಿವಿಗೊಟ್ಟಿರಲಿಲ್ಲ!'

'ಯಾರೊಬ್ಬರ ಧ್ವನಿ ಸಹಜವಾಗಿ ಕೇಳಬರುವಂತಹ ದೊಡ್ಡ ರಿಸೀ ವ್ಹರವನ್ನು ಜೋರ್ಲರ ಈ ಮಂತ್ರಣಾಗಾರದಲ್ಲಾಗಲಿ ಲಾಬ್ರರಿಯಲ್ಲಾ ಗಲಿ ಇಟ್ಟಿದ್ದರೆ ಅದು ಇಷ್ಟೊತ್ತಿಗೆ ನಮ್ಮ ಕಣ್ಣಿಗೆ ಕಂಡೇ ಕಾಣಿಸುತ್ತಿತ್ತು; ಆದರೆ ಈ ಎರಡೂ ಕಡೆಗೆ ಅಂಥ ರಿಸೀವ್ಹರು ಅದೆಲ್ಲಿಯೂ ಕಂಡು ಬರುವ ದಿಲ್ಲಿ. ಅಂತೆಯೇ ನಾನು ಆಗ ನಿನ್ನ ಆ ಅನುಮಾನವನ್ನು ಅಲ್ಲಗಳೆದೆ.'

'ಈಗೇನು ಮಾಡಬೇಕೆಂದಿರುತ್ತೀರಿ? ಟಿಪುವನ್ನು ಕರೆತರಲಿಕ್ಕೆ ತಿಳಿ ಸಿದ ಕಾರಣವೇನು?'

ಬ್ಲೇಕ ಸ್ಮಿತ್ಥನ ಆ ಪ್ರಶ್ನೆಗೇನೂ ಉತ್ತರಕೊಡದೆ, ಆತನ ಕೈಯೊಳ ಗಿನ ಆ ವಾಯರಲೆಸ್ಸ ರಿಸೀವ್ಹರಿನ ಪ್ಯಾಕು ತಕ್ಕೊಂಡು, ಅದನ್ನು ಬಿಚ್ಚಿ, ಅದರೊಳಗಿನದೊಂದು ಸೂಕ್ಷ್ಮಯಂತ್ರವನ್ನು ಟಿಪುವಿನ ಮೂಗಿನ ಬಳಿಗೆ ಹಿಡಿದ. ಟಿಪುವು ೨-೩ ಸಾರೆ ಒಳ್ಳೇ ಒತ್ತರದಿಂದ ಅದರ ವಾಸನೆ ತಕ್ಕೊಂ ಡಿತು. ಆ ಮೇಲೆ ಎರಡೂ ಕಿವಿಗಳನ್ನು ನಿಗರಿಸಿಕೊಂಡು, ಆಗ್ರಹಪೂರ್ಣ ದೃಷ್ಟಿಯಿಂದ ಬ್ಲೇಕನ ಕಡೆಗೆ ನೋಡಿತು.

ಆದರ ಮುಖಭಾವವನ್ನು ಕಂಡು ಸ್ಮಿತ್ಥ ಅನ್ನುತ್ತಾನೆ:— ಒಡೆ ಯರೇ, ಟಿಪುವಿಗೆ ತಮ್ಮ ಉದ್ದೇಶ ತಿಳಿದು ಹೋಗಿದೆ.

ನಾಯಿ ಗೋಣನ್ನೆತ್ತರಿಸಿ ವಾಸನೆ ತಕ್ಕೊಂಡು, ನಾಲ್ಕೂ ದಿಕ್ಕಿಗೆ ನೋಡಹತ್ತಿತು. ಅದನ್ನು ಕಂಡು ಬ್ಲೇಕ ಅದನ್ನು ಸಂಗಡ ಕರೆಕೊಂಡು ಆ ಮಂತ್ರಣಾಗಾರವನ್ನು ಮತ್ತೆ ಪ್ರವೇಶಿಸಿದ. ಟಿಪು ಅಲ್ಲಿ ನಾಲ್ಕಾರು ಸಾರೆ ಇತ್ತಿಂದತ್ತ ಅತ್ತಿಂದಿತ್ತ ಓಡಾಡಿ 'ಭೊಂ ಭೊಂ' ಎಂದು ಒದರಹತ್ತಿತು. ಆ ಮೇಲೆ ಅದು ಒಮ್ಮೆಲೆ ಟಣ್ಣೆಂದು ಜಿಗಿದು, ಆ ಕೋಣೆಯೊಳಗಿನ ಆ

ದುಂಡು ಮೇಜಿನ ಕೆಳಗಡೆಗೆ ಹೋಗಿ, ಮತ್ತೆ 'ಭೊಂ ಭೊಂ' ಎಂದು ಒದರಿ ಕೊಳ್ಳತೊಡಗಿತು.

'ಒಡೆಯರೇ, ಈ ದುಂಡು ಮೇಜಿನ ಕೆಳಗಡೆಗೆ ನಮ್ಮ ಟಿಪ್ಪು ಏನ ನ್ನೋ ಪತ್ತೆ ಹಚ್ಚುವದರಲ್ಲಿದೆ' ಎಂದು ಸ್ಮಿತ್ಥ ನುಡಿಯಲು,

ಬ್ಲೇಕ ಸ್ಮಿತ್ಥನಿಗೆ ಸುಮ್ಮನಿರ ಹೇಳಿ, ಕೆಳಗೆ ಬೊಗ್ಗಿ, ಆ ದುಂಡು ಮೇಜಿನ ಕೆಳಗಡೆಯ ಭಾಗವನ್ನು ನಿರೀಕ್ಷಿಸಲಾರಂಭಿಸಿದ. ಕೆಲ ನಿಮಿಷ ಗಳ ಪರೀಕ್ಷಣದ ನಂತರ ಆತ ಅಲ್ಲಿಂದ ಸರಿದು, ಗೋಣಅನ್ನಲ್ಲಾಡಿಸುತ್ತ:— ಪ್ರಯತ್ನವೆಲ್ಲ ವ್ಯರ್ಥವಾಯಿತು. ಇಲ್ಲಿ ಏನೂ ಕಾಣಬರುವದಿಲ್ಲ. ಈ ಮೇಜಿನ ಕೆಳಗಡೆಗೇನೂ ಇರುವದಿಲ್ಲ. ಕೇವಲ ನಮ್ಮ ಟಿಪ್ಪ್ಯಾನ ಒದರು ವಿಕೆಯೊಂದೇ ಇಲ್ಲಿ ಕೇಳಬರುತ್ತಿದೆ' ಹೀಗೆಂದು ಆತ ಬಾಯಿಂದ ಅನ್ನುತ್ತಿ ದ್ದರೂ, ಆ ನಾಯಿಯನ್ನು ಮಾತ್ರ ಒಳ್ಳೇ ಬಲಪೂರ್ವಕವಾಗಿ ಅಲ್ಲಿಂದ ಹಿಂದಕ್ಕೆ ಜಗ್ಗಿಕೊಳ್ಳುವದರಲ್ಲಿ ನಿಮಗ್ನನಾಗಿದ್ದ ನಂತರ ಬ್ಲೇಕ ನಡುಮನೆಗೆ ತೆರಳಿದ. ಸ್ಮಿತ್ಥನೂ ಟಿಪ್ಪುವಿನೊಡನೆ ಅವನ ಹಿಂದಿಂದೆ ನಡೆದ.

'ಟಿಪ್ಪು ಏನನ್ನೂ ಪತ್ತೆ ಹಚ್ಚಲಿಲ್ಲೆಂಬ ತಮ್ಮ ಮಾತನ್ನು ನಾನು ನಂಬಲಾರೆ. ಒಡೆಯರೇ, ಆ ದುಂಡುಮೇಜಿನ ಕೆಳಗಡೆಗೇನಿದ್ದಿತೆಂಬದನ್ನು ಹೇಳಿರಿ' ಎಂದು ಸ್ಮಿತ್ಥ ನಡು ಮನೆಯಲ್ಲಿ ಪ್ರವೇಶಿಸಿದೊಡನೆಯೇ ಬ್ಲೇಕ ನಿಗೆ ಕೇಳಿದ.

'ಅಲ್ಲಿಯ ದೃಶ್ಯ ಅತ್ಯದ್ಭುತವಾದುದು. ಆ ಟೇಬಲ್ಲಿನ ಕೆಳಗಡೆಯ ಹಲಗೆಗೆ ಬಹು ದೊಡ್ಡದಾದ ಟೆಲಿಫೋನಿನ ರಿಸೀವ್ಹರು ಜೋಡಿಸಲ್ಪಟ್ಟಿರು ತ್ತದೆ! ಆ ಯಂತ್ರ ಆ ಹಲಗೆಯ ಆಕಾರ-ಬಣ್ಣಗಳದೇ ಆಗಿದ್ದು, ಅದನ್ನು ಅಲ್ಲಿ ಕೌಶಲ್ಯದಿಂದ ಜೋಡಿಸಿರುತ್ತಾರೆ.'

'ತಂತಿಯಿಲ್ಲದ ಟೆಲಿಫೋನನ್ನು ಜೋಡಿಸಲಿಕ್ಕೂ ತಂತಿಗಳ ಸಹಾಯ ಬೇಕೇಬೇಕಲ್ಲವೆ? ಆ ತಂತಿಗಳು ಅಲ್ಲೆಲ್ಲಿವೆ?'

'ಟೇಬಲ್ಲಿನ ಕಾಲುಗಳೊಳಗಿಂದ ಹಾಯಿಸಿ, ನೆಲಮಾಳಿಗೆಯಿಂದ ಆ ತಂತಿಗಳನ್ನೊಯ್ದಿರಬಹುದಾಗಿ ತೋರುತ್ತದೆ. ಇನ್ನು ಅವುಗಳ ಬಗ್ಗೆ ಶೋಧ ಮಾಡಿದರೆ ನಿಜ ಸ್ಥಿತಿ ತಾನೇ ಕಂಡುಬರುವದು. ಈ ಟೆಲಿಫೋನಿನ ತಂತಿಯ ಸಂಬಂಧ ಯಾವ ಮನೆಗೆ ಜೋಡಿಸಲ್ಪಟ್ಟಿದೆಯೆಂಬದನ್ನು ನಾವು ಎಲ್ಲಕ್ಕೂ ಮೊದಲು ಪತ್ತೆ ಹಚ್ಚಬೇಕು. ಎಷ್ಟೋ ದಿನಗಳ ತರುವಾಯ

ಇಂದು ನಮಗೀ ರಹಸ್ಯಭೇದದ ಸೂತ್ರ ಕೈಸೇರಿದೆ. ಇನ್ನು ನಾವು ನಮ್ಮ ಮುಂದಿನ ಕೆಲಸಕ್ಕೆ ಪ್ರಾರಂಭಿಸೋಣ. ಹ್ಯಾಮನ್ ಆರ್ಟನ್ನನೇ ಆ ದಸ್ಯು ಪಾಳಯದ ನಾಯಕನೆಂಬ ಬಗ್ಗೆ ಇನ್ನಾವ ಸಂದೇಹವೂ ಇರುವದಿಲ್ಲ. ಅವ ನನ್ನು ಒಮ್ಮೆಲೆ ಸೆರೆಹಿಡಿಯಲಿಕ್ಕಾಗದಿದ್ದರೆ, ಆತನ ಅಪರಾಧ ಸಾಧಾರವಾಗಿ ತಿಳಿಸುವದು ಕಠಿಣವಾದೀತು; ಅದರಿಂದ ನಮ್ಮ ಪ್ರಯತ್ನಗಳೆಲ್ಲವೂ ಮಣ್ಣುಗೂಡಿ ಹೋದಾವು. ಇನ್ನು ನೀನು ಟಿಪುವನ್ನು ಮನೆಗೊಯ್ದು ಬಿಟ್ಟು, ಅರ್ಧ ಗಂಟೆಯೊಳಗಾಗಿ ಮಾರ್ಬಲ್ಲ ರ್‍ಯಾಕಿನ ಬಳಿಗೆ ಬಂದು ನನ್ನನ್ನು ಕಾಣು.'

ಹೀಗೆಂದು ಹೇಳಿ, ಬ್ಲೇಕ ಟಿಪುವಿನೊಡನೆ ಸ್ಮಿತ್ಹನನ್ನು ಕಳಿಸಿ ಕೊಟ್ಟು, ಬೋರ್ಲರ ಲಾಯಬ್ರರಿ ಪ್ರವೇಶಿಸಿದ. ಬೋರ್ಲರೂ ಎಲೀ ಸೆಯೂ ಅವನ ದಾರೀ ಕಾಯುತ್ತ ಅಲ್ಲಿ ಕುಳಿತೇ ಇದ್ದರು.

ಬ್ಲೇಕ ಈಗ ಯಾವ ಹೊಸ ಸಂಗತಿಯನ್ನೂ ತಿಳಿಸಲಾರನೆಂದು ಬೋರ್ಲನ ನಿರ್ಧರವಾಗಿತ್ತು. ಆದರೂ ಆತ ಸಹಜವಾಗಿ ಪ್ರಶ್ನೆ ಮಾಡಿ ದ್ದೇನಂದರೆ:-ಬ್ಲೇಕರೇ, ರಹಸ್ಯದ ಸೂತ್ರವೇನಾದರೂ ಕೈಸೇರಿತೋ? ಇಲ್ಲವೆ ಇದುವರೆಗೆ ನಿದ್ದೆಗೆಟ್ಟದ್ದರಿಂದ ಕಣ್ಣೆದುರಿಗೆ ಭೂತ-ಪಿಶಾಚಿಗಳ ಕಾಲ್ಪನಿಕ ಚಿತ್ರಗಳು ಕುಣಿಯಹತ್ತಿದವೊ?

'ಈಗ ನಾನು ತಮಗೆ ಯಾವ ಹೊಸ ಸಂಗತಿಯನ್ನೂ ತಿಳಿಸಲಾರದವ ನಾಗಿದ್ದರೂ, ಇನ್ನು ಮೇಲೆ ನೀವು ನಿಮ್ಮ ಮಂತ್ರಣಾಗಾರದಲ್ಲಿ ಅಥವಾ ಲಾಯಬ್ರರಿಯಲ್ಲಿ ಕುಳಿತು ಮಾತಾಡಿದ ಯಾವ ಸಂಗತಿಯೂ ಪರಿಸ್ಫೋಟ ವಾಗಲಾರದೆಂದು ಎದೆತಟ್ಟಿ ಹೇಳಬಲ್ಲೆನು. ಇದರ ಕಾರಣವನ್ನು ನಿಮಗೆ ಆ ಮೇಲೆ ತಿಳಿಸುತ್ತೇನೆ. ಆ ಒಳಗಾಗಿ ನಾನು ನಿಮಗೆ ಕೆಲ ಪ್ರಶ್ನೆಗಳನ್ನು ಕೇಳುವವನಿದ್ದೇನೆ. ನನ್ನ ಕರ್ತವ್ಯಪಾಲನಕ್ಕಾಗಿಯೇ ನಾನು ಅವುಗಳನ್ನು ನಿಮ್ಮಿಂದ ಕೇಳಿಕೊಳ್ಳಬೇಕಾಗಿರುತ್ತದೆ.

'ನಿಮಗೆ ಬೇಕಾದ್ದನ್ನು ಕೇಳಿಕೊಳ್ಳಿರಿ.'

'ನೀವು ಹಿಂದಕ್ಕೆ ಆರು ತಿಂಗಳ ರಜೆ ಪಡೆಕೊಂಡು ಫ್ರಾನ್ಸಿಗೆ ಹವೆ ಬದಲಿಸಲಿಕ್ಕೆಂದು ಹೋದಾಗ, ಈ ಮನೆಯನ್ನು ನೀವು ಹ್ಯಾಮನ್ ಆರ್ಟ ನ್ನನ ವಾಸಕ್ಕೆ ಬಿಟ್ಟುಕೊಟ್ಟದ್ದಿರಾ?'

'ಅಹುದು; ಅದು ಎಲ್ಲರಿಗೂ ಗೊತ್ತಿದ್ದ ಮಾತೇ ಆಗಿದೆ.'

'ಇದು ನಿಜ; ಆದರೆ ಹ್ಯಾಮನ್ ಆರ್ಟನ್ನ ಸಚ್ಚರಿತ್ರನೂ ಸನ್ಮಾನ್ಯನೂ ಎಂಬ ಬಗ್ಗೆ ಸಾಕಷ್ಟು ಖಾತ್ರಿಮಾಡಿಕೊಳ್ಳದೆ, ಆತನಂಥ ಅಪರಿಚಿತ ವಿದೇಶಿಗನಿಗೆ ನೀವು ನಿಮ್ಮ ಈ ಮನೆ ಕೊಟ್ಟ ಕಾರಣವೇನು?'

'ನಾನು ಅವೆಲ್ಲವುಗಳನ್ನು ತಿಳಿಯದೆ, ಆತನಿಗೆ ಈ ಮನೆ ಕೊಟ್ಟಿದ್ದೆನೇನು? ವಾಶಿಂಗ್ಟನ್ನಿನಲ್ಲಿರುವ ಬ್ರಿಟಿಶ ವಕೀಲನ ಸಹಕಾರಿ ನನ್ನ ಆಪ್ತ. ಆತ ಆರ್ಟನ್ನನ ಸಲುವಾಗಿ ತನ್ನ ಸಿಫಾರಸ ಪತ್ರ ನನ್ನ ಕಡೆಗೆ ಕಳಿಸಿಕೊಟ್ಟಿದ್ದ. ಅದೇ ಪತ್ರದಿಂದಲೇ ಮಾರ್ಕ್ವಿಸ್ ಹ್ಯಾಮನ್ ಆರ್ಟನ್ನನ ಸಚ್ಚರಿತ್ರ, ಮಾನ-ಸಂಭ್ರಮ, ಐಶ್ವರ್ಯ ಮುಂತಾದವುಗಳನ್ನು ನಾನು ತಿಳಿದದ್ದು. ಆತನಂಥ ಸನ್ಮಾನ್ಯನಿಗೆ ಕೆಲ ದಿನಗಳ ಮಟ್ಟಿಗೆ ನಮ್ಮ ಮನೆ ಬಿಟ್ಟುಕೊಡಲಿಕ್ಕೆ ನನಗೆ ಎಳ್ಳಷ್ಟೂ ಅನುಮಾನವಾಗಲಿಲ್ಲ.'

'ನೀವು ಊರಿಗೆ ಬಂದು ನಿಮ್ಮ ಮನೆ ಸೇರಿದಾಗ, ಆತ ಎಲ್ಲಿ ವಾಸಿಸುತ್ತಾನೆಂಬ ಬಗ್ಗೆ ಗೊತ್ತುಮಾಡಿಕೊಂಡಿರಬಹುದಲ್ಲವೆ?'

'ಗೊತ್ತುಹಚ್ಚಿಕೊಂಡೆ. ೨೦ನೇ ನಂಬರಿನ ಕೋಲಾನ ಸ್ಟ್ರೀಟಿನೊಳಗಿನ ಒಂದು ಮನೆಯಲ್ಲಿ ವಾಸಿಸಹತ್ತಿದ್ದ.'

'ತಮಗೆ ನವಕೋಟಿ ನಾರಾಯಣನಾದ ಹ್ಯಾಮನ್ ಆರ್ಟನ್ನನ ಈಗಿನ ವಾಸಸ್ಥಳ ಗೊತ್ತಿಲ್ಲವೆಂಬಂತೆ ತೋರುತ್ತದೆ. ಒಂದು ವರ್ಷದಿಂದಲೂ ಆತ ಕ್ಯಾಲಿಫೋರ್ನಿಯಾದೊಳಗಿನ ಒಂದು ಬಿನ್ ಸರಕಾರೀ ಸ್ವಾಸ್ಥ್ಯನಿಲಯದಲ್ಲಿ ವಾಸಿಸುತ್ತಿರುತ್ತಾನೆ.'

ಅದನ್ನು ಕೇಳಿ ಲಾರ್ಡ ಬೋರ್ಲ ವಿಸ್ಮಯಚಕಿತನಾಗಿ:—ಹಾಗಾದರೆ ಈತ ವೇಷಧಾರಿ ಅರ್ಟನ್ನನೇ?

'ಒಂದೇ ವ್ಯಕ್ತಿ ಬೇರೆ ಬೇರೆ ದೇಹಗಳನ್ನು ಧರಿಸಿ, ಬೇರೆ ಬೇರೆಡೆಗಳಲ್ಲಿ ವಾಸವಾಗಿರುವದು ಶಕ್ಯವೋ-ಅಶಕ್ಯವೋ ಎಂಬದನ್ನು ತಾವೇ ಹೇಳಬೇಕು. ನಿಜವಾದ ಆರ್ಟನ್ನನಿಗೆ ಆಕಸ್ಮಿಕವಾಗಿ ಹುಚ್ಚು ಹಿಡಿಯಿತು. ಆತನ ಡಾಕ್ಟರರು ಅವನಿಗೆ ದೀರ್ಘಕಾಲದವರೆಗೆ ವಿಶ್ರಾಂತಿ ಪಡೆಯಲಿಕ್ಕೆ ತಿಳಿಸಿರುತ್ತಾರೆ; ಆದರೆ ಆತ ಹಾಗೆ ಹುಚ್ಚನೂ ಕರ್ತವ್ಯ ವಿಮೂಢನೂ ಆಗಿರುವನೆಂಬ ಸಂಗತಿ ಪ್ರಕಟವಾದರೆ, ಆತನ ಪ್ರಚಂಡ ಕಾರಭಾರ ಕೆಟ್ಟು ಹೋಗುವದೆಂದೂ, ಕೈಕೆಳಗಿನ ಬದ್‌ಮಾಷ ಜನರು ತಿರುಗಿ ಬೀಳುವರೆಂದೂ, ಆತನ ಕೆಲ ಜನ ಆತ್ಮೀಯರು ಆತನನ್ನು ಛದ್ಮ ವೇಷದಿಂದ

ಕ್ಯಾಲಿಫೋರ್ನಿಯಾಕ್ಕೆ ಒಯ್ದು ಒಂದು ಹುಚ್ಚರ ಆಸ್ಪತ್ರೆಯಲ್ಲಿ ಬಂಧಿಸಿರುತ್ತಾರೆ. ಈ ಸಂಯೋಗವನ್ನು ಅಮೇರಿಕೆಯ ಪ್ರಖ್ಯಾತ ಪುಂಡನಾದ ಡ್ಯಾಮಿಲ್ಟನ್ನ ಡೆಕ್ ಉರ್ಫ ಶಿಕಾಗೋ ಹ್ಯಾಮನೆಂಬವನು ಸಾಧಿಸಿ, ತನಗೆ ಆ ನವಕೋಟಿ ನಾರಾಯಣ ಹ್ಯಾಮನ್ ಆರ್ಟನ್ನನ ಹೆಸರನ್ನಿಟ್ಟು ಕೊಂಡು, ಜೇಟಿ ಹಿಡಿಯುವದಕ್ಕೆಂದು ಈ ಲಂಡನ್ನ ಪಟ್ಟಣಕ್ಕೆ ಬಂದಿರುತ್ತಾನೆ. ಆರ್ಟನ್ನನ ರೋಗದ ಹಾಗು ಆತನು ಆ ಬಿನ್ ಸರಕಾರೀ ಹುಚ್ಚರ ಆಸ್ಪತ್ರೆಯಲ್ಲಿದ್ದ ಸಂಗತಿಗಳು ಅಮೇರಿಕೆಯ ಪೋಲೀಸರಿಗೆ ಕೂಡ ಗೊತ್ತಿರುವದಿಲ್ಲ. ಆದ್ದರಿಂದ ವಾಶಿಂಗಟನ್ನಿನಲ್ಲಿರುವ ನಿಮ್ಮ ಆಪ್ತನಿಗೆ ಅದು ಗೊತ್ತಾಗುವದು ತೀರ ಅಸಂಭವವೇ ಸರಿ. ಆತ ನಿಜವಾದ ಹ್ಯಾಮನ್ ಆರ್ಟನ್ನನ ವಿಷಯದ ಶಿಫಾರಸ ಪತ್ರವನ್ನೇ ನಿಮಗೆ ಕಳಿಸಿಕೊಟ್ಟಿರಬಹುದು; ಮತ್ತು ನಿಮ್ಮ ಬ್ಯಾಂಕುಗಳಾದರೂ ಆತನ ಐಶ್ವರ್ಯದ ವೃತ್ತಾಂತವನ್ನೇ ನಿಮಗೆ ತಿಳಿಸಿರಬಹುದು.'

'ಎಂಥ ಆರಿಷ್ಟವಿದು! ಈ ದುಃಸಾಹಸಿಯಾದ ವೇಷಧಾರಿಗೆ ಸಾಧ್ಯವಾದ ಕರ್ಮವೇ ಇಲ್ಲದಾಗಿದೆಯಲ್ಲ! ಆದರೆ ಇದರಿಂದ ನಮ್ಮ ಮಂತ್ರಶಾಗಾರದೊಳಗಿನ ಗುಪ್ತರಹಸ್ಯಗಳೆಲ್ಲ ಯಾವ ಕೌಶಲ್ಯದಿಂದ ಪ್ರಕಟವಾಗುತ್ತಿರುವವೆಂಬದಂತೂ ತಿಳಿಯಲಿಲ್ಲವಲ್ಲ! ಆ ಎಲ್ಲ ರಾಜಕೀಯ ಗುಪ್ತರಹಸ್ಯ ಭೇದವಾದರೂ ಆ ವೇಷಧಾರಿಯ ಕೆಲಸವೇ ಆಗಿರಬಹುದೇ?'

'ಅದೆಲ್ಲವನ್ನೂ ನೀವು ಕ್ರಮವಾಗಿ ತಿಳಿಯಬಹುದು. ಈ ದುಷ್ಟನು ತನ್ನ ಪುಂಡ ಅನುಯಾಯಿಗಳೊಡನೆ ಎಂಥೆಂಥ ಭಯಂಕರ ಹಾಗು ಎಷ್ಟೆಷ್ಟು ಕೌಶಲ್ಯಪೂರ್ಣಸಾಹಸಗಳನ್ನು ಮಾಡಿ ಹೇರಳವಾದ ಧನವನ್ನು ಹೇಗೆ ಸಂಪಾದಿಸಿರುತ್ತಾನೆಂಬ ವರ್ತಮಾನ ನಿಮಗೆ ಇನ್ನೆರಡು ದಿನಗಳಲ್ಲೇ ವಿದಿತವಾಗುವದು. ಲಾರ್ಡರೇ, ನಾನಿನ್ನು ಹೊರಡುವೆ.' ಹೀಗೆಂದು ಹೇಳಿ, ಬ್ಲೇಕ ಲಗುಬಗನೆ ಲಾರ್ಡ ಜೋರ್ಲರ ಮನೆಯಿಂದ ಹೊರಬಿದ್ದ.

ಬಳಿಕ ಬ್ಲೇಕ ಮಾರ್ಬಲ್ಲ ರ್‍ಯಾಕಿನ ಬಳಿಯಲ್ಲಿ ಸ್ಮಿಥನನ್ನು ಕಂಡು ಅವನೊಡನೆ ಆಕ್ಸಫರ್ಡ ಸ್ಟ್ರೀಟಿಗೆ ನಡೆದ. ಆ ಓಣಿಯ ಮೊದಲಿಗೇ ಒಂದು ಚಿಕ್ಕ ಮನೆಯಿದ್ದಿತು. ಬ್ಲೇಕ ತನ್ನಲ್ಲಿಯ ಕೀಲೀ ಕೈಗಳಿಂದ ಅದರ ಕದದ ಕೀಲಿ ತೆಗೆದು ಒಳಹೊಕ್ಕ. ಸ್ಮಿಥನು ಅವನನ್ನನುಸರಿಸಿ ಹೋಗುತ್ತ:—ಒಡೆಯರೇ, ಇಲ್ಲಿಗೆ ಬಂದ ಕಾರಣವೇನು? ಎಂದು ಕೇಳಿದ.

'ಲಾರ್ಡ ಬೋರ್ಲರ ಮನೆಯಿಂದ ಹೊರಟ ತಂತಿಯಿಲ್ಲದ ಟೆಲಿಫೋನಿನ ಎರಡನೇ ತುದಿ ಎಲ್ಲಿದೆಯೆಂಬದರ ಶೋಧಕ್ಕಾಗಿಯೇ ಈಗ ಹೊರಟಿದ್ದು. ನೀನು ಇಲ್ಲಿಯ ಬಾಗಿಲ ಬಳಿಯಲ್ಲಿದ್ದು, ಪಹರೆ ಮಾಡುತ್ತ ನಮ್ಮನ್ನಾರಾದರೋ ಅನುಸರಿಸಿ ಬರುವರೋ ಹೇಗೆಂಬದನ್ನು ನೋಡುತ್ತಿರು.'

ಆ ಮನೆಯ ಉಪ್ಪರಿಗೆಯ ಮೇಲಿಂದ ಒತ್ತಟ್ಟಿಗೆ ಮೇಲಕ್ಕೆ ಹತ್ತುವ ನಿಚ್ಚಣಿಕೆ ಇದ್ದಿತು. ಬ್ಲೇಕ ಅದರ ಸಹಾಯದಿಂದ ಉಪ್ಪರಿಗೆಯ ಮಾಳಿಗೆಯು ಮೇಲೇರಿ ಹೋದ. ಅಲ್ಲೊಂದು ಚಿಕ್ಕ ಕೋಣೆಯಿದ್ದಿತು. ಆ ಕೋಣೆಯ ಎದುರಿಗೇ ಮತ್ತೊಂದು ಮನೆಯ ಹೊಗೆಯ ಬಂಬು. ಆತ ಆ ಉಪ್ಪರಿಗೆಯ ಕುಂಬಿಯ ಮೇಲೆ ಹತ್ತಿ, ದುರ್ಬೀಣಿನ ಸಹಾಯದಿಂದ ಆ ಹೊಗೆ ಬಂಬನ್ನು ಸೂಕ್ಷ್ಮವಾಗಿ ಪರೀಕ್ಷಿಸಿದ; ಹಾಗು ೧೫-೨೦ ನಿಮಿಷಗಳ ನಂತರ ಕೆಳಗಿಳಿದು ಬಂದ. ಬಳಿಕ ಆತ ಸ್ಮಿಥನನ್ನು ಕುರಿತು:— ಸ್ಮಿತ್ಥ, ಇಂದು ನಮ್ಮಗಳ ಶ್ರಮ ಸಾಫಲ್ಯವಾದಂತಾಯಿತು. ಪಕ್ಕದ ಮನೆಯ ಮೂರನೇ ಅಂತಸ್ತಿನ ಮೇಲೆ ದುಂಡಗಾದ ಉದ್ದನ್ನ ಹೊಗೆಬಂಬಿನಂತೆ ಕಾಣುತ್ತದಲ್ಲ, ಅದು ನಿಜವಾದ ಹೋಗೆಬಂಬಾಗಿರದೆ, ಹಲವು ಕಡೆಯ ತಂತಿಗಳನ್ನು ಆವರಿಸಿಕೊಂಡಿರುವ ಅದೊಂದು ಕೊಳವೆಯಾಗಿದೆ. ಅವೆಲ್ಲ ತಂತಿಗಳೂ ಆ ಕೊಳವೆಯೊಳಗಿಂದ ಕೆಳಗೆ ಒಯಲ್ಪಟ್ಟಿರುತ್ತವೆ.'

'ಆ ಕೊಳವೆಯು ಮನೆಯೇ ಕೋಲಾನ ಸ್ಟ್ರೀಟನೊಳಗಿನ ೨೦ನೇ ನಂಬರಿನ ಮನೆಯೇನು?'

'ಅಲ್ಲ; ಅದು ಆ ಓಣಿಯೊಳಗಿನ ೧೮ನೇ ನಂಬರಿನ ಮನೆ. ಆ ಮನೆ ೨೦ನೇ ನಂಬರಿನ ಮನೆಗೆ ಹೊಂದಿಯೇ ಇರುತ್ತದೆ.'

'ಒಡೆಯರೇ, ಆ ಹಕ್ಕಿಗಳನ್ನೆಲ್ಲ ಗೂಡಿಗೆ ಸೇರಿಸುವದಾವಾಗ?'

'ಅವೆಲ್ಲವೂ ಕಾಳು-ನೀರಿಗಾಗ ಒತ್ತಟ್ಟಿಗೆ ಬಂದು ಸೇರಲಿ. ನಾಳೆ ರಾತ್ರಿಯಲ್ಲಿ ನಾವು ಆ ಮನೆಯನ್ನು ಪ್ರವೇಶಿಸೋಣ. ಅದಕ್ಕೂ ಮೊದಲು ನಾವು ನಮ್ಮ ಬಲೆಯನ್ನೊಡ್ಡಿ ಸಿದ್ಧವಾಗಿರೋಣ.'



## ೧೭ನೇ ತೆರೆ:—ಹಕ್ಕಿಗಳು ಭುರ್ರೆಂದವು!

ಬ್ಲೇಕ ಯಾವಾಗ ಲಾರ್ಡ ಬೋರ್ಲರ ಮನೆಯಿಂದ ಆರ್ಟನ್ನನ ಮನೆಯ ಕಡೆಗೆ ನಡೆದಿದ್ದನೋ ಅದೇ ಕಾಲಕ್ಕೆ ಆರ್ಟನ್ನನ ಮನೆಯ ಗುಪ್ತ ಕೋಣೆಯಲ್ಲಿ ಕ್ಯಾಪ್ಟನ್ ಉಯಿನ್‌ಕಾರನ ಕೂಡ ಆರ್ಟನ್ನನ ಗೌಪ್ಯ ಸಂವಾದ ನಡೆದಿತ್ತು. ಆಗ ಉಯಿನ್‌ಕಾರ:—ಆ ಮೂರ್ಖ ಶಿಖಾಮಣಿ ರೆನ್‌ಹ್ಯಾಮನ ಸಿದ್ರೆ ಅಷ್ಟು ಬೇಗನೆ ಅಡಗಿ, ಅವನಿಗೆ ಎಚ್ಚರವಾದೀತೆಂದು ನಮಗೆ ಸ್ವಲ್ಪವೂ ಅನಿಸಿರಲಿಲ್ಲ.

'ಒಹು ವಿಷಾದಕರ ಸಂಗತಿಯದು; ಆದರೆ ಅದಕ್ಕೆ ಉಪಾಯ ವಿನ್ನೇನು? ನೀನು ಇನ್ನು ಒಂದು ವಾರದ ವರೆಗೆ ಗುಪ್ತವಾಗಿರು. ಆ ಮೇಲೆ ನಾವುಗಳು ಆಟ್ಲಾಂಟಿಕ ಮಹಾಸಾಗರ ದಾಟಿ, ಲೇಡೀ ಭಿಸ್ಸಳ ಆ ರತ್ನ ಖಚಿತ ಅಲಂಕಾರಕ್ಕೆ ಸದ್ಗತಿ ಕೊಡೋಣ.'

'ಇಲ್ಲಿಯೇ ಆ ಅಲಂಕಾರ ಬಿಚ್ಚಿ, ಅದರೊಳಗಿನ ರತ್ನಗಳನ್ನಷ್ಟೇ ದೇಶಕ್ಕೆ ಕಳಿಸಲಿಕ್ಕೆ ಅಡ್ಡಿಯೇನು?'

ಆರ್ಟನ್ನ ತನ್ನ ನಾಲಿಗೆಯನ್ನು ಅಂಗಳಕ್ಕೆ ಒತ್ತಿಹಿಡಿದು 'ಛಿಟ್' ಎಂಬ ಶಬ್ದಮಾಡಿ:—ಇದೇನು, ಏನೂ ಅರಿಯದ ಹುಡುಗನಂತೆ ಮಾತಾಡುತ್ತೀ? ಈ ರತ್ನಖಚಿತ ಅಲಂಕಾರದ ಗೌರವವೆಷ್ಟೆಂಬದನ್ನು ಬಲ್ಲೆಯಾ? ಈ ಅಮೂಲ್ಯ ರತ್ನಗಳು ಮಹಾರಾಣೀ ಎಲಿಜಾಬೇಥಳ ಕೊರಳಲ್ಲಿರುತ್ತಿದ್ದವು. ಆದರಿಂದ ಇವುಗಳ ಇತಿಹಾಸ ಪ್ರಖ್ಯಾತವಾಗಿರುತ್ತದೆ. ಈ ಬಗೆಯು ವಿಖ್ಯಾತ ಒಡವೆ ಅಮೇರಿಕೆಯಲ್ಲಿ ಇದರ ನಾಲ್ಕು ಪಟ್ಟು ಬೆಲೆಗೆ ಮಾರಲ್ಪಡುವದು. ಅಲ್ಲಿಯ ಜನರಿಗೆ ಈ ಅಲಂಕಾರದ ಐತಿಹ್ಯ ಚೆನ್ನಾಗಿ ಅವಗತವಾದರೆ, ಯಾವನೊಬ್ಬ ಶೋಕೀಯ ಮನುಷ್ಯ ನಾಲ್ವತ್ತು ಸಾವಿರ ಪೌಂಡು ರೋಖ ಕೊಟ್ಟು ಕೂಡ ಇದನ್ನು ಕೊಂಡುಕೊಳ್ಳಬಹುದಾಗಿದೆ. ಇದಲ್ಲದೆ ಕಳವು ಮಾಡಿದ ಆ ಕೆನಿಯಾದ ಕರಾರಿನ ಪ್ರತಿಗಳನ್ನು ಮಾರಿದರೆ, ಏನಿಲ್ಲೆಂದರೂ ಹದಿನೈದು ಸಾವಿರ ಪೌಂಡು ಸಿಗುವವು. ಈ ಮುತ್ತು-ರತ್ನಗಳ ಹೊರತು ಈ ಲಂಡನ್ನ ಪಟ್ಟಣದಲ್ಲಿ ಇದುವರೆಗೆ ಕಳವು-ಕಾಕಿನ ಉದ್ಯೋಗದಿಂದ ಯಾವ ಪದಾರ್ಥಗಳು ಸಂಗ್ರಹಿಸಲ್ಪಟ್ಟಿರುವವೋ, ಅವು

ಗಳ ಬೆಲೆಯಾದರೂ ಸಾಮಾನ್ಯವಾಗಿಲ್ಲ; ಅದು ಸರ್ವಸಾಧಾರಣವಾಗಿ ಹತ್ತೆಂಟು ಲಕ್ಷ ಪೌಂಡುಗಳಾದರೂ ಆಗಬಹುದು.'

'ಈ ಬಗೆಯ ಧನಸಂಪಾದನೆಯ ಲಾಭಕರ ಉದ್ಯೋಗ ಬಿಟ್ಟು ಹೋಗುವ ಮನಸ್ಸಾಗುವದಿಲ್ಲ. ನೀವು ನಿಮ್ಮ ತಂತಿವಿರಹಿತ ಟೆಲಿಫೋನಕ್ಕೆ 'ಬಂಗಾರದ ಖಣಿ' ಎಂದಿಟ್ಟಿರುವ ಹೆಸರು ರತಿಮಾತ್ರವೂ ಅತಿಶಯೋಕ್ತಿಯಾದಲ್ಲ.'

'ಉಯಿನ್‍ಕಾರ, ನಾನು ಕಳೆದ ೨೦ ವರ್ಷಗಳಿಂದಲೂ ಈ ಉದ್ಯೋಗವನ್ನೇ ಮಾಡುತ್ತ ಬಂದಿರುವೆ; ಆದರೆ ಈ ದೀರ್ಘಕಾಲದಲ್ಲಿ ಒಂದು ದಿನವೂ ನನಗೆ ಯಾರಿಂದಲೂ ಬಿಸಿ ಹತ್ತದಿದ್ದ ಕಾರಣವೇನೆಂಬದನ್ನುಬಲ್ಲೆಯಾ? ವಿಪತ್ತಿನ ಒಂದಿಷ್ಟು ಆಭಾಸವಾದರೂ ಸಾಕು; ನಾನು ನನ್ನ ಬಲೆಯನ್ನು ಎತ್ತಿಬಿಡುತ್ತೇನೆ. ಲೋಭಕ್ಕೆ ಮನಸೋತು, ಎಂದೂ ಎರಡನೆಯವರ ಬಲೆಯಲ್ಲಿ ಸಿಕ್ಕಿರುವದಿಲ್ಲ. ಈ ದೇಶದಲ್ಲಿ ನಾನು ಯಾರಿಂದ ಸಹಾಯ ಪಡೆದಿರುವೆನೋ,ಅವರಿಗೆ ನಮ್ಮ ಪ್ರಾಪ್ತಿಯ ಅಲ್ಪ ಭಾಗ ಕೊಡತಕ್ಕದ್ದಿರುವದರಿಂದಲೇ ನನಗೆ ನನ್ನ ಬಲೆಯನ್ನು ಸುತ್ತಿಕೊಳ್ಳಲಿಕ್ಕೆ ತುಸ ತಡವಾಗಬಹುದಾಗಿದೆ; ಇದಿಲ್ಲದಿದ್ದರೆ ನಾನು ನಿನ್ನೆಯೇ ಇಲ್ಲಿಂದ ಕಾಲ್ದೆಗೆಯುತ್ತಿದ್ದೆ.'

ಅದನ್ನು ಕೇಳಿ ಉಯಿನ್‍ಕಾರ ವ್ಯಗ್ರಭಾವದಿಂದ:—ಅದೇಕೆ? ಅಷ್ಟು ಅವಸರದ ಕಾರಣವೇನು? ಯಾವದೊಂದು ಸಂಕಟದ ವಾಸನೆ ಹತ್ತಿದೆಯೇ?

'ಅದೇನಿಲ್ಲ; ಆದರೆ ಸುಪ್ರಸಿದ್ಧ ಪತ್ತೆದಾರ ರಾಬರ್ಟ ಬ್ಲೇಕ ಈ ಜಾಲದಲ್ಲಿ ಕೈಹಾಕಿರುತ್ತಾನಾದ್ದರಿಂದ, ಇನ್ನು ದುಶ್ಚಿಂತೆಗೆ ಕಾರಣವಿಲ್ಲೆಂದೆನ್ನುವದಾದರೂ ಹೇಗೆ? ಎಷ್ಟು ಪ್ರಯತ್ನಿಸಿದರೂ ಆತನ ತಲೆ ತಕ್ಕೊಳ್ಳಲಿಕ್ಕಾಗಲಿಲ್ಲ. ಆ ಸೂಳೇ ಮಗ ಯಾವದೊಂದು ಮಂತ್ರ ತಂತ್ರ ಕಲಿತಿರಬಹುದೋ? ಈ ಸಾರೆ ನಾನು ಆತನನ್ನು ಸಂಹರಿಸದೆ ಈ ದೇಶ ಬಿಟ್ಟು ಹೊರಡುವದೇ ಇಲ್ಲ.'

ಹೀಗೆಂದು ಆರ್ಟನ್ನ ನುಡಿಯುತ್ತಿರಲಿಕ್ಕೆ ಆ ಕೋಣೆಯೊಳಗಿನ ಟೆಲಿಫೋನಿನ ಮೇಲಿನ ಹಿತ್ತಾಳಿಯ ಕೊಳವೆ ಕಳಚಿ ಕೆಳಗೆ ಬಿತ್ತು. ಕೂಡಲೆ ಆರ್ಟನ್ನ ಲಗುಬಗೆಯಿಂದ ಎದ್ದು ನಿಂತು:—ಬೋರ್ಲರ ಮನೆಯ ಮತ್ತಾವ ಗುಪ್ತ ಸಂಗತಿಯೋ ಬಂದಿದೆ; ಮತ್ತೆ ಯಾವ ಹೊಸ ಸುದ್ದಿಯೆಂಬದನ್ನು ನೋಡುವಾ, ಎಂದಂದು, ಆ ಕೊಳವೆಯೊಳಗಿನ ಕಾಗದವನ್ನು ಹೊರಗೆ

ಹಿರಿದು ಓದತೊಡಗಿದ. ಕ್ಷಣಾರ್ಧದಲ್ಲಿ ಆತನ ಸೊಂಡೆಯೊಣಗಿ ಹೋ-ಯಿತು. ಅದನ್ನು ಕಂಡು ಉಯಿನ್‌ಕಾರ:—ದುರ್ವಾರ್ತೆಯೊ? ಎಂದು ಕೇಳಲು,

ಆರ್ಟಿನ್ನ ಆ ಕಾಗದವನ್ನು ಆತನ ಎದುರಿಗೆ ಚೆಲ್ಲಿ:—ಕೆಲ ಕ್ಷಣಗಳ ಹಿಂದೆ ನಾವು ಯಾವುದಕ್ಕೆ ಚಿನ್ನದ ಖಣಿಯೆಂದೆನ್ನುತ್ತಿದ್ದೆವೋ ಅದರ ಭರ ಭರಾಟೆ ಇಂದಿಗೆ ಮುಗಿದಂತಾಯಿತು!

'ನೀವು ಅನ್ನುನದಾದರೂ ಏನು? ಆದದ್ದಾದರೂ ಏನು?'

ಆರ್ಟಿನ್ನ ಆ ಕಾಗದವನ್ನು ಮತ್ತೆ ಎತ್ತಿಕೊಂಡು, ಉಯಿನ್‌ಕಾರ ನಿಗೆ ಅದರ ಸಂಗತಿ ಓದಿ ಹೇಳಿದ. ಅದೇನಂದರೆ:—'ಪ್ರಾರಂಭ ೧೨-೫೦ ಗಂಟೆ ರಾತ್ರಿ. ಇಲ್ಲಿ ನೆಲಮಾಳಿಗೆಯಲ್ಲಿ ಯಾರದೋ ಮೆತ್ತನ್ನ ಕಾಲು ನಡಿಗೆಯ ಸಪ್ಪಳವಾಯಿತು ಅದುಯಾವದೊಂದು ಪಶುವೆಂದು ತಿಳಿಯಿತು. ಅದರ ಕೂಡ ಇಬ್ಬರ ಕಾಲ ಸಪ್ಪಳವೂ ಕೇಳಿಬಂತು. ಆ ಮೇಲೆ ಸ್ವಲ್ಪ 'ಖಟ್ ಖಟ್' ಎಂಬ ಸಪ್ಪಳವಾಗಿ, ಯಾರೋ ರಿಸೀವ್ಹರನ್ನು ಅಗಳಾಡಿ ಸುತ್ತಿರುವ ಹಾಗೆ ತೋರಿತು. ಪರಕ್ಷಣದಲ್ಲಿಯೇ ಒಂದು ನಾಯಿಯು 'ಭೊಂ ಭೊಂ' ಎಂಬ ಭಯಂಕರ ಶಬ್ದ' ಉಯಿನ್‌ಕಾರ ಆ ನಾಯಿ ಯಾರ ದೆಂದು ತಿಳಿದಿ? ಅದು ಆ ನೀಚ ಬ್ಲೇಕನ ಟಪ್ಯಾ ಎಂಬ ಭಯಂಕರ ನಾಯಿ! ಆರ್ಟಿನ್ನ ಮತ್ತೆ ಆ ಕಾಗದ ಓದ ಹತ್ತಿದನು. ಬಳಿಕ ಒಬ್ಬ 'ಒಡೆಯರೇ, ಈ ದುಂಡುಮೇಜಿನ ಕೆಳಗೆ ಅದೇನನ್ನು ಕೂಡ್ರಿಸಿರುತ್ತಾರೆ? ಅನ್ನಲು, ಅದಕ್ಕೆ ಉತ್ತರವಾಗಿ ಇನ್ನೊಬ್ಬ 'ಕೇವಲ ಭ್ರಮೆ. ಇಲ್ಲ ಏನೂ ಕಾಣುವದಿಲ್ಲ. ಈ ಮೇಜಿನ ಕೆಳಗೆ ಏನೂ ಕಾಣಬರುವದಿಲ್ಲ. ಕೇವಲ ಈ ನಾಯಿಯು ಒದರುವಿಕೆಯೇ ಫಲ' ಹೀಗೆಂದ; ಬಳಿಕ ಅವರವರ ಶಬ್ಧ ದಿಂದ ಅವರು ಅಲ್ಲಿಂದ ಹೊರಟುಹೋದರೆಂದು ತಿಳಿಯಿತು. ಆ ಗ್ರಾಮ ಪಶುವನ್ನು ಅವರು ಒತ್ತಾಯದಿಂದ ಎಳೆದೊಯ್ದರು. ಮುಗಿಯಿತು!'

ನಂತರ ಆರ್ಟಿನ್ನ:—ರಾಬರ್ಟ ಬ್ಲೇಕನನ್ನು ನಾನು ಚೆನ್ನಾಗಿ ಬಲ್ಲೆ. ಆ ಮಂತ್ರಣಾಗಾರದಲ್ಲಿ ನಿಂತು ಮಾತಾಡಿದರೆ ಅದು ಬೇರೆಯವರಿಗೆ ತಿಳಿ ಯದಿರದೆಂಬದನ್ನು ಬಲ್ಲ ಆತ, ಅಲ್ಲಿ ನಿಂತು 'ಈ ದುಂಡುಮೇಜಿನ ಕೆಳಗೆ ತಂತಿ ವಿರಹಿತ ಟೆಲಿಫೋನಿನ ರಿಸೀವ್ಹರು ಕೂಡ್ರಿಸಲ್ಪಟ್ಟದೆ' ಎಂದು ಅನ್ನುವಷ್ಟು ಮೂರ್ಖನೇ? ಅಲ್ಲಿ ಈಗ ಹಾಗೆ ಮಾತಾಡಿದವ ಬ್ಲೇಕನ

ಹೊರತು ಅನ್ಯರಾರೂ ಅಲ್ಲ. ಉಯಿನ್‌ಕಾರ, ನಾನಿನ್ನು ಈ ದೇಶದಲ್ಲಿ ಸುಸೂತ್ರ ಇರಲಾರೆ; ನಾಳೆ ಬೆಳಿಗ್ಗೆ ಹೊರಡಲೇ ಬೇಕು

ಶುಷ್ಕ ನಗೆ ನಗುತ್ತ ಉಯಿನ್‌ಕಾರ:—ಒಬ್ಬ ಇಂಗ್ಲಿಷ ಪತ್ತೆದಾರನಿ ಗಂಜಿ, ಅಮೇರಿಕನ್ ಕಳ್ಳರ ಚಕ್ರವರ್ತಿ ಓಡಿ ಹೋಗುವ ಪ್ರಯತ್ನ ನಡೆಸಿ ರುವದು ಎಷ್ಟು ಅಗೌರವದ ಸಂಗತಿ! ಶಿಕಾಗೋ ಹ್ಯಾಮುನ ಹೆಸರಿಗೆ ಇದು ಕಲಂಕವಲ್ಲದೆ ಮತ್ತೇನು?

'ಆದರೆ ನಾನು ನನ್ನ ಹೆಸರಿಗೆ ಕಲಂಕ ಹಚ್ಚಿಕೊಳ್ಳುವ ಪೂರ್ವದಲ್ಲೇ ಆತನ ತಲೆ ತಕ್ಕೊಳ್ಳದೆ ಬಿಡುವದಿಲ್ಲ.'

ಹೀಗೆಂದು ನುಡಿದು, ಆರ್ಟನ್ನ ಚಿಂತಾವ್ಯಾಕುಲನಾಗಿ, ಆ ಕೋಣೆ ಯಲ್ಲಿ ೪-೫ ನಿಮಿಷಗಳ ವರೆಗೆ ಅಡ್ಡಾಡಿದ. ಆಗ ಆತ ಬ್ಲೇಕನನ್ನು ಹೇಗೆ ಸಂಹರಿಸಬೇಕೆಂಬ ಬಗ್ಗೆ ಯೋಚಿಸುತ್ತಿರುವಂತೆ ತೋರಿತು. ಆ ಮೇಲೆ ಆತ ಮತ್ತೆ ಖುರ್ಚಿಯ ಮೇಲೆ ಕುಳಿತು, ಮುಂದೆ ಮಾಡಬೇಕಾ ಗಿದ್ದ ಕೆಲಸಗಳ ಬಗ್ಗೆ ಆಲೋಚಿಸ ಹತ್ತಿದ. ಬೇತು ನಿಶ್ಚಿತವಾದ ಬಳಿಕ ಉಯಿನ್‌ಕಾರ ಅಲ್ಲಿಂದ ಹೊರಟು ಹೋದ. ಆರ್ಟನ್ನನ ಬೇತು ಸಿದ್ಧಿಸಿ ದರೆ, ಬ್ಲೇಕನ ಕೊಲೆ ಸಹಜವಾಗುವದೆಂದು ಆತನ ಖಾತ್ರಿಯಾಯಿತು. ಆ ಆನಂದದ ಭರದಲ್ಲಿ ಆತ ಮದಗ್ರಸ್ತನಂತೆ ಜೋಲಿ ಹೊಡೆಯುತ್ತ ನಾಗಿದ.

ಉಯಿನ್‌ಕಾರ ಹೊರಟು ಹೋದ ಬಳಿಕ ಆರ್ಟನ್ನ ತನ್ನ ಉಳಿದ ಸಹಾಯಕರನ್ನು ಕರೆಯುವದಕ್ಕಾಗಿ ಟೇಬಲ್ಲ ಮೇಲಿನ ವಿದ್ಯುದ್ದೀಪಗಳನ್ನು ಪ್ರಜ್ವಲಿಸಿದ. ನಾಲ್ಕೂ ಬಣ್ಣದ ದೀಪಗಳು ಧಗಧಗನೆ ಉರಿಯಹತ್ತಿ ದವು. ಮುಂದೆ ಐದೇ ನಿಮಿಷಗಳಲ್ಲಿ ವಿಃಕಿ ಪಿವ್ರು, ಡಚ್ಚ ಹಾಗು ಉಳಿದ ಇಬ್ಬರು ಬೇರೆ ಬೇರೆ ಮಾರ್ಗದಿಂದ ಬಂದು ಆರ್ಟನ್ನನೆದುರಿಗೆ ನಿಂತು ಕೊಂಡರು. ಆರ್ಟನ್ನ ಅವರೆಲ್ಲರನ್ನು ಹೆಸರಗೊಂಡು ಕರೆದು:-ಲಾರ್ಡ ಬೋ- ರ್ಲರ ಮನೆಯ ಮಂತ್ರಣಾಗಾರದಲ್ಲಿ ನಾವು ಯಾವ ತಂತಿವಿರಹಿತ ಟೆಲಿ ಫೋನನ್ನು ಕೂಡ್ರಿಸಿದ್ದೆವೋ ಇಂದಿಗೆ ಅವರ ಕೆಲಸ ಪೂರೈಸಿದಂತಾಗಿದೆ. ಆದುದರಿಂದ ನಮ್ಮ ಹಿಂದಿನ ಮನೆಯ ಮೇಲುಪ್ಪರಿಗೆಯ ಮೇಲಿನ ಹೊಗೆ ಬಂಬಿನಂತಹ ಕೊಳವೆಯಲ್ಲಿ ಯಾವ ಯಾವ ಸಲಕರಣೆಗಳನ್ನು ಕೂಡ್ರಿ ಸಿರುವೆವೋ, ಬೇಗನೆ ಅವುಗಳನ್ನೆಲ್ಲ ನಾಶ ಮಾಡುವದವಶ್ಯ. ನಸ್ನೀ ನುಡಿ

ಕೇಳಿ ನೀವು ಅಂಜಿದಂತೆ ತೋರುತ್ತಿದೆ; ಆದರೆ ಅಂಜಿಕೆಯ ಕಾರಣವಿಲ್ಲ. ನಮ್ಮ ಶತ್ರುಗಳಿಗೆ ಯಾವದೊಂದು ಬಗೆಯಿಂದ ನಮ್ಮ ಗುಪ್ತ ಕೌಶಲ್ಯದ ಸುಳಿವು ಹತ್ತಕೂಡದೆಂದು ನಾವು ಎಚ್ಚರ ಪಡಬೇಕಾಗಿದೆ. ತಂತಿವಿರಹಿತ ಟೆಲಿಫೋನಿನ ಸಹಾಯದಿಂದ ಗುಪ್ತ ಸಂಗತಿ ತಿಳಿಯುವ ಯಂತ್ರಾದಿ ಸಾಮುಗ್ರಿಗಳು ನಮ್ಮ ಮನೆಯಿಂದ ಅದೃಶ್ಯವಾದವೆಂದರೆ, ಅವರು ಮಾಡ ಬಹುದಾದ ನಮ್ಮಮನೆಯ ಝಡತಿ ನಿಷ್ಫಲವಾಗುತ್ತದೆ.'

ಬ್ಲೇಕ ಕೆಲ ವೇಳೆಯ ಮುಂಚೆ ಇವನ ಹಿಂದಿನ ಮನೆಯ ಉಪ್ಪರಿಗೆ ಯನ್ನೇರಿ, ದುರ್ಬೀಣಿಯ ಸಹಾಯದಿಂದ ಆ ಹೊಗೆಬಂಬಿನಲ್ಲಿಯ ಯಾವ ತಂತಿವಿರಹಿತ ಟೆಲಿಫೋನಿನ ಸಾಮುಗ್ರಿಗಳನ್ನು ಕಂಡು ಹಿಡಿದಿದ್ದನೋ, ಮುಂದೆ ಒಂದೇ ಗಂಟೆಯಲ್ಲಿ ಅವೆಲ್ಲವೂ ಗುರ್ತಕಾಣದಂತೆ ಮಾಯವಾಗಿ ಬಿಟ್ಟವು! ಯಂತ್ರಾದಿಗಳೆಲ್ಲವೂ ತೆಗೆದಿಡಲ್ಪಟ್ಟವು. ಯಾವ ಹ್ಯಾಮ್ಲಿನ್ನ ನೆಂಬವನು ಸದಾ ಸರ್ವದಾ ಆ ಮೇಲುಪ್ಪರಿಗೆಯ ಮೇಲಿದ್ದು, ಟೆಲಿಫೋ ನಿನ ವರ್ತಮಾನ ತಿಳಿದು, ಆರ್ಟಿನ್ನನಿಗೆ ಕಾಗದದಲ್ಲಿ ಬರೆದು ತಿಳಿಸುತ್ತಿ ದ್ದನೋ, ಆ ಹ್ಯಾಮ್ಲಿನ್ನನನ್ನು ಅಲ್ಲಿಂದ ಕರೆತಂದು ಬೇರೆ ಕಡೆಗೆ ಕಳಿಸಿ ಬಿಟ್ಟನು. ಅದರಿಂದ ಇನ್ನು ಅಂಜಿಕೆಗೆ ಕಾರಣವಿಲ್ಲೆಂದು ತಿಳಿದು ಅವನು ನಿಶ್ಚಿಂತನಾದನು; ಆದರೆ ಈ ಮೊದಲೇ ಬ್ಲೇಕ ತನ್ನ ಇಂಗಿತವನ್ನೆಲ್ಲ ತಿಳ ಕೊಂಡಿರಬಹುದೆಂಬ ಒಂದಿಷ್ಟು ಕಲ್ಪನೆಯೂ ಆ ಆರ್ಟಿನ್ನನಿಗೆ ಆಗ ಹೊಳೆ ಯಲಿಲ್ಲ.



## ೧೮ನೇ ತೆರೆ:—ಭಾಯೋಲೆಯ ವರ್ತಮಾನ.

ಭಾಯೋಲೆಯ ಪತ್ತೆಗಾಗಿ ಪ್ರವೃತ್ತನಾದ ಬ್ಲೇಕ ಅವಳ ಬಂಧು- ಬಾಂಧವರೆಲ್ಲರಿಗೆ ಭೆಟ್ಟಿಯಾಗಿ ಅವರಿಂದ ಅವಳ ಸ್ವಭಾವ-ಚಾರಿತ್ರ್ಯ-ರುಚಿ- ಪ್ರವೃತ್ತಿಗಳ ತಥ್ಯವನ್ನೆಲ್ಲ ನಾನಾ ಬಗೆಯಿಂದ ಕೇಳಿಕೊಂಡಿದ್ದ. ಉಯಿನ್ ಕಾರನ ಸ್ಥಿತಿ-ಗತಿಗಳನ್ನು ತಿಳಿಯಲಿಕ್ಕೆಂದು ಆತ ತುರ್ಕಸ್ತಾನ-ಅಮೇರಿಕೆ ಗಳ ಪೋಲೀಸ ಖಾತೆಯ ಮುಖ್ಯಸ್ತರಿಗೆ ತಂತಿ ಕೊಟ್ಟು ಅವರಿಂದ ಅದೆಲ್ಲ ವನ್ನೂ ತಿಳಿದಿದ್ದ; ಆದರೆ ಆರ್ಟಿನ್ನನೂ ಉಯಿನ್‌ಕಾರನೂ ಸ್ವಾರ್ಥಸಿದ್ಧಿ,

ಗಾಗಿ ಲಂಡನ್ನಿಗೆ ಬಂದು ಪರಸ್ಪರರಿಗೆ ಸಹಾಯಕರಾದ ಬಗ್ಗೆ ಹಾಗು ಅವರೀರ್ವರೂ ಒಂದೇ ಗುಂಪಿನ ಕಳ್ಳರೆಂಬ ಬಗ್ಗೆ ಯಾವ ಆಧಾರವೂ ಅವನಿಗಿನ್ನೂ ದೊರೆತಿದ್ದಿಲ್ಲ.

ಬ್ಲೇಕ ರೆನ್‌ಹ್ಯಾಮನ ಮನೆಗೆ ಹೋಗಿ ಆತನಿಗೆ ಭೇಟಿಯಾಗಿದ್ದ. ಆಗ ರೆನ್‌ಹ್ಯಾಮ ತನ್ನ ಮನೆಯಲ್ಲೇ ನಜರಕೈದಿಯಾಗಿದ್ದ. ಆತನ ನಿರಪರಾಧಿತ್ವದ ಬಗ್ಗೆ ಬ್ಲೇಕನಿಗೆ ಎಳ್ಳಷ್ಟೂ ಸಂಶಯವಿರಲಿಲ್ಲ; ಆದರೆ ಮಂತ್ರಿಮಂಡಳ ದೆದುರಿಗಿದ್ದ ಪ್ರತ್ಯಕ್ಷ ಪುರಾವೆ ಕಂಡು ಆತ ಆ ಬಗ್ಗೆ ರೆನ್‌ಹ್ಯಾಮನಿಗೆ ವಿಚಾರಿಸಿದ. ಆಗ ಆತ ಫ್ರಾನ್ಸದೊಳಗಿನ ಓರಿಯೆಂಟಲ್ ಎಕ್ಸಪ್ರೆಸ್ಸಿನಲ್ಲಿ ಏನೇನು ನಡೆಯಿತೋ, ಅದೆಲ್ಲವನ್ನೂ ಬ್ಲೇಕನಿಗೆ ವಿವರವಾಗಿ ತಿಳಿಸಿದ. ಇಷ್ಟೇ ಅಲ್ಲ, ತಾನು ಗಾಢನಿದ್ರೆಯಿಂದ ಮಲಗಿದಾಗ, ಉಯಿನ್‌ಕಾರ ತನ್ನ ಕಿಸೆಗೆ ಕೈಹಾಕಬಂದಿದ್ದನೆಂಬದನ್ನು ಕೂಡ ತಿಳಿಸಲಿಕ್ಕೆ ಮರೆಯಲಿಲ್ಲ.

ಆ ಕೂಡಲೆ ಬ್ಲೇಕ ಉಯಿನ್‌ಕಾರನನ್ನು ಸೆರೆ ಹಿಡಿಯುವ ಸಲುವಾಗಿ ಪೋಲೀಸರ ಸಹಾಯ ಯಾಚಿಸಿದ. ಲಂಡನ್ನಿನ ಪೋಲೀಸರು ನಾಲ್ಕೂ ಕಡೆಗೆ ಓಡ್ಯಾಡಹತ್ತಿದರು; ಅಲ್ಲಲ್ಲಿಯ ತಂತಿಯ ಮನೆಗಳಲ್ಲಿ 'ಕಡ ಕಟ್' ಎಂಬ ಶಬ್ದ ಒತ್ತರದಿಂದ ಆಗ ಹತ್ತಿತು. ಆದರೂ ಉಯಿನ್‌ಕಾರನ ಪತ್ತೆಯೇ ಇಲ್ಲ! ಆತ ೨೫-೩೦ ಪೂಟು ಆಳವಾದ ನೀರಲ್ಲಿ ಮುಳುಗಿ ಕುಳಿತಿದ್ದ. ಅದರಿಂದ ಆತ ಯಾರೊಬ್ಬರ ಛದ್ಮನಾಮದಿಂದ ಪ್ಯಾಸಪೋರ್ಟ ಸಂಪಾದಿಸಿ, ಬ್ರಿಟಿಶ ಚಾನಲ್ಲ ಪಾರಾಗಿ ಹೋದನೋ ಹೇಗೆಂಬದು ತಿಳಿಯದಾಯಿತು.

ಅಂದು ಬ್ಲೇಕ ಹಲವು ಕಡೆಗೆ ತಿರುತಿರುಗಿ ಬೆಸತ್ತು ಮನೆಗೆ ಕಾಲಿಟ್ಟಾಗಒಬ್ಬ ತೀರ ಎತ್ತರದ, ಸೊರಗಿ ಸಾಯಲಿಕ್ಕಾದ, ದಿನ ಹೋದ ಕುರೂಪಿ ಹೆಂಗಸು ಆತನ ಮನೆಯ ಬಾಗಿಲಲ್ಲಿ ಕುಳಿತು ಆತನ ದಾರಿ ಕಾಯುತ್ತಿದ್ದಳು. ಇವನನ್ನು ಕಂಡೊಡನೆಯೇ ಎದ್ದು ನಿಂತು ಒಳ್ಳೇ ಕಂಚಿನ ಗಂಟೆಯಂತಹ ದನಿಯಿಂದ:—ತಮ್ಮ ಹೆಸರೇ ಬ್ಲೇಕರೆಂದೇನು? ಯಾವನು ಪ್ರಸಿದ್ಧ ಪತ್ತೇದಾರನೋ-ಅವನೇ ನೀವೇನು? ಎಂದು ಕೇಳಲು,

ಮುಗುಳು ನಗೆಯಿಂದ ಬ್ಲೇಕ:—ಅಹುದು; ಆದರೆ ನೀನು ಯಾರು? ಎಂದು ಕೇಳಿದ.

'ನನ್ನ ಪರಿಚಯದ ಆವಶ್ಯಕತೆ ತಮಗಿಲ್ಲ. ನಾನು ಛಾಯೋಲೆಯ ಬಳಿಯಿಂದ ಬಂದವಳೆಂದು ಹೇಳಿದರೆ ಸಾಕಾಗಬಹುದು.'

ಬ್ಲೇಕ ಬಹು ಕಷ್ಟದಿಂದ ತನ್ನ ಮನಶ್ಚಾಂಚಲ್ಯ ತಡೆದು:—ಹೀಗಲ್ಲವೆ? ನಿನ್ನ ಮಾತು ಸತ್ಯವಾಗಿದ್ದರೆ, ಛಾಯೋಲೆ ಎಲ್ಲಿರುವಳೆಂಬದನ್ನು ನೀನು ಸಹಜವಾಗಿ ಹೇಳಬಲ್ಲೆಯಷ್ಟೇ?

'ಹೇಳಬಲ್ಲೆನೇನೋ ನಿಜ; ಆದರೆ ನನ್ನ ಕರಾರಿಗೊಪ್ಪದ ಹೊರತು ನಾನು ನಿಮಗದನ್ನು ತಿಳಿಸುವೆನೆಂಬ ಆಶೆ ಬಿಟ್ಟು ಬಿಡಬೇಕು.'

'ಹಾಗಾದರೆ ನಿನ್ನ ಕರಾರೇನು?

'ತಾವು ನನ್ನನ್ನು ಯಾವ ಫೌಜದಾರೀ ಕೇಸಿಗೂ ಗುರಿಮಾಡಲಾಗದು.'

'ನಿನ್ನ ಸಂಗತಿಯನ್ನೆಲ್ಲ ಕೇಳಿಕೊಳ್ಳದ ಹೊರತು ನಾನು ನಿನ್ನೀ ಕರಾರಿಗೆ ಒಪ್ಪಲಾರೆ.'

'ಒಪ್ಪದಿದ್ದರೆ ಉಪಾಯವಿಲ್ಲ! ಕಷ್ಟಬಟ್ಟು ನಾನು ಇಲ್ಲಿಗೆ ಬಂದದ್ದು ವ್ಯರ್ಥವಾಯಿತು. ನಾನು ಹೊರಟೆ' ಎಂದಂದು ಆಕೆ ನಡೆಯಹತ್ತಿದಳು.

ಆಕೆ ನಿಜವಾಗಿಯೂ ಹೊರಟದ್ದನ್ನು ಕಂಡು, ಬ್ಲೇಕ:—'ನೀನು ನಿನ್ನ ಸಂಗತಿ ತಿಳಿಸದೆ ಹೊರಡುವೆಯಾ? ನಿಲ್ಲು. ಛಾಯೋಲೆಯೆಲ್ಲಿರುವಳೆಂಬದನ್ನು ನೀನು ತಿಳಿದಿರುತ್ತೀ ಎನ್ನುವೆ; ಆದರೆ ಯಾರಾದರೂ ಅವಳನ್ನು ಓಡಿಸಿಕೊಂಡು ಹೋಗಿದ್ದರೆ, ಆ ಕೆಲಸ ನಿನ್ನ ಸಹಾಯದಿಂದಲೇ ಆಗಿದೆಯೆಂದು ಏಕೆ ತಿಳಿಯಬಾರದು? ಈಗ ನೀನು ಏನನ್ನೂ ಹೇಳದೆ ಹೊರಟರುತ್ತೀ; ಆದರೆ ನಿನ್ನನ್ನೀಗ ಪೋಲೀಸರ ವಶಪಡಿಸಿದರೆ, ಅವರು ನಿನ್ನನ್ನು ಹೀಗೆಯೇ ಹೋಗಗೊಡುವರೇ?'

'ಪತ್ತೆದಾರರೇ, ನೀವು ನನ್ನನ್ನು ಪೋಲೀಸರಿಗೊಪ್ಪಿಸಬಹುದು; ಆದರೆ ಅವರಿಂದ ನನಗೇನಾಗಬೇಕಾಗಿದೆ? ಏನು ಮಾಡಿದರೂ ನಾನು ಅವರಿಗೆ ಛಾಯೋಲೆಯ ವಾಸಸ್ಥಳ ತಿಳಿಸಲಾರೆ. ಅವರು ನನ್ನನ್ನು ಹೊಡೆದು-ಬಡೆದು ಹಿಂಸಿಸಹತ್ತಿದರೆ, ಅತ್ತ ಪಾಪ! ಆ ಛಾಯೋಲೆಯ ಪ್ರಾಣ ಕೂಡಲೆ ಹೀರಲ್ಪಡುವದು.'

'ಇಂಥ ಅನೇಕ ಮೋಸಗಾರರನ್ನು ನಾನು ಬಲ್ಲೆ. ಅದಿರಲಿ. ಛಾಯೋಲೆ ಇನ್ನೂ ಜೀವಂತಳಾಗಿರುವಳೇ?'

ಆಕೆ ಸತ್ತು ಹೋಗಿದ್ದರೆ ತಣ್ಣಗಾಗಿ ಹೋಗುತ್ತಿತ್ತು! ನಾನು ಈ ಬಿಸಿಲಲ್ಲಿ ಇಷ್ಟು ದೂರ ನಡೆದು ಬಂದು, ಈ ಪೋಲೀಸರ ಸಂಕಟಕ್ಕೇಕೆ ತುತ್ತಾಗುತ್ತಿದ್ದೆ?'

'ಹಾಗಾದರೆ ನೀನು ನನಗೆ ಅವಳ ವಾಸಸ್ಥಳವನ್ನು ತಿಳಿಸು; ಅಂದರೆ ನಾನು ನಿನಗಾವ ಅನಿಷ್ಟವನ್ನೂ ಮಾಡಲಾರೆನೆಂದು ಪ್ರಮಾಣ ಪೂರ್ವಕವಾಗಿ ಹೇಳುತ್ತೇನೆ.'

'ಒಳ್ಳೇದು. ನಾನು ನಿಮ್ಮ ಮಾತನ್ನು ನಂಬುತ್ತೇನೆ. ಭಾಯೋಲೆ ಲಂಡನ್ನ ಪಟ್ಟಣದ ದಕ್ಷಿಣ ದಿಕ್ಕಿನಲ್ಲಿಯ ಸಾಲುಗುಡ್ಡಗಳಾಚೆಗಿರುವ ದೆವ್ವನ ಮನೆಯಲ್ಲಿರುತ್ತಾಳೆ.'

'ಅಲ್ಲಿ ಅವಳ ಭೇಟಿಯಾಗಬಹುದಲ್ಲವೇ? ಅವಳು ಈಗ ಹೇಗಿದ್ದಾಳೆ?

'ಅವಳು ತನಗೆ ಗೊತ್ತಿದ್ದ ಸಂಗತಿಯನ್ನು ತಿಳಿಸಿದ್ದರೆ, ಎಂದೋ ಮುಕ್ತಳಾಗುತ್ತಿದ್ದಳು. ಅದನ್ನು ಹೇಳದೆ, ನಾನಾ ಕಷ್ಟಗಳಿಗೊಳಗಾದ್ದರಿಂದ, ಇತ್ತೀಚೆಗೆ ಜ್ವರಪೀಡೆಯಿಂದ ಬಳಲುತ್ತಿದ್ದಾಳೆ.'

'ಅವಳನ್ನು ಯಾರು ಬಂಧಿಸಿಟ್ಟಿರುತ್ತಾರೆಂಬದನ್ನು ನೀನು ಹೇಳಲಾರೆಯಷ್ಟೇ?'

'ಅದು ತಿಳಿಯದು; ಆದರೆ ಆ ನಿರ್ಜನ ಸ್ಥಳದಲ್ಲಿ ಸಂತತವಾಗಿ ಅವಳ ಪಹರೆ ಮಾಡುವದರಲ್ಲಿ ನನಗೆ ಸಾಕು-ಸಾಕಾಗಿ ಹೋಗಿದೆ.'

'ಆ ನಿರ್ಜನ ಸ್ಥಳದಿಂದ ಭಾಯೋಲೆಯೇಕೆ ಓಡಿ ಬರಲಿಲ್ಲ?'

'ಪಾಪ! ಆ ಹುಡುಗೆಗಂತೂ ಅದು ಅಸಾಧ್ಯವೇ ಸರಿ. ನಿಮ್ಮಂತಹ ಮೀಸೆ ಹೊತ್ತ ಗಂಡಸರು ಕೂಡ ಆಕೆಯ ಸ್ಥಳದಲ್ಲಿದ್ದರೆ, ಹಗಲಲ್ಲಿಯೇ ಅಂಜಿ ಪ್ರಾಣಬಿಡುತ್ತಿದ್ದಿರಿ!'

'ಈಗ ನನಗೇನು ಮಾಡಹೇಳುವೆ?'

'ನೀವು ಇಂದು ರಾತ್ರಿ ೧೨ ಗಂಟೆಯ ಮೇಲೆ ಆ ದೆವ್ವನ ಮನೆಗೆ ಒಬ್ಬರೇ ಬರತಕ್ಕದ್ದು. ಸಂಗಡ ಪೋಲಿಸರನ್ನಾಗಲಿ ಬೇರೆ ಯಾರನ್ನಾಗಲಿ ಕರೆತರಕೂಡದು. ಹಾಗೆ ನಿಮ್ಮ ಸಂಗಡ ಮತ್ತೆ ಯಾಗಾದರೂ ಬಂದುದಾದರೆ, ನಿಮಗೆ ಭಾಯೋಲೆಯ ಶವದ ದರ್ಶನವಾದೀತೇ ಹೊರತು, ಆಕೆಯ ಭೆಟ್ಟಿಯಾಗಲಿಕ್ಕಿಲ್ಲ. ಆ ದೆವ್ವನ ಮನೆ ಬಹು ಭಯಂಕರ. ನೀವು ಹನ್ನೆರಡರ ನಂತರ ಬಂದರೇ ನಿಮಗೆ ಅಲ್ಲಿ ಅಂಜಿಕೆಯೆನಿಸಲಿಕ್ಕಿಲ್ಲ. ಇಲ್ಲದಿದ್ದರೆ

ಮೂರೂಸಂಜೆಯಿಂದ ಮಧ್ಯರಾತ್ರಿಯ ವರೆಗೆ ಆ ಮನೆಯ ಸುತ್ತು-ಮುತ್ತು ಕೊಳ್ಳಿಯ ದೆವ್ವಗಳು ಒಂದೇಸವನೆ ತಾಂಡವ ನೃತ್ಯ ನಡೆಸಿಬಿಟ್ಟಿರುತ್ತವೆ. ಅದನ್ನು ಕಣ್ಣಾರೆ ನೋಡುವ ಪ್ರಾಣಿ ಜೀವದಿಂದುಳಿಯುವದೇ ವಿರಲ. ಕಾರಣ ನೀವು ರಾತ್ರಿ ಹನ್ನೆರಡರ ನಂತರವೇ ಅಲ್ಲಿಗೆ ಬರಬೇಕು.

ಇನ್ನು ಈಕೆಯ ಸಂಗಡ ಹೆಚ್ಚು ಮಾತು ಬೆಳೆಸುವದರಿಂದ ಪ್ರಯೋಜನವಿಲ್ಲ. ಇವಳನ್ನಷ್ಟು ಹೊಗಳಿ ಕಳಿಸಿ, ಮುಂದಿನ ಮಾರ್ಗಕ್ಕೆ ಹತ್ತಬೇಕೆಂದು ಮನದಲ್ಲಿ ಯೋಚಿಸಿ, ಬ್ಲೇಕ ಆ ನಾರಿಯನ್ನು ಕುರಿತು:-ನೀವು ಭಾಯೋಲೆಯ ಮೇಲೆ ಹಾಗು ನಮ್ಮ ಮೇಲೆ ಬಹಳ ಉಪಕಾರ ಹೊರಿಸಿದಂತಾಗಿರುತ್ತದೆ. ನಿಮ್ಮ ಸೂಚನೆಯ ಮೇರೆಗೆ ನಾನು ಈ ರಾತ್ರಿ ಹನ್ನೆರಡರ ನಂತರ ಆ ದೆವ್ವನ ಮನೆಗೆ ಬರುತ್ತೇನೆ. ಅಲ್ಲಿ ನೀವು ನನಗೆ ಭಾಯೋಲೆಯನ್ನು ತೋರಿಸಿಕೊಟ್ಟರೆ, ನಾನು ನಿಮಗೆ ಕೆಲವು ನಗದು ಪೌಂಡುಗಳ ಇನಾಮು ಕೊಡುತ್ತೇನೆ.

'ಭಾಯೋಲೆಯಾದರೂ ನನಗೆ ಕೆಲ ಪೌಂಡುಗಳ ಬಕ್ಷೀಸು ಕೊಡಲೊಪ್ಪಿರುತ್ತಾಳೆ.'

'ಹಾಗಲ್ಲವೆ? ಒಳ್ಳೇದಾಯಿತು' ಎಂದು ಬ್ಲೇಕನೆನ್ನಲು, ಆ ದಾಸಿ ಆತನ ಅಪ್ಪಣೆ ಪಡೆದು ಹೊರಟಳು. ಸ್ಮಿಥ್ ಈ ಮೊದಲೇ ಬಡಿಗನ ವೇಷದಿಂದ ಮುಂದೆ ಹೋಗಿ, ಅವಳ ದಾರಿ ಕಾಯುತ್ತಿದ್ದ. ಆತ ಅವಳಿಗೆ ತಿಳಿಯದ ಹಾಗೆ ಆಕೆಯನ್ನನುಸರಿಸಿ ಹೋಗಿ, ಆ ದೆವ್ವನ ಮನೆಯ ಇರವನ್ನು ನೋಡಿಕೊಂಡ. ಇಷ್ಟೇ ಅಲ್ಲ, ಸುತ್ತ-ಮುತ್ತಲಿನ ಹೊಲಗಳ ಜನರನ್ನು ಕೇಳಿ, ಅದಕ್ಕೆ ದೆವ್ವನ ಮನೆಯೋ ಅನ್ನುತ್ತಾರೆಂಬದನ್ನು ಖಾತ್ರಿ ಮಾಡಿಕೊಂಡ. ಆ ದಾಸಿ ಆ ಮನೆಯನ್ನು ಹೊಕ್ಕವಳು ಹಿಂದಿರುಗಲೇ ಇಲ್ಲ. ಎಷ್ಟೋ ಹೊತ್ತಿನ ವರೆಗೆ ದೂರದಲ್ಲಿ ಮರೆಗೆ ನಿಂತು ನೋಡುತ್ತಿದ್ದ ಸ್ಮಿಥ್, ಅಪರಾಹ್ಣ ಕಾಲದಲ್ಲಿ ಬಂದು ಬ್ಲೇಕನಿಗೆ ಭೇಟಿಯಾದ.



## ೧೯ನೇ ತೆರೆ:—ದೆವ್ವನ ಮನೆ!

ಯಾವಾಗ ಬ್ಲೇಕ ಆ ದೆವ್ವನ ಮನೆಗೆ ನಡೆದನೋ, ಆಗ ಸಂಜೆಯ ೫ ಗಂಟೆಯಾಗಿತ್ತು. ಆತ ಹೊರಡುವಾಗ ಸ್ಮಿತ್ಥನನ್ನು ಕುರಿತು:—ನೀನು ಇಂದು ರಾತ್ರಿ ೮-೯ ಗಂಟೆಯೊಳಗಾಗಿ ಒಂದು ಮೋಟರ ತಕ್ಕೊಂಡು, ಆ ದೆವ್ವನ ಮನೆಯ ಪಕ್ಕದಲ್ಲಿರುವ ಕಿರುದಾರಿಯಲ್ಲಿ ಬಂದು ನಿಂತಿರು. ನಿನ್ನ ಸಂಗಡ ಲಾರ್ಡ ಬೋರ್ಲರ ಮನೆಯ ಆ ಶೀರ ವಿಶ್ವಾಸಿಗನಾದ ಸಾರ್ಜಂಟನನ್ನು ಕರೆದುಕೊಂಡು ಬಾ, ಎಂದು ಹೇಳಿ ಹೋದ. ಬ್ಲೇಕ ಲಂಡನ್ನ ಪಟ್ಟಣದ ದಕ್ಷಿಣ ದಿಕ್ಕಿಗೆ ಹೋಗಿ, ಆ ಕಡೆಯ ಒಂದು ಚುಟ್ಟದಂಗಡಿಯಲ್ಲಿ ಕುಳಿತ; ಹಾಗು ಅಂಗಡಿಕಾರನಿಂದ ಕೆಲ ಚುಟ್ಟಗಳನ್ನು ಕೊಂಡುಕೊಳ್ಳುತ್ತ ಅಲ್ಲಿಯ ದೆವ್ವನ ಮನೆಯ ಸಂಬಂಧವಾಗಿ ವಿಚಾರಿಸಿದ. ಆತ ಆ ದೆವ್ವನ ಮನೆಯ ಕಡೆಗೆ ಯಾರೂ ಸುಳಿಯುವದಿಲ್ಲೆಂತಲೂ, ಅಲ್ಲಿ ಮೂರೂಸಂಜೆಯಿಂದಲೇ ಕೊಳ್ಳಿಯ ದೆವ್ವಗಳು ಕುಣಿದಾಡಹತ್ತುತ್ತವೆಂತಲೂ ಹೇಳಿದ. ಬ್ಲೇಕ ಅಲ್ಲಿಂದೆದ್ದವನು ಊರ ಕೊನೆಯ ಭಾಗದಲ್ಲಿದ್ದ ಒಂದು ಚಹಾದ ಅಂಗಡಿ ಹೊಕ್ಕು, ಅಲ್ಲಿಯ ಒಬ್ಬ ಮುದುಕ ಸೇವಕನ ಬಳಿಗೆ ಹೋಗಿ ಕುಳಿತ. ಆ ಮುದುಕ ಮಾತಿನ ಮಲ್ಲ. ಆತ ಮೊದಲಿಗೆ ಬ್ಲೇಕನಲ್ಲಿ ತಿರಸ್ಕಾರ ತಾಳಿದ; ಆದರೆ ಬ್ಲೇಕ ಅವನಿಗೆ ಸಾಕಷ್ಟು ಚಹಾ-ಕಾಫಿ-ತಿಂಡಿಗಳನ್ನು ಕೊಡಿಸಿದನಲ್ಲದೆ, ಸಾಲದ್ದಕ್ಕೆ ಬೀರನ್ನೂ ಕುಡಿಸಿದ. ಆದರಿಂದ ಆತ ಒಳ್ಳೇ ಪ್ರಸನ್ನ ಮೊಗದಿಂದ:—ತಮ್ಮಾ, ನೀನು ಇತ್ತ ಎಲ್ಲಿಗೆ ನಡೆದಿರುವೆ? ಎಂದು ಕೇಳಿದ.

ಬ್ಲೇಕನ ಮೈಮೇಲಿನ ಆಗಿನ ಉಡಿಗ-ತೊಡಿಗೆಗಳಿಂದ ಆತನೊಬ್ಬ ಹಳ್ಳಿಯೂರಿನ ಬೇಸಾಯಗಾರನೆಂಬಂತೆ ಕಾಣುತ್ತಿದ್ದ. 'ನಾನು ಇತ್ತ ಕಡೆಯ ದೆವ್ವನ ಮನೆಯ ಬಳಿಯ ತೋಟದಲ್ಲಿ ಬೇಸಾಯ ಮಾಡಲಿಕ್ಕೆಂದು ನಡೆದಿದ್ದೇನೆ' ಎಂದು ಬ್ಲೇಕ ಹೇಳಲು,

'ಏನಂದಿ? ಎಲ್ಲಿಯ ತೋಟಕ್ಕೆ ನಡೆದಿರುವೆಯೆಂದಿ?' ಎಂದು ಹುಬ್ಬುಗಂಟಿಕ್ಕಿ ಆ ಮುದುಕ ಮತ್ತೆ ಕೇಳಿದ.

'ನಿಮ್ಮ ಕಿವಿಗಳು ಮಂದವಾಗಿವೆಯೇ? ಇತ್ತ ಕಡೆಯ ದೆವ್ವನ ಮನೆ ಬಳಿಯ ತೋಟದಲ್ಲಿ ಬೇಸಾಯ ಮಾಡಲಿಕ್ಕೆಂದು ನಡೆದಿದ್ದೇನೆ. ಅಲ್ಲಿಯೊಬ್ಬ ಕೃಷಕನ ಅವಶ್ಯಕತೆಯಿದೆಯೆಂದು ಕೇಳಿದ್ದೇನೆ.'

'ಯಾರೋ ಹುಡುಗಾಟಿಕೆಗಾಗಿ ನಿನಗಿತ್ತ ಕಳಿಸಿರಬಹುದಾಗಿದೆ.'

'ಅದೇಕೆ? ಅಲ್ಲಿ ಆ ತೋಟವೇ ಇಲ್ಲವೇನು?'

'ಇರದೇನು ಮಾಡೀತು? ಆದರೆ ಕಳೆದ ೩೦-೩೫ ವರ್ಷಗಳಿಂದ ಆ ದೆವ್ವನ ಮನೆಗೂ ಅದರ ಬಳಿಯ ತೋಟಕ್ಕೂ ಮನುಷ್ಯಸಂಪರ್ಕವೇ ಇಲ್ಲ'

'ಹಾಗಾದರೆ ಅಲ್ಲಿ ಯಾರಿರುವರು?'

'ಅಲ್ಲಿ ದೆವ್ವಗಳೇ ವಾಸಿಸುವವು. ಇಂಥ ದೊಡ್ಡ ದೆವ್ವನ ಆಗರ ಇತ್ತ ಕಡೆಗೆಲ್ಲಿಯೂ ಇಲ್ಲ! ಪ್ರತಿ ದಿನ ರಾತ್ರಿ ಅಲ್ಲಿ ಕೊಳ್ಳಿಯ ದೆವ್ವಗಳೇಳುವವು; ದೆವ್ವನ ನಾಚು-ರಂಗುಗಳಾಗುವವು. ನಿನ್ನೆ ರಾತ್ರಿ ಕೂಡ ಅಲ್ಲಿ ಕೊಳ್ಳೀ ದೆವ್ವಗಳು ಚೀತ್ಕಾರ ನಡೆಸಿದ್ದನ್ನು ನಾನು ಸ್ವತಃ ಕೇಳಿದ್ದೇನೆ. ಸಂಜೆಯಾದ ಬಳಿಕ ಆ ದೆವ್ವನ ಮನೆಯ ಕಡೆಗೆ ಯಾರೂ ಕಾಣಬರುವದಿಲ್ಲ.'

'ಹಾಗಾದರೆ ಅಲ್ಲಿ ಯಾರೂ ಇರುವದಿಲ್ಲೆನ್ನಬೇಕಾಯಿತು?'

'ಯಾವಾತನಿಗೆ ಮೂರು ತಲೆಗಳಿರುವವೋ, ಆತನೇ ಅಲ್ಲಿಗೆ ಹೋಗಿ ಆ ಭೂತಗಳ ಕೂಡ ಕಾದಾಡ ಬಲ್ಲ. ತಮ್ಮಾ, ನೀನೊಳ್ಳೇ ಕಡೆಯ ಕೆಲ ಸಕ್ಕೆ ನಡೆದಿರುತ್ತೀ! ನೀನೊಬ್ಬ ಹಳ್ಳಿಯ ದಡ್ಡನನ ಮಗನೆಂದು ಯಾವನೋ ನಿನ್ನನ್ನು ಮೋಜಿಗಾಗಿ ಇತ್ತ ಕಳಿಸಿರಬಹುದಾಗಿದೆ. ಹೋಗು. ಹುಚ್ಚಾ, ತಿರುಗಿ ಹೋಗು; ಬೇರೆ ಕಡೆಗಳಲ್ಲಿ ತಿರಿದಾದರೂ ಉಣ್ಣು ಹೋಗು' ಎಂದೆಂದು ಆ ಮುದುಕನು ಒಳಗೆ ನಡೆದ. ಬ್ಲೇಕನೂ ಅಲ್ಲಿಂದೆದ್ದ.

ಆತ ಹೊರಗೆ ಬರುವಷ್ಟರಲ್ಲಿ ಹೊತ್ತು ಮುಳುಗಿ ಕತ್ತಲು ಬೀಳಲಾರಂಭಿಸಿತು. ಆ ಕತ್ತಲೆಯ ಕೂಡವೇ ಮಂಜು ಗವಿದು ನಾಲ್ಕೂ ಕಡೆಗೆ ಗಾಢವಾದ ಕತ್ತಲೆಗವಿಸಿ ಬಿಟ್ಟಿತು. ಸಮೀಪದಲ್ಲಿಯೇ ಒಂದು ಚಿಕ್ಕನದಿ. ಮಂಜು ದಟ್ಟವಾಗಿ ಬೀಳುತ್ತಿದ್ದರೂ ನದಿಯ ನೀರು ಕಾಣಿಸುತ್ತಿತ್ತು; ಆ ನದಿಯ ಪಕ್ಕದಲ್ಲಿ ಒಂದು ದೊಡ್ಡ ಹಾಳು ಮನೆ. ಆತ ಆ ಕಾರ್ಗತ್ತಲೆಯಲ್ಲೇ ಆ ಮನೆಯ ಕಡೆಗೆ ನಡೆದ. ಆ ಮನೆ ರಾಜಮಾರ್ಗದಿಂದ ಕೆಲ ಅಂತರದ ಮೇಲಿತ್ತು. ಆ ಹಾಳು ಮನೆಗೆ ಎದುರಿಗೇ ಕಬ್ಬಿಣ ಸಲಾಕಿಯ ಬಾಗಿಲಿತ್ತು. ಬಹು ದಿನಗಳಿಂದ ಜಂಗು ತಿಂದು ಆ ಸಲಾಕಿ ಲಿಕಿ-ಲಿಕಿಯಾಗಿದ್ದವು. ಆ ಭಯಂಕರ ಹಾಳು ಮನೆಯನ್ನು ಕಂಡರೆ, ಅದಕ್ಕಿಟ್ಟಿದ್ದ 'ದೆವ್ವನ ಮನೆ' ಎಂಬ ಹೆಸರು ನಾಮಸಾರ್ಥಕವಾಗಿತ್ತೆಂದು ತೋರುತ್ತಿತ್ತು. ಬ್ಲೇಕ

ಆ ಮುರುಕ ಬಾಗಿಲ ದೂಡಿ ಒಳ ಸೇರಿದ. ಅಲ್ಲಿ ವಿಶಾಲವಾದ ಅವಾರವಿತ್ತು. ಆ ಮನೆಯಲ್ಲಿ ೩೦-೩೫ ವರ್ಷಗಳ ಮುಂಚೆ ಬಹು ದೊಡ್ಡದೊಂದು ಕುಟುಂಬ ವಾಸಿಸುತ್ತಿತ್ತಂತೆ. ಮುಂದೆ ಅಕಸ್ಮಾತ್ ಒಬ್ಬರ ಹಿಂದೊಬ್ಬರಂತೆ ಅಲ್ಲಿಯವರೆಲ್ಲರೂ ಸ್ವಲ್ಪೇ ದಿನಗಳಲ್ಲಿ ಸತ್ತುಹೋದರಂತೆ. ಅವರೆಲ್ಲರೂ ದೆವ್ವಗಳಾದ್ದರಿಂದ, ಅಲ್ಲಿಗೆ ಮಿಕ್ಕವರಾರೂ ಹೋಗದಾದರಂತೆ. ಅಂದಿನಿಂದ ಆ ಮನೆ ಹಾಳು ಬಿದ್ದಿತ್ತು. ಅಂಥ ಆ ಭಯಂಕರ ಮನೆಗೆ ಹೋಗಲಿಕ್ಕೆ ಒಳ್ಳೇ ಸಾಹಸಿಯಾದ ಬ್ಲೇಕನೂ ಕೂಡ ಅಂಜಿದ; ಆದರೂ ಆತ ತನ್ನ ಕಾರ್ಯನಿರ್ವಾಹಕ್ಕಾಗಿ ಮುಂದೆ ಮುಂದೆ ಸಾಗ ಹತ್ತಿದ.

ಆ ಒಳಂಗಳ ದಾಟಿ, ಆತ ಆ ಮನೆಯ ಹಿಮ್ಮಗ್ಗಲಿನಲ್ಲಿದ್ದ ಒಂದು ಬಾಗಿಲಿಗೆ ತಲುಪಿದ. ಆಗ ಆ ಬಾಗಿಲು ಮುಚ್ಚಿತ್ತು; ಆದರೆ ಆತ ಒಂದಿಷ್ಟು ದೂಡಿದ ಕೂಡಲೆ ಅದು ತೆರೆಯಿತು. ಬಹು ದಿನಗಳಿಂದ ಮುಚ್ಚಲ್ಪಟ್ಟ ತಿರುಗಣಿಯ ಕದಗಳನ್ನು ದೂಡಲಿಕ್ಕೆ ಎಷ್ಟು ಕಸುವು ಬೇಕಾಗುವದೋ ಅಷ್ಟು ಅದಕ್ಕೆ ಬೇಕಾಗಲಿಲ್ಲ. ಅದು ಸಹಜವಾಗಿ ತೆರೆಯಿತು; ಅಲ್ಲದೆ ಅದು 'ಕಿರ್ರ್ರ್ರ್' ಎಂಬ ಶಬ್ದವನ್ನೂ ಮಾಡಲಿಲ್ಲ. ಆತ ಆ ಬಾಗಿಲೊಳಗೆ ಹೋಗಿ ಕೆಲ ನಿಮಿಷಗಳ ವರೆಗೆ ಯೋಚಿಸಿದ. ತನ್ನನ್ನು ಜಾಲದಲ್ಲಿ ಕೆಡಹುವದಕ್ಕಾಗಿ ವೈರಿಪಕ್ಷದವರು ಇಲ್ಲಿಗೆ ತನ್ನನ್ನು ಬೇಕೆಂತ ಬರಮಾಡಿಕೊಂಡಿರುವರೆಂದೂ ಇಂಥ ಭೂತಾಟಿಕೆಯ ಸ್ಥಳದಲ್ಲಿ ಛಾಯೋಲೆಯ ವಾಸ್ತವ್ಯ ಅಸಂಭವವೆಂದೂ ಅವನಿಗನಿಸಹತ್ತಿತು. ಆದರೂ ಆತ ಹಿಂದಿರುಗದೆ, ಹಾಗೆಯೇ ಮುಂದಕ್ಕೆ ನಡೆದ. ಆತ ಅಲ್ಲಿಯ ದೊಡ್ಡ ನಡುಮನೆಯೊಂದನ್ನು ದಾಟಿ ಮತ್ತೊಂದು ಬಾಗಿಲ ಬಳಿಗೆ ಹೋದ. ಆ ಬಾಗಿಲವೂ ಮುಚ್ಚಲ್ಪಟ್ಟಿತ್ತು; ಆದರೆ ಅದರ ಪಕ್ಕದಲ್ಲಿದ್ದ ಕಿಟಕಿ ಮಾತ್ರ ತೆರೆದಿತ್ತು. ಆ ಕಿಟಕಿಯ ಚೌಕಟ್ಟು ನೆಲದಿಂದ ಎದೆಮುಟ ಎತ್ತರದ ಮೇಲಿತ್ತು. ಬ್ಲೇಕ ಆ ಕಿಟಕಿಯಲ್ಲಿ ಜಿಗಿದು ಏರಿ, ಅಲ್ಲಿಂದ ಬೇರೆ ಕೋಣೆ ಹೊಕ್ಕ.

ಆ ಕೋಣೆಯಲ್ಲಿ ಹೆಚ್ಚಾಗಿ ಧೂಳ ಬಿದ್ದಿತ್ತು. ಆ ಧೂಳದಲ್ಲಿ ಯಾರ ಕಾಲ ಗುರ್ತಾದರೂ ಮೂಡಿವೆಯೇನೆಂದು ನೋಡುವ ಸಲುವಾಗಿ ಆತ ತನ್ನ ಜೇಬಿನೊಳಗಿನ ಬಿಜಲಿಯ ಕೀಲವನ್ನೊತ್ತಿದ. ಆ ಕೋಣೆಯ ಬಾಗಿಲದಿಂದ ನಿಚ್ಚಣಿಕೆಯ ವರೆಗೆ ಎಷ್ಟೋ ಪದಚಿಹ್ನಗಳು ಅವನಿಗೆ ಕಾಣ

ಸಿದವು. ಅವೆಲ್ಲ ಮನುಷ್ಯರ ಹೆಜ್ಜೆಗಳೇ ಆಗಿದ್ದವು. ಆತ ಆ ಕೋಣೆಯ ಗೋಡೆಯನ್ನು ಪರೀಕ್ಷಿಸುತ್ತ ಬೇರೊಂದು ಬಾಗಿಲ ಬಳಿಗೆ ಹೋದ. ಆ ಬಾಗಿಲಿಗೆ ಹಳೆಯದೊಂದು ತಂತಿಯ ಹಗ್ಗ ಕಟ್ಟಲ್ಪಟ್ಟಿತ್ತು. ಆ ತಂತಿ ಮುಚ್ಚಲ್ಪಟ್ಟ ಒಂದು ಬಾಗಿಲ ಫಡಕಿನ ಮೇಲೆ ಹಾಯ್ದು ಬಂದದ್ದರಿಂದ, ಬಾಗಿಲ ತೆರೆದೊಡನೆಯೇ ಆ ತಂತಿ ಜಗ್ಗುವಂತಿತ್ತು. ಅವನು ಅದನ್ನು ಸೂಕ್ಷ್ಮವಾಗಿ ನಿರೀಕ್ಷಿಸಿದ ಆ ತಂತಿಯ ಎರಡನೇ ತುದಿ ನೆಲದಲ್ಲಿ ಹೂಳಿದಂತೆ ತೋರಿತು. ಅದನ್ನು ಕಂಡು, ಈ ಕೋಣೆಯ ನೆಲದೊಳಗೆ ಯಾವುದೊಂದು ಸ್ಫೋಟಕ ದ್ರವ್ಯಗಳಿಂದ ತುಂಬಲ್ಪಟ್ಟ ಬಾಂಬು ಹೂಳಲ್ಪಟ್ಟಿದ್ದು, ಬಾಗಿಲ ಮೇಲಿನ ಈ ವಿದ್ಯುತ್ ತಂತಿ ಆ ಬಾಂಬಿನ ಬಾಯಿಗೆ ಸಂಲಗ್ನವಾಗಿರುವದರಿಂದ, ಬಾಗಿಲ ತೆರೆದೊಡನೆಯೇ ತಂತಿಯ ಜಗ್ಗುವಿಕೆಯಿಂದ ಬಾಂಬಿಗೆ ವಿದ್ಯುತ್ತಿನ ಧಕ್ಕೆ ತಗಲಿ, ಅದು ಒಮ್ಮೆಲೆ ಒಡೆದು, ಈ ಕೋಣೆಯನ್ನೇ ವಿದೀರ್ಣಗೊಳಿಸಿ, ಇದರಲ್ಲಿ ತನ್ನ ನಿರ್ನಾಮವಾಗುವದೆಂದು ಆತನ ಕಲ್ಪನೆಯಾಯಿತು.

ಕೂಡಲೆ ಬ್ಲೇಕ ಆ ಬಾಗಿಲ ಬಳಿಗೆ ಹೋಗಿ ತನ್ನಲ್ಲಿಯ ಸಾಮಗ್ರಿಯಿಂದ ಮೆಲ್ಲನೆ ಆ ತಂತಿಯನ್ನು ಕತ್ತರಿಸಿ ಚೆಲ್ಲಿದ. ಇನ್ನು ಏನು ಮಾಡಬೇಕೆಂಬ ಬಗ್ಗೆ ಆತ ಅಲ್ಲಿಯೇ ಕೆಲ ಕ್ಷಣಗಳವರೆಗೆ ನಿಂತು ಆಲೋಚಿಸಿದ. ಆ ಮುಚ್ಚಿದ ಬಾಗಿಲದಾಚೇ ಬದಿಗೆ ಯಾವ ಕೋಣೆಯಿದೆಯೋ, ಅಲ್ಲಿಯೇ ಭಾಯೋಲೆಯ ಆ ಕಾವಲುಗಾರರಿರಬೇಕೆಂದು ಆತನ ಊಹೆಯಾಯಿತು. ಆ ಕಾವಲುಗಾರರಿಗೆ ತಿಳಿಯದ ಹಾಗೆ ಭಾಯೋಲೆಯನ್ನು ಬೇರೆ ಕಡೆಗೆ ದಾಟಿಸುವದು ಸಾಧ್ಯವೋ-ಅಸಾಧ್ಯವೋ ಎಂಬದೇ ಆಗಿನ ಮುಖ್ಯ ಚಿಂತೆಯ ವಿಷಯವಾಯಿತು. ಮೆಲ್ಲಮೆಲ್ಲನೆ ಆ ಕೋಣೆಯೊಳಗಿನ ನಿಚ್ಚಣಿಕೆಯನ್ನೇರಿ ಹೋಗಿ, ಮೇಲಂತಸ್ತಿನೊಳಗಿನ ಪ್ರತಿಯೊಂದು ಕೋಣೆಯನ್ನು ನಿರೀಕ್ಷಿಸಿದ. ಅಲ್ಲಿ ಅವನಿಗೆ ಒಂದು ವ್ಯಕ್ತಿಯೂ ಕಾಣಿಸಲಿಲ್ಲ. ಬಳಿಕ ಆತ ಕೆಳಗಿಳಿದು ಕೆಳಗಿನ ಕೋಣೆಗಳನ್ನೆಲ್ಲ ಪರೀಕ್ಷಿಸಬೇಕೆಂದು ಸಂಕಲ್ಪಿಸಿದ; ಆಗ ಆತ ತನ್ನ ಬಕ್ಕಣದೊಳಗಿನ ಗಡಿಯಾರ ತೆಗೆದು ನೋಡಿದ; ಹೆನ್ನೆರಡಕ್ಕೆ ಸ್ವಲ್ಪೇ ನಿಮಿಷಗಳ ಅವಕಾಶವಿತ್ತು. ಆತ ಅಲ್ಲಿಯ ಕಿಟಕಿಯೊಳಗಿಂದ ಆ ಮನೆಯ ಪೂರ್ವ ಭಾಗದ ಕೋಣೆಯ ಕಡೆಗೆ ನೋಡಿದ ಕೂಡಲೆ, ಅಲ್ಲಿ ಬಹು ದೊಡ್ಡ ಉರಿ ಕಾಣಿಸಿತು. ಭಾಯೋಲೆಯ ಆ ಕಾವಲುಗಾರರು

ಈ ಉರಿಯ ಸಂಜ್ಞೆಯಿಂದಲೇ ತನ್ನ ಇರವನ್ನು ನನಗೆ ತೋರಿಸಲುದ್ಯುಕ್ತಳಾಗಿರುತ್ತಾಳೆಂದು ಆತ ತಿಳಿದ. ಈಕೆಯ ಈ ಉರಿ ನೋಡಿಯೇ ಇತ್ತ ಕಡೆಯ ಜನರು ಇದು ದೆವ್ವದ ಚೇಷ್ಟೆಯೆಂದು ಭಾವಿಸಿ ಗಾಬರಿಗೊಂಡಿರುವರೆಂದೂ ಆತ ಊಹಿಸಿದನು.

ಆ ಉರಿಯನ್ನು ಯಾರು ಹಚ್ಚಿರುತ್ತಾರೆಂಬದನ್ನು ತಿಳಿಯುವ ಸಲುವಾಗಿ ಬ್ಲೇಕ ಆ ಮೇಲುಪ್ಪರಿಗೆಯ ಪಡಸಾಲೆಯ ನೆಲಕ್ಕೆ ಬೆನ್ನು ಹಚ್ಚಿ ಬಿದ್ದುಕೊಂಡು, ಬಾಲದ ಹುಳದಂತೆ ಸರಿಯುತ್ತ ಪಡಸಾಲೆಯ ತುದಿಗೆ ಹೋದ. ಎದ್ದು ನಿಂತು ಹೋದರೆ, ಆ ಬೆಳಕಿನಲ್ಲಿ ತನ್ನ ಆಗಮನ ಆ ವ್ಯಕ್ತಿಗೆ ತಿಳಿಯಬಹುದೆಂದು ಆತ ಈ ಬಗೆಯ ಯುಕ್ತಿಯಿಂದ ಮುಂದರಿದ. ಅಲ್ಲಿಂದ ಆವನಿಗೇನೂ ಕಾಣಿಸಲಿಲ್ಲ. ಅದರಿಂದಲಾತ ಸರಿದು ಹಿಮ್ಮಗ್ಗಲಿನ ಬಾಗಿಲನ್ನಿಕ್ಕಿಕೊಂಡು, ಎದುರಿಗಿನ ಒಂದು ಬಾಗಿಲ ಮರೆಗೆ ನಿಂತುಕೊಂಡು ನೋಡಹತ್ತಿದ. ಕೆಲ ಹೊತ್ತಿನಲ್ಲಿಯೇ ಸಮೀಪದಲ್ಲೆಲ್ಲಿಯೋ ಹನ್ನೆರಡು ಬಡಿದ ಸಪ್ಪಳ ಕೇಳಿಸಿತು. ಅದರ ಜೊತೆಗೇ ಯಾವ ಕಡೆಯಿಂದಲೋ ಪಿಸ್ತೂಲಿನ ಗುಂಡಿನ ಶಬ್ದದಂತೆ 'ಗುಢುಂ' ಎಂಬ ಶಬ್ದವಾಯಿತು. ಆ ಶಬ್ದವಡಗುವಷ್ಟರಲ್ಲಿಯೇ ಆ ಕೋಣೆಯೊಳಗಿನ ಒಂದು ಕಡೆಗೆ ಒಂದು ಬಹು ಎತ್ತರವಾದ ಮೂರ್ತಿ ಬಿಳೀ ವಸ್ತ್ರದಿಂದ ತನ್ನ ಮೈಯನ್ನೆಲ್ಲ ಮುಚ್ಚಿಕೊಂಡು ಬಂದು ನಿಂತಿರುವಂತೆ ಆತನಿಗೆ ಕಾಣಿಸಿತು. ಆತ ಅದಕ್ಕೂ ಮೊದಲಿನ ಕ್ಷಣದಲ್ಲಿ ಅಲ್ಲಿ ಯಾರನ್ನೂ ಕಂಡಿರಲಿಲ್ಲ. ಕಣ್ಣು ಮುಚ್ಚಿ ಕಣ್ಣು ತೆರೆಯುವಷ್ಟರಲ್ಲಿ ಇದು ಯಾವ ಕೌಶಲ್ಯದಿಂದ ಇಲ್ಲಿಗೆ ಬಂದಿರಬಹುದೆಂಬದನ್ನು ಆತ ಕಲ್ಪಿಸದಾದ. ಆಗ ಭಯ ಮತ್ತು ವಿಸ್ಮಯಗಳಿಂದ ಆತನ ಮೈಮೇಲೆ ರೋಮಾಂಚಗಳೆದ್ದವು.

ಆ ಮೂರ್ತಿ ಸುಮ್ಮನೆ ಕವಿಸೆಳಲಿನಂತೆ ಎದುರಿಗಿನ ಕಿಟಕಿಯ ಬಳಿಗೆ ಹೋಗಿ ನಿಂತುಕೊಂಡಿತು. ಅದರ ಸರ್ವಾಂಗ ನೀಲೀಬಣ್ಣದಿಂದ ಹೊಳೆಯಹತ್ತಿತು. ಆ ಮೂರ್ತಿ ಆ ಬೆಳಕಿನಲ್ಲಿ ತನ್ನ ಎರಡೂ ಕೈಗಳನ್ನು ಮೇಲಕ್ಕೆತ್ತಿ, ಹತಾಶೆಯಿಂದ ಗೋಣು ಅಲ್ಲಾಡಿಸಿತು. ತಾನು ನಿಜವಾಗಿಯೂ ಯಾವದೊಂದು ಪ್ರಚಂಡ ದೆವ್ವದ ಮನೆಗೆ ಬಂದಿರುವೆನೆಂದು ತಿಳಿದ ಬ್ಲೇಕ ಭಯಗೊಂಡು, ಆ ಮೂರ್ತಿಯ ಕಡೆಗೆ ಒಂದೇಸವನೆ ನೋಡುತ್ತ ನಿಂತ. ಮುಂದೆ ಕೆಲ ನಿಮಿಷಗಳಲ್ಲೇ ಪಶ್ಚಿಮ ದಿಕ್ಕಿನ ಕಡೆಗೆ ಮೋಡಗವಿಯ ಹತ್ತಿ

ದವು. ನೋಡ ನೋಡುತ್ತಿರಲಿಕ್ಕೆ ಅವು ಇಡಿ ಆಕಾಶವನ್ನೇ ಮುಚ್ಚಿಕೊಂಡವು; ಹಾಗು ಬಿರುಗಾಳಿ ಬಿಟ್ಟಿತು. ಆ ಗಾಳಿಯಿಂದ ಆ ಹಳೇ ಹಾಳು ಮನೆ ಥರಥರನೆ ನಡುಗಲಾರಂಭಿಸಿತು; ಹಾಗು ಖಟ್‌ಖಡಲ್ಲೆಂಬ ಸಿಡಲಿನ ಸಪ್ಪಳದಿಂದ ಬ್ಲೇಕನ ಕಿವಿಗಳು ಗಡಚಿಕ್ಕಿದವು. ಬಿರುಗಾಳಿಯಿಂದ ಆ ಹಾಳು ಮನೆಗೆ ಹೊಂದಿರುವ ದೊಡ್ಡ ದೊಡ್ಡ ಮರಗಳು ಹೊಯ್ದಾಡಹತ್ತಿ, ಪ್ರಳಯಕಾಲದ ಅಭಾಸವನ್ನುಂಟು ಮಾಡಹತ್ತಿದವು. ಅಷ್ಟರಲ್ಲಿ ಝಿುವ್‌ ಝಿುವ್‌ ಶಬ್ದದಿಂದ ದೊಡ್ಡ ಮಳೆಗೂ ಪ್ರಾರಂಭವಾಯಿತು. ಆ ಮನೆಯ ಮುರುಕ ಕಿಡಕಿಗಳಿಂದ ಮಳೆಯ ಹನಿಗಳೂ ಗಾಳಿಯ ಹೊಡೆತದಿಂದ ಗಿಡ ಮರಗಳ ಒಣಗಿದ ಎಲೆ-ಟೊಂಗೆಗಳೂ ಆ ಕೋಣೆಯಲ್ಲಿ ಬಂದು ಬೀಳಹತ್ತಿದವು. ಆ ಹಾಳು ಮನೆಯ ಮಾಳಿಗೆಯಿಂದ ಬ್ಲೇಕನ ತಲೆಯ ಮೇಲೆ ಎಷ್ಟೋ ಮಣ್ಣು ಕಳಚಿಬಿತ್ತು. ಆ ಮೇಲೆ ಒಂದು ಗಾಳಿಯ ಹೊಡೆತದಿಂದ ಅಂಗಳದೊಳಗಿನ ಆ ದೊಡ್ಡ ಉರಿ ಒಮ್ಮೆಲೆ ಆರಿತು. ಆಗ ಬ್ಲೇಕ ಆ ಗಾಢವಾದ ಅಂಧಕಾರದಲ್ಲಿ ಮುಂದುಗಾಣಲಾರದೆ ನಿಂತು ಬಿಟ್ಟ.

ಮುಂದೆ ಎರಡೇ ನಿಮಿಷಗಳಲ್ಲಿ ಆ ಜ್ವಾಲೆ ಮತ್ತೆ ಉರಿಯಲುಪಕ್ರಮಿಸಿತು. ಯಾವ ಕಡೆಯಿಂದ ಆ ಪಡಸಾಲೆಯೊಳಗೆ ಬೆಳಕು ಬೀಳುತ್ತಿತ್ತೋ, ಅದೇ ದಿಕ್ಕಿಸಿಂದ ಕೈಯಲ್ಲಿ ಬಿಜಲಿ ಹಿಡಕೊಂಡು ಬರುತ್ತಿದ್ದ ಭಾಯೋಲೆಯ ಆ ಕಾವಲುಗಾರಳು ಕಾಣಿಸಿದಳು. ಆಗ ಅವಳು ಬ್ಲೇಕನ ಎದುರಿಗೆ ಬಂದು:—ಪತ್ತೆದಾರರಿಗೆ ನಮಸ್ಕಾರ. ನೀವು ನಿಜವಾಗಿಯೂ ಬಂದೇ ಬಿಟ್ಟಿರುವಿರಲ್ಲ? ಎಂದು ಕೇಳಲು,

'ನಾನು ಬಂದಿರುವದನ್ನು ನೀನು ಈಗ ನೋಡಿದೆಯಾ? ನಾನು ನನ್ನ ವಚನಕ್ಕೆಂದೂ ತಪ್ಪುವವನಲ್ಲ.'

ಆಕೆ ಬಾಯಿಂದ ಏನೂ ಅನ್ನದೆ, ಆತನಿಗೆ ತನ್ನ ಹಿಂದೆ ಬರಲಿಕ್ಕೆ ಸೂಚಿಸಿದಳು. ಬ್ಲೇಕ ಅವಳೊಡನೆ ಹೋಗಿ ಒಂದು ಚಿಕ್ಕ ಕೋಣೆ ಹೊಕ್ಕ. ಆ ಕೋಣೆಯೊಳಗೊಂದು ಸಣ್ಣ ಮುರುಕ ಮೇಜೂ, ಅಂಥವೇ ಎರಡು ಕುರ್ಚಿಗಳೂ ಇದ್ದವು. ಆ ಟೇಬಲ್ಲಿನ ಮೇಲೆ ಈ ಮೊದಲು ಯಾರೋ ಏನನ್ನೋ ತಿಂದ ಎಂಜಲು ಬಿದ್ದಿತ್ತು. ಅವಳು ಆ ಕೋಣೆಯಲ್ಲಿ ಟೆನ್ನಿನದೊಂದು ಕೈಚಿಮಣಿ ಹಚ್ಚಿ, ಒಂದು ಕುರ್ಚಿಯ ಮೇಲೆ ತಾನು ಕುಳಿತಳು; ಇನ್ನೊಂದರ ಮೇಲೆ ಬ್ಲೇಕನಿಗೆ ಕೂಡ್ರಲಿಕ್ಕೆ ಕೈಸನ್ನೆಯಿಂದ ತಿಳಿಸಿದಳು.

ಆ ಕೋಣೆಯೊಳಗಿನದೊಂದು ಬಾಗಿಲಿಗೆ ಸಂಪೂರ್ಣ ಪರಪೆ ಹಾಕಿದ್ದುದನ್ನು ಬ್ಲೇಕ ಕಂಡ. ಆ ಕೋಣೆಗೆ ಬೇರೆ ಯಾವ ಬಾಗಿಲಾಗಲಿ, ಕಿಟಕಿಯಾಗಲಿ ಇರಲಿಲ್ಲ; ಮತ್ತು ಅಲ್ಲಿ ಬೇರೆ ದೀಪವಿದ್ದ ಹಾಗೆಯೂ ಕಾಣುತ್ತಿರಲಿಲ್ಲ; ಅಲ್ಲದೆ ಆ ಕೋಣೆಯೊಳಗಿಂದ ಯಾವ ಬಗೆಯ ಶಬ್ದವೂ ಆತನಿಗೆ ಕೇಳಿಸಲಿಲ್ಲ. ಆಗ ಬ್ಲೇಕ:—ಛಾಯೋಲೆ ಎಲ್ಲಿ ಇರುತ್ತಾಳೆ? ಎಂದು ಕೇಳಲು,

'ಆಕೆ ಸಮೀಪದಲ್ಲಿಯೇ ಇರುತ್ತಾಳೆ; ಆದರೆ ನನ್ನ ಕರಾರಿಗೊಪ್ಪದ ಹೊರತು, ನಾನು ನಿಮ್ಮನ್ನು ಅವಳ ಬಳಿಗೆ ಕರೆದೊಯ್ಯಲಾರೆ.'

'ಪ್ರತಿಯೊಂದು ಮಾತಿಗೂ ನಿನ್ನ ಕರಾರುಗಳಿದ್ದೇ ಇವೆ. ಈಗಿನ ನಿನ್ನ ಕರಾರಾದರೂ ಯಾವದು?'

ಕೂಡಲೆ ಆ ಕಾವಲುಗಾರಳು ಆತನೆದುರಿಗೊಂದು ಕಾಗದ ಚೆಲ್ಲಿದಳು. ಛಾಯೋಲೆ ಸ್ವಹಸ್ತದಿಂದ ಬರೆಕೊಟ್ಟಿದ್ದ ಆದೊಂದು ಸಾವಿರ ಪೌಂಡುಗಳ ಚೆಕ್ಕಾಗಿತ್ತು. ಬಳಿಕ ಆ ಪಹರೆಯವಳು:—ಸತ್ತೇದಾರರೇ, ಈ ಚೆಕ್ಕಿಗೆ ಏನೂ ಬೆಲೆಯಿಲ್ಲೆಂಬದನ್ನು ನೀವು ತಿಳಿದಿರಬಹುದಾಗಿದೆ; ಯಾಕಂದರೆ, ಯಾವ ಬ್ಯಾಂಕಿನಲ್ಲಿಯೂ ಛಾಯೋಲೆಯ ಹಣವಿಲ್ಲೆಂಬದು ನನಗೆ ಗೊತ್ತಿದೆ. ಆದಕ್ಕಾಗಿ ಈ ಚೆಕ್ಕಿನ ಬದಲು, ನಿಮ್ಮ ಕೈಬರೆಹದ ಸಾವಿರಪೌಂಡಿನ ನಿಮ್ಮ ಚೆಕ್ಕೊಂದನ್ನು ನನಗೆ ಕೊಡಬೇಕೆಂದು ನನ್ನಿಚ್ಛೆಯಿದೆ. ನೀವು ಇದಕ್ಕೆ ಒಪ್ಪಿಕೊಂಡರೆ ಮಾತ್ರ ನಾನು ನಿಮ್ಮ ಕೆಲಸಕ್ಕೆ ಸನ್ನದ್ಧಳಾಗುತ್ತೇನೆ.

'ನಾನು ನಿನ್ನೆದುರಿಗೊಪ್ಪಿ ಚೆಕ್ಕು ಬರೆಕೊಟ್ಟು, ಆ ಮೇಲೆ ನಿನಗೆ ಹಣ ಕೊಡಬೇಡೆಂದು ಬ್ಯಾಂಕಿಗೆ ತಿಳಿಸಿದರೆ?'

'ಈ ಸಾವಿರ ಪೌಂಡಿಗಾಗಿ ನೀವು ನಿಮ್ಮ ವಚನಭಂಗಪಡಿಸಿಕೊಂಡೀರೆಂದು ನನಗೆನಿಸುವದಿಲ್ಲ.'

ಬ್ಲೇಕ ಮರು ಮಾತನಾಡದೆ, ತನ್ನ ಕಿಸೆಯೊಳಗಿನ ಚೆಕ್ಕಬುಕ್ಕ ತೆಗೆದು, ಸಾವಿರ ಪೌಂಡಿನದೊಂದು ಚೆಕ್ಕು ಬರೆದು, ಅದನ್ನು ಆ ಪಹರೆಯವಳ ಕೈಗಿತ್ತು, ಛಾಯೋಲೆಯ ಆ ಚೆಕ್ಕನ್ನು ಹರಿದು ಚೆಲ್ಲಿದ. ಬಳಿಕ ಆತ ಎದ್ದು ನಿಂತು:—ಚೆಕ್ಕಂತೂ ದೊರೆಕಿತೇ? ಇನ್ನು ಬೇಗನೆ ಛಾಯೋಲೆಯನ್ನು ತೋರಿಸು, ಎನಲು,

'ಅಗೋ, ಆ ಹಳೆಯ ಟಾವರಿನ ಬುರುಜಿನ ಕೆಳಗಡೆಯ ಕೋಣೆಯಲ್ಲಿ ಆಕೆ ನಿನ್ನ ಮಾರ್ಗ ನಿರೀಕ್ಷಿಸುತ್ತ ಕುಳಿತಿರುತ್ತಾಳೆ.'

ಕ್ಷಣಾರ್ಧದಲ್ಲಿ ಯಾರದೋ ಕಾಲ ಸಪ್ಪಳವು ಕೇಳ ಬರಲು, ವಿಶ್ವಾಸ ಘಾತದ ಸಂದೇಹದಿಂದ ಬ್ಲೇಕ ಗೋಡೆಗೆ ಬೆನ್ನು ಆನಿಸಿ ನಿಂತು, ಬಕ್ಕಣದೊಳಗಿನ ಪಿಸ್ತೂಲು ತೆಗೆದ; ಆದರೆ ಆ ಕಾಲುಸಪ್ಪಳ ಮತ್ತೆ ಕೇಳಬರಲಿಲ್ಲ. ಪಹರೆಯುವಳು ಮೆಲ್ಲನೆ:—ನಾನು ನಿಮಗೊಬ್ಬರಿಗೇ ಬರಲಿಕ್ಕೆ ಹೇಳಿದ್ದಿಲ್ಲವೇ? ಹೀಗಿದ್ದು, ನೀವು ಬೇರೊಬ್ಬ ಸಂಗಡಿಗನನ್ನು ಏಕೆ ಕರೆತಂದಿರಿ?

'ಛೇ-ಛೇ, ನಾನೊಬ್ಬನೇ ಬಂದಿರುತ್ತೇನೆ. ನನ್ನೊಡನೆ ಯಾರೂ ಬಂದಿಲ್ಲ.'

'ನಿಜವೇ? ಹಾಗಾದರೆ ಇಲ್ಲಿಗಾರು ಬಂದಿರುವರು?' ಹೀಗೆಂದು ಹೇಳಿ, ಆವಳು ಆ ದೀಪವನ್ನು ತಕ್ಕೊಂಡು ಒಮ್ಮೆಲೆ ಹೊರಗೆ ಹೊರಟು ಹೋದಳು.

ತಾನು ವಿಪತ್ತಿಗೀಡಾದರೆ ತನ್ನ ಸಹಾಯಕ್ಕೆಂದು ಸ್ಮಿತ್ಥ ತನಗೆ ತಿಳಿಯದ ಹಾಗೆ ಇಲ್ಲಿಗೆ ಬಂದಿರಬಹುದೆಂದೂ, ಈ ನೀಚಳು ಅವನನ್ನು ಕಂಡೊಡನೆಯೇ ಚೂರಿಯಿಂದ ಇರಿಯುವಳೆಂದೂ ಬ್ಲೇಕ ಮನಸ್ಸಿನಲ್ಲಿ ಯೋಚಿಸಿ, ಲಗುಬಗೆಯಿಂದ ಹೊರಗೆ ಬಂದು, ಆಕೆಯ ಕೈಯಲ್ಲಿಯ ಬಿಜಲಿಯ ಬೆಳಕಿನಲ್ಲಿ ನೋಡುತ್ತಾನೆ, ಆ ಆಗಂತುಕ ಸ್ಮಿತ್ಥನಾಗಿರಲಿಲ್ಲ. ಯಾವನೊಬ್ಬ ಹರಕು ವೇಷದ ಕುರೂಪಿ ಬಡ ದಾರಿಕಾರ ಟಾವರದ ಕಡೆಗೆ ನಡೆದಿದ್ದ.

ಕೂಡಲೆ ಆ ಕಾವಲುಗಾರಳು ಒದರುತ್ತ:— ಹಾಕಿರವನಿಗೆ ಗುಂಡು! ಬ್ಲೇಕರೆ, ಗುಂಡು ಹಾಕಿ ಕೊಲ್ಲಿರಿವನನ್ನು! ಅವನನ್ನು ಆ ಟಾವರದ ಬದಿಗೆ ಹೋಗಗೊಡಬೇಡಿರಿ, ಎಂದಂದಳು. ಬ್ಲೇಕ ಆ ಟಾವರಿನ ಬಳಿಗೆ ಹೋಗುವಷ್ಟರಲ್ಲಿಯೇ ಆ ಬಡ ಪಥಿಕ ಓಡುತ್ತ ಹೋಗಿ ಪ್ರಾಣಭಯದಿಂದ ಅಲ್ಲಿದ್ದ ಪಾವಟಿಗೆಗಳ ಮೇಲಿಂದ ಆ ಟಾವರನ್ನೇರಿದ; ಆದರೆ ಕಣ್ಣುರೆಪ್ಪೆ ಬಡಿಯುವಷ್ಟರಲ್ಲಿ ಆತ ಆ ಪಾವಟಿಗೆಗಳಿಂದ ಜಾರಿ, ಭೂಗರ್ಭವನ್ನು ಸೇರಿಬಿಟ್ಟ! ಬ್ಲೇಕನಿಗೆ ಆತನ ಆಗಿನ ಪ್ರಾಣಾಂತಿಕ ಒದರಾಟ ಕೇಳಿಸಿತು, ಪರ ಕ್ಷಣದಲ್ಲಿಯೇ ಎಲ್ಲ ಕಡೆಗೂ ನಿಸ್ತಬ್ಧವಾಗಿ ಬಿಟ್ಟಿತು. ಬ್ಲೇಕ ಭಯಕಂಪಿತನಾಗಿ ಎದುರಿಗೆ ನೋಡುತ್ತಾನೆ ಅಲ್ಲಿ ಒಂದು ಬಹು ದೊಡ್ಡ ಗವಿಯು ತೋರಿತು ಮತ್ತೇನೂ ಕಾಣಿಸಲಿಲ್ಲ! ಅಷ್ಟರಲ್ಲಿ ಬ್ಲೇಕ ಹಿಂದಿರುಗಿ ನೋಡುತ್ತಾನೆ, ಆ

ಪಹರೆಯವಳು ತನ್ನ ಬೆನ್ನಿನ ಮೇಲೆ ಹೊಡೆಯುವದಕ್ಕೆಂದು ತನ್ನ ನಿಡಿದಾದ ಚೂರಿ ನೆಗಹಿದ್ದಾಳೆ. ಮುಹೂರ್ತ ಮಾತ್ರದಲ್ಲಿ ಅದರಿಂದ ಇವನ ದೇಹ ಇಬ್ಭಾಗವಾಗುವದರಲ್ಲಿತ್ತು.

ಬ್ಲೇಕ ಒಮ್ಮೆಲೆ ಟಣ್ಣೆಂದು ಜಿಗಿದು, ಆಕೆಯ ಮುಂಗೈಯನ್ನು ಗಟ್ಟಿಯಾಗಿ ಹಿಡಿದು, ಚೂರಿ ಕಸಿದೊಗೆದ. ಅವಳು ಅವನ ಕೈಯಿಂದ ಕೊಸರಿಕೊಳ್ಳಲುದ್ಯುಕ್ತಳಾಗಿ, ಬಾಯಿಂದ ಗ್ರಾಮ್ಯ ಬೈಗಳನ್ನು ಬೈಯುಹತ್ತಿದಳು. ಕೂಡಲೆ ಬ್ಲೇಕ ಅವಳನ್ನು ಗಟ್ಟಿಯಾಗಿ ಹಿಡಿದು, ಆ ಟಾವರಿನ ಕಲ್ಲುಗೊಡೆಗೆ ಚೆನ್ನಾಗಿ ಅಪ್ಪಳಿಸಿದ. ಆ ಪೆಟ್ಟಿನಿಂದ ಅವಳ ತಲೆಯೊಡೆಯಿತು. ಪರ ಕ್ಷಣದಲ್ಲಿ ಅವಳಿಗೆ ಜವಳಿ ಬರಲು, ಅವಳು ಬ್ಲೇಕನ ಕಾಲುಬದಿಗೇ ದೊಪ್ಪೆಂದು ಬಿದ್ದುಬಿಟ್ಟಳು. ಆಗ ಆತ ತನ್ನ ಜೇಬಿನೊಳಗಿನ ನೂಲಿನ ಹಗ್ಗವನ್ನು ತಕ್ಕೊಂಡು ಅವಳ ಕೈಕಾಲುಗಳನ್ನು ಚೆನ್ನಾಗಿ ಕಟ್ಟಿಬಿಟ್ಟ. ಆ ಮೇಲೆ ಆತ ಎದುರಿಗೆ ನೋಡಲು, ಈ ಮೊದಲಿನ ಆ ಗವಿ ಮಾಯವಾಗಿಬಿಟ್ಟಿತ್ತು. ಆ ಟಾವರಿನ ಪಾವುಟಿಗೆಗಳು ಮೊದಲು ಹೇಗಿದ್ದವೋ ಹಾಗೆಯೇ ಇದ್ದವು.

ಆ ಅದ್ಭುತ ವ್ಯಾಪಾರ ಕಂಡ ಬ್ಲೇಕನ ವಿಸ್ಮಯ ಮೇರೆದಪ್ಪಿತು. ಇದೆಂಥ ದೆವ್ವನ ಚೇಷ್ಟೆ! ಬಳಿಕ ಆತ ಮೊದಲನೇ ಪಾವಟಿಗೆಯ ಮೇಲೆ ಒಂದು ಕಾಲನ್ನಿಟ್ಟು ಅದರ ಮೇಲೆ ಒಳ್ಳೇ ಭಾರ ಹಾಕಿದ. ಅದು ಜರೆಯಲಿಲ್ಲ; ಅಥವಾ ಒಳಸೇರಲಿಲ್ಲ. ಕ್ರಮವಾಗಿ ಒಂದೊಂದೇ ಎಂದು ಆತನು ಆ ಎಲ್ಲ ಪಾವಟಿಗೆಗಳನ್ನೂ ಹತ್ತಿ ಒತ್ತಿ ಪರೀಕ್ಷಿಸಿದ; ಹಾಗು ಕಟ್ಟಕಡೆಗೆ ಆ ಗುಮುಟದ ಕೆಳಬದಿಯ ಕೋಣೆಯನ್ನೂ ಪ್ರವೇಶಿಸಿದ; ಆದರೆ ಅಲ್ಲಿ ಅವನಿಗೆ ಯಾರೂ ಕಾಣಿಸಲಿಲ್ಲ. ಆಗ ಆತನಿಗೆ ಆ ನೀಚ ಪಹರೆಯವಳ ದುರುದ್ದೇಶ ತಟ್ಟನೆ ಹೊಳೆಯಿತು. ಇವನನ್ನು ಕೊಲ್ಲುವದೇ ಅವಳ ಬೇತಾಗಿದ್ದಿತು.

ಟಾವರಿನಿಂದಿಳಿದಿದ್ದ ಬ್ಲೇಕ ಆ ಕೋಣೆಯಿಂದ ಹೊರಬಿದ್ದು, ಬಾಗಿಲ ಹೊರಗೆ ಬಂದು ಅಡ್ಡಾಡ ಹತ್ತಿದ. ಆ ದುಷ್ಟ ಪಹರೆಯವಳು ಆಗ ಆ ಟಾವರಿನ ಪಾವಟಿಗೆಯ ಕೆಳಗೆ ಮೂರ್ಛೆಹೊಂದಿ ಬಿದ್ದುಕೊಂಡಿದ್ದಳು. ಆ ಪಾವಟಿಗೆಗಳು ಯಾವದೊ ಗುಪ್ತ ಕೌಶಲ್ಯದಿಂದ ಹಿಂದಕ್ಕೆ ಸರಿದುದರಿಂದ, ಅದರ ಕೆಳಗಿನ ಭಯಂಕರವಾದ ಗವಿಯಲ್ಲಿ ಆ ಬಡ ದಾರಿಕಾರನು ಬಿದ್ದು

ಪ್ರಾಣಕಳೆಕೊಂಡನೆಂದು ಬ್ಲೇಕನಿಗೆ ಈಗ ಚೆನ್ನಾಗಿ ತಿಳಿದಿತ್ತು; ಆದರೆ ಯಾವನಾದರೂ ಮರೆಗೆ ನಿಂತುಕೊಂಡು ಅದರ ಕೀಲನ್ನೊತ್ತಿದ ಹೊರತು, ಈ ಕೆಲಸವಾಗಲಾರದೆಂದು ಊಹಿಸಿದ ಅವನಿಗೆ, ಆ ಪಹರೆಯವಳ ಸಹಕಾರಿಯೊಬ್ಬ ಸಮೀಪದಲ್ಲೆಲ್ಲೋ ಅಡಗಿಕೊಂಡಿರುವನೆಂದು ಹೊಳೆಯಿತು.

ಬ್ಲೇಕ ಹಾಗೆಯೇ ಅಡ್ಡಾಡುತ್ತ ನಡೆದಿರಲು, ಅವನಿಗೆ ಆ ಹಾಳು ಮನೆಯ ದಕ್ಷಿಣ ದಿಕ್ಕಿಗೆ ಒಂದು ಕೋಣೆ ಸಿಕ್ಕಿತು. ಆತ ಕೈಯಲ್ಲಿ ಪಿಸ್ತೂಲನ್ನು ಹಿಡಕೊಂಡೇ ಅದರ ಕದವನ್ನು ನೂಕಿದ. ಕೂಡಲೆ ಅದು ತೆರೆಯಿತು. ಆ ಕೋಣೆ ಧೂಳದಿಂದಲೂ ಉಸುಗಿನ ರಾಶಿಯಿಂದಲೂ ತುಂಬಿತ್ತು; ಆದರೆ ಅದರೊಳಗೆ ಆತ ಯಾರನ್ನೂ ಕಾಣಲಿಲ್ಲ; ಯಾರ ಕಾಲ ಗುರ್ತೂ ಅಲ್ಲಿ ಅವನಿಗೆ ಕಾಣಿಸಲಿಲ್ಲ. ಏನೇ ಆಗಲಿ, ರಹಸ್ಯಭೇದದ ಸಲುವಾಗಿ ಆತನು ಹಲವು ಬಗೆಯಿಂದ ಪ್ರಯತ್ನಿಸಿ, ಕಟ್ಟಕಡೆಗೆ ಆ ಟಾವರಿನ-ಗುಮ್ಮಟದ ಕೆಳಗೆ ಯಾವ ಕೋಣೆಯಿದ್ದಿತೋ, ಆ ಕೋಣೆಯ ಕದ ಅರ್ಧ ತೆರೆದಿದ್ದಾಗ ಮಾತ್ರ ಆ ಪಾವಟಿಗೆಗಳ ಮೇಲೆ ಯಾರಾದರೂ ಕಾಲಿಟ್ಟರೆ ಸಾಕು; ಆ ಎಲ್ಲ ಪಾವಟಿಗೆಗಳೂ ಸ್ಥಾನಭ್ರಷ್ಟವಾಗುವವು; ಅಲ್ಲದೆ ಅದರ ಕೆಳಗಿನ ಆ ಭಯಂಕರ ಗವಿಯ ಬಾಗಿಲೂ ತೆರೆಯುವದು. ಆ ಮೇಲೆ ಆ ಕೋಣೆಯ ಬಾಗಿಲು ತನ್ನಷ್ಟಕ್ಕೆ ತಾನೇ ಮುಚ್ಚಿಕೊಳ್ಳುವದು; ಹಾಗು ಆ ಕೂಡಲೆ ಆ ಪಾವಟಿಗೆಗಳ ಸಾಲು ಮೊದಲಿನಂತಾಗುವದು. ಆ ಮೇಲೆ ಅದು ಬೇರೆ ಯಾವ ಕಾರಣದಿಂದಲೂ ಅಲ್ಲಾಡುತ್ತಿರಲಿಲ್ಲ; ಅಥವಾ ಸ್ಥಾನಚ್ಯುತವಾಗುತ್ತಿರಲಿಲ್ಲ, ಎಂಬದನ್ನು ಗೊತ್ತುಹಚ್ಚಿದ.

ಕೆಲ ನಿಮಿಷಗಳ ನಂತರ ಆ ಪಹರೆಯವಳು ಎಚ್ಚತ್ತಳು; ಹಾಗು ಕೈ ಕಾಲುಗಳನ್ನು ಬಿಡಿಸಿಕೊಳ್ಳುವದಕ್ಕಾಗಿ ಚೀರ್ಯಾಡಹತ್ತಿದಳು. ಬ್ಲೇಕ ಅವಳ ಹತ್ತರ ಬಂದು ನಿಲ್ಲಲು, ಅವಳು ಅವನನ್ನುದ್ದೇಶಿಸಿ:—ನೀನೊಳ್ಳೇ ಚತುರ ಪತ್ತೆದಾರನಿರುತ್ತೀ; ಅಲ್ಲದೆ ಎಲ್ಲ ಬಗೆಯ ಅಂಜಿಕೆ ತೊರೆದವನಾಗಿರುತ್ತೀ. ಆ ಬಡ ಹತಭಾಗ್ಯನ ಬದಲು ನಿನ್ನನ್ನು ರಸಾತಲಕ್ಕೆ ಮುಟ್ಟುವದು ಸಾಧಿಸಿದ್ದರೆ, ನನ್ನ ಶ್ರಮ ಸಾಫಲ್ಯವಾಗುತ್ತಿತ್ತು. ಅದಕ್ಕೆಂದೇ ನಾನು ನಿನ್ನನ್ನು ಇಲ್ಲಿಗೆ ಕರೆತಂದದ್ದು, ಎಂದಂದಳು.

'ಈ ಕೆಲಸಕ್ಕಾಗಿ ನಿನ್ನನ್ನು ಯೋಜಿಸದವರಾರೆಂಬದನ್ನು ನಾನು ಬಲ್ಲೆ. ನಿಮ್ಮ ಒಡೆಯನಾದ ಹ್ಯಾಮನ್ ಆರ್ಟನ್ನ ಇನ್ನೂ ನನ್ನನ್ನು

ಚೆನ್ನಾಗಿ ಗುರ್ತಿಸಿಲ್ಲ.' ಹೀಗೆಂದು ಹೇಳಿ ಆತ ಆಕೆಯ ಕೈಕಾಲುಗಳ ಹಗ್ಗ ಬಿಚ್ಚಿದ. ಬಳಿಕ ಆತ ಆ ಬಾಗಿಲ ತೆರೆಯಲುಪಕ್ರಮಿಸಲು, ಆಕೆ ಅಂಜಿಕೆಯಿಂದ:—ಅದನ್ನು ತೆರೆಯಬೇಡ. ಬದುಕುವ ಆಶೆಯಿದ್ದರೆ, ನೀನು ಆ ಬಾಗಿಲಿಗೆ ಕೈಹಚ್ಚಬೇಡ. ಆ ಬಾಗಿಲ ಕೆಳಗಡೆಗೆ ಐದು ಪಕ್ಕಾಸೇರು ಡೈನಾಮಾಯಿಟ(ಸ್ಫೋಟಕ ದ್ರವ್ಯ)ವಿದೆ. ಬಾಗಿಲು ತೆರೆಯಿತೆಂದರೆ ಸತ್ತೇ ಹೋಗುವೆ. ನಿನ್ನ ಎಲುವು-ಮಾಂಸಗಳೂ ಸಿಗಲಿಕ್ಕಿಲ್ಲ. ಹೂಂ, ಇನ್ನು ಬಾಗಿಲು ತೆರೆ; ಅಂದರೆ ನೀನು ಸತ್ತು ಹೋಗುವೆ. ನಿನ್ನ ಕೂಡ ಸಾಯಲಿಕ್ಕೆ ನಾನೂ ಸಿದ್ಧಳಾಗಿರುರುತ್ತೇನೆ.'

'ನಿನಗೆ ಕನಸು-ಗಿನಸು ಬಿದ್ದಿಲ್ಲಷ್ಟೇ? ಅಂಜಬೇಡ. ನಾನು ಆ ಡಾಯನಾಮೈಟನ್ನು ಹಾರಿಸಿಬಿಡುತ್ತೇನೆ, ನೋಡು' ಹೀಗೆಂದು ಹೇಳಿ, ಬ್ಲೇಕ ಆ ಪಹರೆಯುವಳ ಕೈಹಿಡಿದು, ಆ ಕೋಣೆಯನ್ನು ಪ್ರವೇಶಿಸಲು, ಅವಳ ಒದರಾಟ ಕಟ್ಟಾಯಿತು. ಆ ಬಾಂಬು ಹಾರಲಿಲ್ಲೆಂಬದನ್ನೂ ತಮಗಾವ ಅನಿಷ್ಟವಾಗಲಿಲ್ಲೆಂಬದನ್ನೂ ತಿಳಿದ ಆಕೆ ಏನೂ ಮಾತಾಡದೆ, ಬ್ಲೇಕನ ಮುಖದ ಕಡೆಗೆ ಟಕಮಕವೆಂದು ನೋಡಲಾರಂಭಿಸಿದಳು. ಆಗ ಬ್ಲೇಕ ನಕ್ಕು:—ನಾನು ಈ ಮೊದಲೇ ಆ ತಂತಿ ಕತ್ತರಿಸಿ ಹಾಕಿದ್ದೇನೆ.

'ಇದಕ್ಕಾಗಿಯೇ ನಿನಗಸಾಧ್ಯವಾವುದೂ ಇಲ್ಲೆಂದೂ, ನಿನ್ನ ಬಳಿಯಲ್ಲಿ ಯಾವ ಹುಚ್ಚು-ಹುಳುಕುಗಳು ನಡೆಯಲಾರವೆಂದೂ ನಮ್ಮ ಡಚ್ಚನೆನ್ನುತ್ತಿರುವನು.'

ಬಳಿಕ ಬ್ಲೇಕ ಆಕೆಯನ್ನು ಜಗ್ಗಿಕೊಂಡು ಆ ದೊಡ್ಡ ನಡುಮನೆಯನ್ನು ದಾಟಿ, ಆ ದೆವ್ವನ ಮನೆಯಿಂದ ಹೊರಗೆ ಬಂದ. ಅತ್ತ ಅವನ ಅಪ್ಪಣೆಯ ಮೇರೆಗೆ ಸ್ಮಿತ್ಥ ಸಾರ್ಜಂಟನೊಡನೆ ಸಮೀಪದ ಸಂದಿಯ ಓಣಿಯೊಳಗಿನ ಒಂದು ವಿಶಾಲವಾದ ಮರದ ಕೆಳಗೆ ಮೊಟರ ನಿಲ್ಲಿಸಿ ಇವನ ಅಪ್ಪಣೆಯನ್ನೇ ಎದುರು ನೋಡುತ್ತಿದ್ದ. ಬ್ಲೇಕ ಆ ಪಹರೆಯುವಳನ್ನು ಆ ಸಾರ್ಜಂಟನ ಸ್ವಾಧೀನ ಪಡಿಸಿ, ಸ್ಮಿತ್ಥನೊಡನೆ ಮತ್ತೆ ಆ ದೆವ್ವನ ಮನೆ ಹೊಕ್ಕ. ಒಳಗೆ ಹೋಗುವಾಗ ಆತ ಸ್ಮಿತ್ಥನಿಗೆ ಕೇಳುತ್ತಾನೆ:—ತಮ್ಮಾ, ನಿನ್ನ ಬಳಿಯಲ್ಲಿ ನೂಲಿನ ಹಗ್ಗವಿದೆಯೇ?

'ಅದನ್ನು ಬಿಟ್ಟು ಇಂಥ ಕೆಲಸಗಳಿಗೆ ಬರುವದುಂಟೇ? ಒಂದಲ್ಲ, ಎರಡು ಹಗ್ಗಗಳನ್ನು ತಂದಿರುತ್ತೇನೆ.'

ಬಳಿಕ ಬ್ಲೇಕ ಈ ಮೊದಲು ನೋಡಿದ್ದ ಟಾವರಿನ ಪವಟಿಗೆಗಳ ಬಳಿಯ ಬಾಗಿಲಲ್ಲಿ ಹೋಗಿ ನಿಂತ; ಹಾಗು ಮುಚ್ಚಿದ್ದ ಆ ಬಾಗಿಲನ್ನು ಅರ್ಧ ಮಾತ್ರ ತೆರೆದ. ಆ ಕೂಡಲೆ ಆ ಪಾವಟಿಗೆಗಳ ಸಾಲು ಹಿಂದೆ ಸರಿಯಿತು; ಹಾಗು ಆದರ ಕೆಳಗಿನ ಆ ಭಯಂಕರ ಗವಿಯ ಬಾಗಿಲು ತೆರೆಯಿತು. ಬ್ಲೇಕ ಸ್ಮಿತ್ಥನಿಗೆ ಈ ಪಾವಟಿಗೆಗಳ ರಹಸ್ಯ ತಿಳಿಸಿ ಹೇಳಿ, ಬಳಿಕ ಆ ಪಾವಟಿಗೆಗಳನ್ನು ಮೊದಲಿನಂತೆ ಸಂಸ್ಥಾಪಿಸಿದ. ಆ ಮೇಲೆ ಕಟ್ಟಿಗೆಯ ಉದ್ದನ್ನ ತುಂಡನ್ನೊಂದು ತಂದು, ಆ ಹಗೆಯ ಬಾಯಿ ಮೇಲೆ ಅಡ್ಡಗಲಾಗಿ ಹಾಕಿದ. ಆದರಿಂದ ಆ ಗವಿಯು ಕದ ಮುಚ್ಚದಾಯಿತು. ಅನಂತರ ಆತ ಒಂದು ಕಂದೀಲು ಕಟ್ಟಿ, ಅದನ್ನು ಆ ಹಗೆಯಲ್ಲಿ ಇಳಿಬಿಟ್ಟ. ಆ ಕಂದೀಲು ೩೦-೩೫ ಫೂಟುಗಳ ವರೆಗೂ ಇಳಿಯಿತು; ಆದರೂ ಅದು ನಂದಲಿಲ್ಲ. ಅದನ್ನು ಕಂಡು ಬ್ಲೇಕ ಸ್ಮಿತ್ಥನಿಗೆ ಅನ್ನುತ್ತಾನೆ:—ಸ್ಮಿತ್ಥಾ, ಈ ಗವಿಯೊಳಗಿನ ಹವೆ ವಿಷಾಕ್ತವಾಗಿಲ್ಲೆಂಬದು ಖಾತ್ರಿಯಾಯಿತು. ಇನ್ನು ನಾನು ಇದರೊಳಗೆ ಇಳಿಯುತ್ತೇನೆ

ಸ್ಮಿತ್ಥ ತಾನೇ ಆ ಗವಿಯಲ್ಲಿಳಿಯುತ್ತೇನೆಂದು ಆಗ್ರಹಪಡತೊಡಗಿದ; ಬ್ಲೇಕ ಅವನನ್ನು ಇಳಿಯಗೊಡದೆ, ತಾನೇ ಹಗ್ಗ ಹಿಡಿಕೊಂಡು ಇಳಿದ. ಆ ಹಗ್ಗದ ಮೇಲ್ತುದಿಯನ್ನು ಅಲ್ಲಿಯದೊಂದು ಭದ್ರವಾದ ಕಂಬಕ್ಕೆ ಕಟ್ಟಿದ್ದರು. ಬ್ಲೇಕ ಅಂಧಕಾರಮಯವಾದ ಆ ಗವಿಯಲ್ಲಿಳಿದು ನೋಡುತ್ತಾನೆ, ಸುಟ್ಟ ಇಟ್ಟಂಗಿಗಳಿಂದ ಕಟ್ಟಲ್ಪಟ್ಟ ಆದೊಂದು ಚಚೌಕಾದ ಕೋಣೆ! ಅದರಲ್ಲಿಯ ಎಷ್ಟೋ ಜನರ ಅಸ್ಥಿ-ಚರ್ಮಗಳನ್ನು ಕಂಡು ಅವನ ಮೈ ನಡುಗಿತು. ನಡುನಡುವೆ ಯಾವ ಹುಡುಗರೂ ವೃದ್ಧರೂ ತರುಣರೂ ಆ ದೆವ್ವನ ಮನೆ ನೋಡ ಬಂದು ಕಾಣದಾಗುತ್ತಿದ್ದರೋ, ಇವೆಲ್ಲ ಅವರ ಅಸ್ಥಿ-ಪಂಜರಗಳೇ ಆಗಿದ್ದವು. ತುಸ ವೇಳೆಗೆ ಮುಂಚೆ ಯಾವ ಬಡ ದಾರಿಕಾರ ಟಾವರಿನ ಪಾವಟಿಗೆಗಳನ್ನೇರ ಹೋಗಿ ಆ ಗವಿಯಲ್ಲಿ ಬಿದ್ದಿದ್ದನೋ, ಆತನ ಮೃತದೇಹವೂ ಬ್ಲೇಕನಿಗಲ್ಲಿ ಕಾಣಿಸಿತು.

ಭಾಯೋಲೆಯ ಹೆಣವನ್ನಾದರೂ ಇಲ್ಲಿಯೇ ಕಾಣಬಹುದೆಂಬ ಉದ್ದೇಶದಿಂದಲೇ ಆತ ಆ ಹಗೆಯಲ್ಲಿಳಿದಿದ್ದ; ಆದರೆ ಆ ಗುಪ್ತ ಗವಿಯಲ್ಲಿ ಅವನಿಗೆ ಆವಳ ದೇಹದ ಪತ್ತೆ ಹತ್ತಲಿಲ್ಲ. ಆತ ಈ ಮೊದಲು ಬಿದ್ದು ಸತ್ತಿದ್ದ ಆ ದಾರಿಕಾರನ ಹೆಣಕ್ಕೆ ತನ್ನ ಹಗ್ಗದ ತುದಿಯನ್ನು ಕಟ್ಟಿ, ಮೊದಲು ತಾನು

ಮೇಲಕ್ಕೆ ಬಂದ. ಬಳಿಕ ಸ್ಮಿತ್ಥನೂ ಅವನೂ ಕೂಡಿ ಆ ಹೆಣವನ್ನು ಜಗ್ಗಿ ಕೊಂಡರು. ಆಗ ಬ್ಲೇಕ:—ಸ್ಮಿತ್ಥಾ, ಈ ಮನುಷ್ಯ ಆಗಲೆ ನನ್ನನ್ನೂ ಆ ಪಹರೆಯವಳನ್ನೂ ದೆವ್ವಗಳೆಂದು ತಿಳಿದು, ಟಾವರಿನ ಮೇಲೆ ಜೀವವನ್ನುಳಿಸಿಕೊಳ್ಳಲಿಕ್ಕೆಂದು ಓಡಿ ಹೋಗಹತ್ತಿದ; ಆದರೆ ಆಗ ಈತ ತನ್ನ ಜೀವ ಕೊಟ್ಟು ನನ್ನ ಜೀವವನ್ನುಳಿಸಿರುತ್ತಾನೆ. ಈ ಬಡವ ಆ ಸಾವಟಿಗೆಗಳನ್ನೇರಿ ಹೋಗುವಾಗ ಈ ಗುಪ್ತಗವಿಯಲ್ಲಿ ಬೀಳದಿದ್ದರೆ, ನಾನೇ ಇದರಲ್ಲಿ ಖಂಡಿತವಾಗಿಯೂ ಬಿದ್ದು ಪ್ರಾಣ ಕಳೆಕೊಳ್ಳುತ್ತಿದ್ದೆ!

ಬಳಿಕ ಬ್ಲೇಕನೂ ಸ್ಮಿತ್ಥನೂ ಕೂಡಿ ಆ ಕಟ್ಟೆಗೆಯನ್ನೆತ್ತಿ ಆ ಗವಿಯಲ್ಲೇ ಚೆಲ್ಲಿ ಕೊಟ್ಟು, ನಂತರ ಆ ಸ್ಥಾನಚ್ಯುತ ಪಾವಟಿಗೆಗಳ ಸಾಲನ್ನು ಮೊದಲಿನಂತಿರಿಸಿ, ಬೇರೆ ಕೋಣೆಯ ಕಡೆಗೆ ಸಾಗಿದರು. ಆದರೆ ಅವರು ಆ ಇಡೀ ದೆವ್ವನ ಮನೆಯನ್ನು ಮೂರು-ಮೂರು ಸಾರೆ ಹುಡುಕಿದರೂ ಅವರಿಗೆ ಖಾಯೋಲೆ ಅಲ್ಲೆಲ್ಲಿಯೂ ಕಾಣಿಸಲಿಲ್ಲ.



## ೨೦ನೇ ತೆರೆ—ಬ್ಲೇಕನ ಬಹದ್ದೂರಿಕೆ!

ಆ ಪಹರೆಯವಳೊಡನೆ ಬ್ಲೇಕ, ಸ್ಮಿತ್ಥ ಮತ್ತು ಆ ಸಾರ್ಜಂಟ ಇವರುಗಳು ತಮ್ಮ ಶೀಘ್ರಗತಿಯ ಮೋಟರಿನಿಂದ ಲಂಡನ್ನ ಪಟ್ಟಣಕ್ಕೆ ಹೊರಟರು. ಆಗ ರಾತ್ರಿಯ ಮೂರು ಹೊಡೆದು ಹೋಗಿತ್ತು. ಅಷ್ಟು ರಾತ್ರಿಯಾದರೂ ಕಳ್ಳರರಸನಾದ ಹ್ಯಾಮನ್‌ಆರ್ಟೆನ್ನ ತನ್ನ ಮನೆಯ ವಾಚನಾಲಯದ ಮೇಜಿನ ಬಳಿಗೆ ಕುಳಿತು, ಎಷ್ಟೋ ಕಾಗದಪತ್ರಗಳನ್ನು ಓದಿ ನೋಡುವ ಕೆಲಸದಲ್ಲಿ ನಿಮಗ್ನನಾಗಿದ್ದ. ಅವನ ಹತ್ತರವೆ ಇದ್ದಲಿಯ ಒಲೆಯಲ್ಲಿ ಅಗ್ನಿ ಪ್ರಜ್ವಲಿತವಾಗಿತ್ತು. ಅತ ಓದಿ ಮುಗಿಸಿದ ಸಾದಾ ಕಾಗದ, ಕರಾರುಪತ್ರ, ಬಿಲ್ಲು, ರಸೀದಿ, ಕಾರ್ಡು ಮುಂತಾದವುಗಳನ್ನು ಸರತಿಗೊಂದೊಂದರಂತೆಯೇ ಹರಿದು, ಅತ ಆ ಇದ್ದಲಿಯೊಲೆಯೊಳಗಿನ ಅಗ್ನಿಗಾಹುತಿಯನ್ನರ್ಪಿಸುತ್ತಿದ್ದ ಆ ಮೇಲೆ ದಕ್ಷಿಣ ಅಮೇರಿಕೆಗೆ ಹೊರಡುತ್ತಿರುವ ಹಡಗದ ತಿಕೀಟನ್ನೂ, ಪ್ಯಾಸಪೋರ್ಟನ್ನೂ ಕಪಾಟಿನಿಂದ ಹೊರಗೆ

ತೆಗೆದು, ಜೇಬಿನಲ್ಲಿರಿಸಿಕೊಂಡ. ಆ ತಿಕೇಟು ಯಾವ ಹಡಗದ್ದಾಗಿತ್ತೋ, ಆ ಹಡಗ ಮರುದಿನ ಬೆಳಿಗ್ಗೆ ಲಂಡನ್ನಿನ ಮುಖ್ಯ ಬಂದರದಿಂದ ಹೊರಡ ತಕ್ಕದ್ದಿತ್ತು.

ತನ್ನ ಸಾಮಾನುಗಳನ್ನೆಲ್ಲ ಕಟ್ಟಿಕೊಳ್ಳುವದಾದ ಮೇಲೆ ಆತ ಆ ಕೋಣೆಯಿಂದ ಹೊರಟು, ತನ್ನ ಗುಪ್ತ ಕೋಣೆ ಹೊಕ್ಕು, ಬಾಗಿಲಿಕ್ಕಿ ಕೊಂಡ. ಆ ಕೋಣೆಯಲ್ಲಿ ಆತನ ಅನುಯಾಯಿಗಳೆಲ್ಲರೂ ಅವನ ದಾರಿ ಕಾಯುತ್ತ ಕುಳಿತಿದ್ದರು. ಅವನನ್ನು ಕಂಡೊಡನೆಯೇ ಆತನ ಮುಖ್ಯ ಅನುಚರನಾದ ಡಚ್ಚ ತನ್ನ ಕುರ್ಚಿಯಿಂದೆದ್ದು ಸಿಟ್ಟಿನಿಂದ ಗರ್ಜಿಸುತ್ತ ಬಂದು, ಆರ್ಟಿನ್ನನ ಕುತ್ತಿಗೆ ಒತ್ತಿ ಹಿಡಿದ. ಆರ್ಟಿನ್ನ ಅವನನ್ನು ಒಂದೇ ಹೊಡೆತಕ್ಕೆ ನೆಲಕ್ಕೆ ಕೆಡಹಿ, ಜಕ್ಕಣದೊಳಗಿನ ಪಿಸ್ತೂಲ ತೆಗೆದ. ಬಳಿಕ ಆತ ಕೆಂಗಣ್ಣಿನಿಂದ ತನ್ನ ಬೇರೆ ಅನುಚರರ ಕಡೆಗೆ ದಿಟ್ಟಿಸಿ ನೋಡಿ: ನಿಮ್ಮ ಅಂಬೋಣವೇನೆಂಬದನ್ನು ತಿಳಿಸಿರಿ; ಇಂದು ನೀವೆಲ್ಲರೂ ಸಿಟ್ಟಾಗಿರುವ ದೇಕೆ? ಅಗ ಮಿಕಿಪಿವು:—ಅದೇನಿಲ್ಲೊ ಶಿಕಾಗೋ ಹ್ಯಾಮು! ಇದುವರೆಗೂ ನಮ್ಮ ಕಣ್ಣುಗಳು ಮುಚ್ಚಿ ಹೋಗಿದ್ದವು. ಇದುವರೆಗೂ ನೀನು ನಮ್ಮಗಳ ಮೇಲೆ ಒಳ್ಳೇ ಹುಕುಮು ನಡೆಸಿದ್ದೆ; ಆದರೆ ಇನ್ನು ಅದು ಕೊಂಚವೂ ನಡೆ ಯಲಾರದು, ಎಂದಂದ.

ಕೂಡಲೆ ಹ್ಯಾಮುನ್ ಆರ್ಟಿನ್ನ ಆತನ ಮುಸುಡಿಯು ಬಳಿಗೆ ಪಿಸ್ತೂ ನನ್ನೊಯ್ದ. ಅಷ್ಟರಲ್ಲಿ ಮಿಕ್ಕ ಕಳ್ಳರು ತಂತಮ್ಮ ಜೇಬಿನೊಳಗಿನ ಪಿಸ್ತೂ ಲುಗಳನ್ನೂ ಹೊರಹೊರಡಿಸಿದರು. ತಾನು ತನ್ನ ಪಿಸ್ತೂಲನ್ನು ಹಾರಿಸಿ ಇವರಲ್ಲೊಬ್ಬನನ್ನು ಕೊಲ್ಲುವಷ್ಟರಲ್ಲಿ, ಇವರೆಲ್ಲರ ಗುಂಡುಗಳಿಂದ ತಾನೇ ಸಾಯಬೇಕಾಗುವದೆಂದು ಬಗೆದು, ಆರ್ಟಿನ್ನ ತನ್ನ ಪಿಸ್ತೂಲನ್ನು ಎದುರಿ ಗಿನ ಮೇಜಿನ ಮೇಲೆ ಚೆಲ್ಲಿ ಕೊಟ್ಟು, ಸೌಮ್ಯವಾಣಿಯಿಂದ:—ಎಲೈ ನನ್ನ ಪ್ರಿಯ ಸಹಕಾರಿಗಳೇ, ಇನ್ನು ನಾವು ನಮ್ಮೊಳ್ಮೆ ಗೃಹಕಲಹ ನಡೆಸಲಿಕ್ಕೆ ಸಮಯವಿಲ್ಲ. ನಮ್ಮ ವೈರಿಗಳಿಗೆ ನಮ್ಮಗಳ ಕೀರ್ತಿ ತಕ್ಕಮಟ್ಟಿಗೆ ಅವ ಗತವಾಗಿರುತ್ತದೆ. ಆದ್ದರಿಂದ ನಮ್ಮಗಳ ಮೇಲೆ ಅವರ ದೃಷ್ಟಿ ಬೀಳ ಹತ್ತಿದೆ. ಆದುದರಿಂದ ಈಗ ನಾವೆಲ್ಲರೂ ಒಕ್ಕಟ್ಟಾಗಿ, ಏಕಮುಖದಿಂದ ಕಾರ್ಯ ಮಾಡುವದು ಯೋಗ್ಯವಾಗಿದೆ. ಹಾಗೆ ಮಾಡದಿದ್ದರೆ ನಮ್ಮೆಲ್ಲರ ಸರ್ವನಾಶವಾಗದಿರದು. ನಿಮ್ಮಗಳೀ ಪುಂಡಾಟಕೆಯ ಕಾರಣವೇನೆಂಬ

ದನ್ನು ಸಂಕ್ಷೇಪವಾಗಿ ತಿಳಿಸಿರಿ. ನಾನು ನಿಮ್ಮೆಲ್ಲರ ಸರದಾರ; ಆಪದ-ವಿಪದ ಗಳಲ್ಲಿ ನಿಮ್ಮನ್ನು ರಕ್ಷಿಸುವವನು; ಎಂಬೀ ಮಾತನ್ನು ನೀವು ಮರೆತರೆ ನಡೆಯಲಾರದು.

ಡಚ್ಚ ಆರ್ಟನ್ನನ ಖುರ್ಚಿಯ ಕಡೆಗೆ ಮುಂದುವರೆದು, ವ್ಯಂಗ್ಯ ದನಿ ಯಿಂದ:— ಅಹುದು; ನೀನು ಇದುವರೆಗೂ ನಮ್ಮಗಳ ಸರ್ದಾರನಿದ್ದು ದೇನೋ ನಿಜ; ಆದರೆ ಇನ್ನುಮುಂದೆ ನಾವು ನಿನ್ನನ್ನು ನಮ್ಮ ಸರದಾರ ನೆಂದು ಮನ್ನಿಸಲಾರೆವು.

'ಹಾಗಲ್ಲವೇ? ಇನ್ನು ನೀವು ನನ್ನನ್ನು ನಿಮ್ಮಗಳ ಸರದಾರನೆಂದು ಮನ್ನಿಸದಿದ್ದ ಕಾರಣವೇನೆಂಬದನ್ನಾದರೂ ತಿಳಿಸುವಿರೋ-ಇಲ್ಲವೊ?'

'ಶಿಕಾಗೊ ಹ್ಯಾಮಾ, ಇನ್ನು ನಿನ್ನ ಕರಾಮತಿ ನಡೆಯಲಾರದು. ಪೋಲೀಸರು ನಿನ್ನನ್ನು ಗುರ್ತಿಸಿ ಬಿಟ್ಟಿದ್ದಾರೆ. ಈ ಮನೆಯ ಮೇಲೆ ಅವರು ತಮ್ಮ ದೃಷ್ಟಿಯನ್ನಿರಿಸಿರುತ್ತಾರೆ. ಇನ್ನು ನಮ್ಮಗಳನ್ನು ಸಂರಕ್ಷಿ ಸುವದು ನಿನಗಸಾಧ್ಯ. ನಿನ್ನ ಮಾತಿಗೆ ನಾವಿನ್ನು ಮರುಳಾಗುವದಿಲ್ಲ; ನಾವು ಇನ್ನು ನಮ್ಮ ಮಾರ್ಗ ಹಿಡಿಯುತ್ತೇವೆ. ಇದುವರೆಗೆ ನಾವುಗಳು ಏನೇನನ್ನು ಸಂಪಾದಿಸಿರುವೆವೋ, ಅದೆಲ್ಲವೂ ನಿನ್ನ ಬಳಿಯಲ್ಲಿಯೇ ಠೇವಾ ಗಿಡಲ್ಪಟ್ಟಿದೆ. ನಮ್ಮಗಳ ಸಂಪಾದನೆಯನ್ನು ನಮಗೆ ಈಗಲೇ ಹಂಚಿ ಕೊಂಡು; ಇಲ್ಲದಿದ್ದರೆ ನಿನ್ನ ಗತಿ ನೆಟ್ಟಗಾಗಲಿಕ್ಕಿಲ್ಲ. ನೀನು ನಮಗೆ.... (ಬೊಟ್ಟು ತೋರಿಸಿ,) ಹೊರಟು ಹೋಗುವ ಉದ್ಯೋಗಕ್ಕೆ ಹತ್ತಿರುತ್ತೀ ಯೆಂಬದನ್ನು ನಾವು ಚೆನ್ನಾಗಿ ಬಲ್ಲೆವು' ಎಂದು ಡಚ್ಚ ಒಳ್ಳೇ ಕ್ರೋಧಸಂ ತಪ್ತನಾಗಿ ನುಡಿದ.

'ಇದು ತೀರ ಸುಳ್ಳು. ಇಲ್ಲಿ ನಮ್ಮಗಳ ಕೆಲಸ ಎಷ್ಟೋ ಬಾಕಿಯಿದೆ. ಅದನ್ನು ಮುಗಿಸದೆ, ಬಲೆ ಕಿತ್ತುಕೊಳ್ಳುವಷ್ಟು ನನ್ನನ್ನು ಅವ್ಯವಹಾರ್ಯ ನೆಂದು ತಿಳಿದಿರುವಿರಾ? ನಮ್ಮಗಳಲ್ಲೆಲ್ಲ ಒಕ್ಕಟ್ಟಿದ್ದರೆ, ಪೋಲೀಸರು ಇಷ್ಟು ಬೇಗನೆ ಏನನ್ನೂ ಮಾಡಲಾರರು; ಆದರೆ ಅದಕ್ಕಾಗಿ ಅಂಜಿ ಬಾಯ ತುತ್ತನ್ನು ಉಗುಳಿದರೆ, ನಮ್ಮೆಲ್ಲರಿಗೂ ಹೆಚ್ಚಾದ ಕಲಂಕವೇ ಸರಿ!'

'ಈಗಲೂ ನಮಗೆ ಸುಳ್ಳು ಹೇಳಿ, ಆಶೆದೋರಿ, ಮನ ಮೆಚ್ಚಿಸುವ ಪ್ರಯತ್ನ ಮಾಡುವೆ; ಆದರೆ ನಾನು ನಿನ್ನ ನುಡಿಗೆ ಇನ್ನು ಕಿವಿಗೊಡ ಲಾರೆ. ರಾಬರ್ಟ ಬ್ಲೇಕ ನಮ್ಮಗಳ ಬೆನ್ನು ಹತ್ತಿರುತ್ತಾನೆ. ಹಿಂದಕ್ಕೆ

ಆತ ನನ್ನ ಮೇಲೇರಿ ಬಂದಾಗ ನೀನು ಎಷ್ಟರಮಟ್ಟಿಗೆ ನನಗೆ ಸಹಾಯ ಮಾಡಿದೆಯೆಂಬದನ್ನು ನಾನು ಚೆನ್ನಾಗಿ ಬಲ್ಲೆ.'

'ಆಗಿನ ಭಯದಿಂದಲೇ ನೀನು ಆತನಿಗೆ ಬಹಳ ಅಂಜಿರುತ್ತೀಯೆಂಬಂತೆ ತೋರುತ್ತದೆ; ಆದರೆ ಡಚ್ಚಾ, ಇಂದು ರಾತ್ರಿ ೧೨॥-೧ ಗಂಟೆಗೆ ಆ ಬ್ಲೇಕನ ಪತ್ತೆದಾರಿಕೆ ನಿರ್ನಾಮವಾಯಿತೆಂಬದು ತಿಳಿದಿದೆ. ಆತನ ಆ ಪ್ರಖ್ಯಾತಿ ಹೇಳಹೆಸರಿಲ್ಲದಾಗಿದೆ. ನಾನು ಇಂದು ಆತನನ್ನು ಕೊಲೆಗೆಯ್ದು ಬಿಟ್ಟದ್ದೇನೆ.'

ಅವರೆಲ್ಲರೂ ಒಳ್ಳೇ ಉತ್ಸುಕತೆಯಿಂದ:— 'ಅದು ಹೇಗೆ, ಅದು ಹೇಗೆ?' ಎಂದು ಕೇಳಿದರು.

'ನೀವುಗಳೆಲ್ಲರೂ ಆಗಾಗ್ಗೆ ಪ್ರಯತ್ನಿಸಿ ಯಾವ ಕೆಲಸವನ್ನು ಪೂರಯಿಸಲಿಲ್ಲವೋ, ಅದನ್ನು ನಾನು ಒಬ್ಬ ಹೆಂಗಸಿನ ಸಹಾಯದಿಂದ ಸಹಜವಾಗಿ ಪಾರುಗಾಣಿಸಿರುತ್ತೇನೆಂಬದು ಬಹು ಮೋಜಿನ ಸಂಗತಿಯಾಗಿದೆ.'

ಹೀಗೆಂದು, ಆರ್ಟನ್ನ ಬ್ಲೇಕನ ಕೊಲೆಯ ಸಂಬಂಧದ ಆ ಮೋಜನ್ನು ಅವರಿಗೆ ವಿವರಿಸಿ ಹೇಳಿ, ಬಳಿಕ:—ಇನ್ನು ನಿಮಗೆ ಬ್ಲೇಕ ಯಾವ ಬಗೆಯ ಹಿಂಸೆಯನ್ನೂ ಕೊಡುವಂತಿಲ್ಲ; ಆದ್ದರಿಂದ ಇನ್ನು ಮುಂದೆ ನಿಮ್ಮ ವಿಚಾರ ವೇನೆಂಬದನ್ನು ನನಗೆ ತಿಳಿಸಿರಿ.

'ನಾವುಗಳು ನಿನ್ನೀ ಮಾತನ್ನು ನಂಬಿದರೂ ಸರಿಯೇ; ನಂಬದಿದ್ದರೂ ಸರಿಯೇ. ಇನ್ನು ನಾವು ಇಲ್ಲಿ ಇರಲಾರೆವು. ನಮ್ಮ ನಮ್ಮ ಹಿಸೆಗಳನ್ನು ನಮಗೆ ಈಗಲೇ ಕೊಟ್ಟು ಬಿಡು' ಎಂದು ಡಚ್ಚ ಸ್ಪಷ್ಟವಾಗಿ ತಿಳಿಸಿಬಿಟ್ಟ.

ಕೂಡಲೆ ಉಳಿದವರೆಲ್ಲರೂ ಒಂದೇ ದನಿಯಿಂದ:-ನಮ್ಮ ನಮ್ಮ ಭಾಗ ನಮಗೆ ಕೊಟ್ಟು ಬಿಡು, ಎಂದು ಗಟ್ಟಿಯಾಗಿ ಕೂಗಿದರು.

'ಮೊನ್ನಿನ ಆ ಕೆನಿಯಾದ ಗುಪ್ತ ಕರಾರುಗಳ ನಕಲುಗಳ ಮಾರಾಟದ ಹಣ ಕೈಗೆ ಬಾರದ ಹೊರತು ಭಾಗಮಾಡಲಿಕ್ಕೆ ಬರುವದಿಲ್ಲ; ಅದಲ್ಲದೆ ಉಳಿದ ಹಣವೆಲ್ಲವೂ ಬ್ಯಾಂಕುಗಳಲ್ಲಿದೆ. ಅದನ್ನು ತಂದುಕೊಳ್ಳದ ಹೊರತು ಹಿಸೆ ಹಂಚುವ ಬಗೆ ಹೇಗೆ?'

'ಈ ಹುಡುಗಾಟಿಕೆಯನ್ನು ಬಿಟ್ಟುಬಿಡು. ಯಾವನು ಮುಖ್ಯಸ್ಥನಾಗಿ ಹುಡುಗಾಟಿಕೆ ಮಾಡುವನೋ, ಅವನನ್ನಾರೂ ಮನ್ನಿಸರು. ಆ ಗುಪ್ತ

ಕರಾರಿನ ಹಣ ಬಂದಿಲ್ಲವೆಂದು ನಮ್ಮನ್ನು ಮೋಸಗೊಳಿಸಲೆತ್ನಿಸುವೆ; ಆದರೆ ಬ್ರಿಟಿಶ ಪೋಲೀಸರ ದೃಷ್ಟಿ ಅದನ್ನು ಪಡೆದವರ ಮೇಲೆ ಚೆನ್ನಾಗಿ ಇದೆ. ಆ ಗುಪ್ತಕರಾರಿನ ಯಾವ ಫೋಟೋಗಳು ತೆಗೆಯಲ್ಪಟ್ಟವೆಯೋ, ಅವುಗಳನ್ನೆಲ್ಲ ಅವರು ಇಷ್ಟ ಸ್ಥಳಕ್ಕೆ ತಲಪುವ ಮೊದಲೇ ಕೈವಶ ಮಾಡಿಕೊಂಡಿರುತ್ತಾರೆಂಬ ಸಂಗತಿ ನಿನಗೆ ಗೊತ್ತಿಲ್ಲೆಂದು ತೋರಿಸುತ್ತೀಯಾ?'

ಆ ಹಣ ಬಂದರೆ ಅದನ್ನೇ ತನ್ನ ಸಹಾಯಕ ವರ್ಗಕ್ಕೆ ಹಂಚಿಕೊಟ್ಟು, ಉಳಿದ ಎಲ್ಲ ಹಣದೊಡನೆ ತಾನು ಪಲಾಯನ ಸೂಕ್ತ ಪರಿಸಬೇಕೆಂದು ಆರ್ಟನ್ನ ಗೊತ್ತುಮಾಡಿಕೊಂಡಿದ್ದ. ಆದ್ದರಿಂದ ಡಚ್ಚನ ಮಾತು ಕೇಳಿ, ಆತ ಆಕಾಶದಿಂದ ಕಳಚಿ ಬಿದ್ದವನಂತೆ ಹತಾಶನಾಗಿ:—ಇದೇನು ಹೇಳುತ್ತೀಯೋ ಮಂಗನ-ಮಗನೇ! ಈ ಸುದ್ದಿ ನಿನಗೆಲ್ಲಿ ಹತ್ತಿತು? ನನಗಂತೂ ಈ ಬಗ್ಗೆ ಸುತರಾಂ ಗೊತ್ತಿಲ್ಲ.

ಕೂಡಲೆ ಡಚ್ಚ ತನ್ನಲ್ಲಿಯ ತಂತಿಯ ಕಾಗದವೊಂದನ್ನು ತೆಗೆದು ಆರ್ಟನ್ನ ಕೈಗಿತ್ತು:—ಇದು ಒಂದೇ ತಾಸಿನ ಹಿಂದೆ ಬರ್ಲಿನದಿಂದ ಬಂದಿರುತ್ತದೆ.

ಆರ್ಟನ್ನ ಆ ತಂತಿಯ ಸಮಾಚಾರವನ್ನೋದಿಕೊಂಡು ಚಿಂತಾ ಕಾತರನಾಗಿ:—ತೀರ ಕೆಟ್ಟ ವಾರ್ತೆಯಿದು! ಉಯಿನ್‌ಕಾರನೆಲ್ಲಿ?

'ಇಂದು ರಾತ್ರಿ ಹನ್ನೊಂದರ ನಂತರ ಸರ್ಕಸ್ಸಿಗೆ ಹೋಗಿದ್ದ ಆತನನ್ನು ಪೋಲೀಸರು ಅಲ್ಲಿಯೇ ಸೆರೆ ಹಿಡಿದಿರ-ತ್ತಾರೆಂಬದಾದರೂ ನಮ್ಮ ಸರದಾರನಿಗೆ ತಿಳಿಯದೇ? ಅದು ನಿನಗೆ ಈ ಮೊದಲೇ ತಿಳಿಯದಿದ್ದರೆ, ನಮ್ಮ ಮುಖ್ಯಸ್ಥನೆಂಬ ಗೌರವಪದಕ್ಕೆ ಅಗೌರವವೇ ಸರಿ!'

ಆರ್ಟನ್ನ ತನ್ನ ಅನುಮಾನವನ್ನೂ ಉದ್ವೇಗವನ್ನೂ ಬಚ್ಚಿಟ್ಟುಕೊಂಡು:—ಉಯಿನ್‌ಕಾರ ಪೋಲಿಸರ ಕೈಗೆ ಎಷ್ಟೋ ಸಾರೆ ಸಿಕ್ಕಿದ್ದ. ಅವನನ್ನು ಬಂಧನದಲ್ಲಿರಿಸುವದು ಆ ಪೋಲೀಸರ ಸ್ವರ್ಗಸ್ಥ ಪಿತರರಿಗೂ ಅಸಾಧ್ಯ ಆವನು ಯಾವದೋ ಒಂದು ಗುಪ್ತಜಾಲವನ್ನೊಡ್ಡುವ ಸಲುವಾಗಿ ತಾನಾಗಿಯೇ ಪೋಲೀಸರ ಕೈಸೇರಿರಬಹುದಾಗಿದೆ. ನಾನು ಆ ನಮ್ಮ ಉಯಿನ್‌ಕಾರನನ್ನು ಚೆನ್ನಾಗಿ ಬಲ್ಲೆ; ಆದರೆ ಇಂದೇ-ಈ ರಾತ್ರಿಯಲ್ಲೇ ನಾನು ನಿಮ್ಮ ಹಿಸೆಯನ್ನು ಮಾಡಿ ಕೊಡುವ ಬಗೆ ಹೇಗೆ? ಲಿವರ್ಪೂಲಿನಲ್ಲಿಯ ಸಿಟಿ ಬ್ಯಾಂಕಿನಲ್ಲಿ ಹದಿನೈದುಸಾವಿರ ಪೌಂಡುಗಳು ಡಿಪೋಜಿಟ್ಟಾಗಿವೆ. ಮೂರು

ದಿನ ಮೊದಲು ತಿಳಿಸದ ಹೊರತು, ಅವುಗಳನ್ನು ತೆಗೆದುಕೊಳ್ಳಲಿಕ್ಕೆ ಬರುವದಿಲ್ಲ. ಶೇಫ ಡಿಪೊಜಿಟ್ ಕಂಪನಿಯಲ್ಲಿ ಯಾವ ಎಲ್ಲ ಮುತ್ತು-ರತ್ನ ಮೊದಲಾದ ಅಮೂಲ್ಯ ವಸ್ತುಗಳು ಇಡಲ್ಪಟ್ಟಿವೆಯೋ ಅವೆಲ್ಲವುಗಳನ್ನು ನಾಳೆ ಬೆಳಗಿನ ಎಂಟು ಗಂಟೆಯ ನಂತರ ತರಬಹುದು. ನನ್ನ ಮನೆಯಲ್ಲಿ ತಿಜೋರಿಯಲ್ಲಿ ೨೫ ಸಾವಿರ ಪೌಂಡುಗಳ ನೋಟಿರುತ್ತವೆ; ಆದರೆ ಅವೆಲ್ಲವುಗಳನ್ನು ಈ ಮಧ್ಯ ರಾತ್ರಿಯಲ್ಲಿ ಅಲ್ಲಿಂದಿಲ್ಲಿಗೆ ತರುವ ಬಗೆ ಹೇಗೆ?'

'ನಿನ್ನ ಯಾವ ಅನುವು-ಆಪತ್ತುಗಳನ್ನೂ ಕೇಳಬಯಸುವದಿಲ್ಲ. ನಾವು ಈಗಿಂದೀಗಲೆ ನಿನ್ನಿಂದ ನಮ್ಮ ಭಾಗದ ಹಣ ಇಸಕೊಂಡು, ಇಲ್ಲಿಂದ ಹೊರಡುವೆವು.'

'ಹಾಗಾದರೆ ಇಲ್ಲಿ ಏನೇನು ಇದೆಯೋ ಅದಷ್ಟನ್ನೂ ನಾನು ಇಲ್ಲಿಗೆ ತರುವೆನು; ಅಷ್ಟರೊಳಗಾಗಿ ಸರಾಯಿಯ ಕೋಣೆ ತೆರೆದು, ಸೆರೆಯ ಬಾಟಲಿಗಳನ್ನು ತಂದಿರಿಸಿರಿ' ಎಂದು ಹೇಳಿ, ಆರ್ಟನ್ನ ಅಲ್ಲಿಂದ್ದೆದ್ದು ಗುಪ್ತಪಥದಿಂದ ಖಜಾನೆಯ ಮನೆಯ ದಾರೀ ಹಿಡಿಯುತ್ತಲೆ, ಡಚ್ಚ:—ಮಿಕಿಪಿವು ಸೆರೆಯ ಬಾಟಲಿ ತರುವನು. ನಾನು ನಿನ್ನ ಸಂಗಡಲೇ ಹಣ ತರಲಿಕ್ಕೆ ಬರುವೆನು. ಇನ್ನು ನಾನು ನಿನ್ನನ್ನು ನಂಬಲಾರೆ, ಎಂದಂದ.

ಬಳಿಕ ಅವರಿಬ್ಬರೂ ಖಜಾನೆಯ ಕೋಣೆ ಹೊಕ್ಕರು. ಆ ಕೋಣೆ ಬಹು ಸುರಕ್ಷಿತವಾಗಿತ್ತು. ಅದಕ್ಕೆ ಒಂದೇ ಬಾಗಿಲು. ಆರ್ಟನ್ನ ಒಳಗೆ ಸೇರುವಾಗ ಆ ಬಾಗಿಲ ಮುಚ್ಚಿಕೊಳ್ಳದೆ, ನೆಟ್ಟಗೆ ಬಾಗಿಲದಿಂದ ದೂರದಲ್ಲಿದ್ದ ತಿಜೋರಿಯ ಕಡೆಗೆ ಹೋದ. ಆ ಮೇಲೆ ಅತ ಡಚ್ಚನಿಗೆದುರಾಗಿ ನಿಂತು:—'ಡಚ್ಚಾ, ಈ ಹಣ ಎಲ್ಲರಿಗೂ ಸರಿಯಾಗಿ ಹಂಚಿಕೊಡಹೊದರೆ, ನಮ್ಮಗಳಿಗೆ ಸಾಕಷ್ಟು ಉಳಿಯುವದಿಲ್ಲ. ಮೇಲಾಗಿ ಈ ಸಂಪಾದನೆಯೆಲ್ಲ ನಿನ್ನ ಹಾಗು ನನ್ನ ಕರ್ತವ್ಯಬಲದಿಂದಲೇ ಆಗಿದೆ. ಯಾರು ಹೆಚ್ಚು ಶ್ರಮಪಟ್ಟಿರುವರೋ, ಅವರಿಗೇ ಹೆಚ್ಚು ಫಲ ದೊರೆಯುವದು ನ್ಯಾಯ. ಈ ಹಣವನ್ನು ನಾನೂ ನೀನೂ ಇಬ್ಬರೇ ಹಂಚಿಕೊಂಡರೆ, ನಮಗೆ ಒಳ್ಳೇ ಲಾಭವಾಗುವದು. ನಮ್ಮ ಮುಖ್ಯ ಸಂಪತ್ತಿಯೆಂದರೆ, ಲೇಡೀ ಭಿಸ್ಸಳ ಆ ರತ್ನಹಾರ ನಾನು ಅದನ್ನು ನಿನಗೇ ಕೊಟ್ಟುಬಿಡುತ್ತೇನೆ. ನೀನು ಅದನ್ನು ಸಹಜವಾಗಿ ೨೦-೨೫ ಸಾವಿರ ಪೌಂಡುಗಳಿಗೆ ಮಾರಿಕೊಳ್ಳಬಲ್ಲೆ. ಈ ಬಗೆಯ ಅಮೂಲ್ಯ ರತ್ನಹಾರದ ಹಿಸೆ ಪಡೆಯುವದು ಬಹು ಭಾಗ್ಯಕರ

ವಾಗಿದೆ' ಹೀಗೆಂದು ನುಡಿದು, ತನ್ನ ವೇಸ್ಟ ಕೋಟಿನ ಒಳಜೇಬಿನಲ್ಲಿ ಕೈ ಸೇಡಿ, ರೆನ್‌ಹ್ಯಾಮನ ತಂಗಿಯಾದ ಕ್ಲಾರೆಯಿಂದ ಅಪಹರಿಸಿದ್ದ ಆ ರತ್ನ ಹಾರ ಬೈಲಿಗೆ ತೆಗೆದ. ಅಲ್ಲಿಯ ವಿದ್ಯುತ್ ದೀಪಗಳ ಬೆಳಕಿನಲ್ಲಿ ಅದರ ಅಮೂಲ್ಯ ರತ್ನಗಳು ಝುಕ್ ಫಕ್ಕೆಂದು ಹೊಳೆಯ ತೊಡಗಿದವು.

ಆ ಅಲಂಕಾರದ ಲೋಭದಿಂದ ಡಚ್ಚನ ಕಣ್ಣು ಮಿನುಗಿದವು. ಆತ ತಲೆ ತಗ್ಗಿಸಿಕೊಂಡು ಆ ವಿದ್ಯುದ್ದೀಪದ ಸಮೀಪಕ್ಕೆ ನಿಂತು, ಆ ಅಲಂಕಾರ ವನ್ನು ಟಕಮಕವೆಂದು ನೋಡಹತ್ತಿದ. ಆಗ ಆತನಿಗೆ ಸ್ಥಾನ-ಕಾಲ-ಪರಿ ಸ್ಥಿತಿಗಳ ನೆನಪು ಕೂಡ ಉಳಿಯಲಿಲ್ಲ.

ಆರ್ಟನ್ನ ಆ ಬಗೆಯ ಸುಯೋಗ ಕಳಕೊಳ್ಳುವನೇ? ಆತ ತಟ್ಟನೆ ತನ್ನ ಬೇರೆ ಜೇಬಿನೊಳಗಿನದೊಂದು ದೊಡ್ಡ ಪಿಸ್ತೂಲು ತೆಗೆದು ತಿರುವಿ ಹಿಡಿದು, ಹಿಂಬದಿಯಿಂದ ಡಚ್ಚನ ಹಣೆಯ ಎಡಭಾಗಕ್ಕೆ ಒಳ್ಳೇ ಬಲವಾಗಿ ಹೊಡೆದ. ಪರಕ್ಷಣದಲ್ಲಿಯೇ ಡಚ್ಚನಿಗೆ ಬವಳಿ ಬಂದು, ಆತ ದೊಪ್ಪನೆ ಬಿದ್ದುಬಿಟ್ಟ!

ಆರ್ಟನ್ನ ಆತನ ಮೃತವತ್ ಶರೀರದ ಕಡೆಗೆ ನೋಡುತ್ತ:-ಮೂರ್ಖ ಪಿಶಾಚೀ, ನನ್ನ ಮೈಮೇಲೇರಿ ಬರುವೆಯಾ? ಮುಖ್ಯಸ್ತನ ವಿರುದ್ಧ ನಡೆ ದದ್ದರ ಪ್ರತಿಫಲವಿದು. ಉಳಿದವರೆಲ್ಲರೂ ಈ ಒಳಗಾಗಿ ಸಾಕಷ್ಟು ಸೆರೆ ಕುಡಿದು ದುಂದಾಗಿರುತ್ತಾರೆ. ಈ ಸುಸಂಧಿಯಲ್ಲಿ ನಾನು ಲೂಟಿಯ ಎಲ್ಲ ಮಾಲನ್ನೆತ್ತಿಕೊಂಡು ಓಡಿಹೋಗುವೆನು.

ಬಳಿಕ ಆತ ಆ ಕಬ್ಬಿಣ ಪೆಟ್ಟಿಗೆ ತೆರೆದು, ಅದರೊಳಗಿನ ಮುತ್ತು, ರತ್ನ, ವಜ್ರ, ವೈಢೂರ್ಯ ಮುಂತಾದ ಎಲ್ಲ ಬಗೆಯ ಅಲಂಕಾರ, ಭಂಗಾರ ನಾಣ್ಯ, ನೋಟುಗಳ ಪುಡಿಕೆ ಮುಂತಾದವುಗಳನ್ನು ತೆಗೆದು ತನ್ನ ಕೈಪೆಟ್ಟಿಗೆ ಯಲ್ಲಿ ತುಂಬಿಕೊಂಡ. ಅಲ್ಲಿಯೇ ಡಚ್ಚನ ಬಳಿಗೆ ನೆಲದ ಮೇಲೆ ಬಿದ್ದಿದ್ದ ಆ ಅಮೂಲ್ಯ ರತ್ನದಲಂಕಾರವನ್ನೂ ಎತ್ತಿಕೊಂಡು ತನ್ನ ವೇಸ್ಟ ಕೋಟಿನ ಒಳಗಿಸೆಯಲ್ಲಿಟ್ಟುಕೊಂಡ. ಆ ಮೇಲೆ ಆತ ಒಂದು ದೊಡ್ಡ ಓವ್ಹರಕೋಟ ತೊಟ್ಟು, ಕೈಗಳಲ್ಲಿ ಬ್ಯಾಗ್ ಹಿಡಿದುಕೊಂಡ. ಇದೇ ಕಾಲಕ್ಕೆ ಪಕ್ಕದ ಕೋಣೆಯಲ್ಲಿ ಬಹು ಗದ್ದಲವಾಗುತ್ತಿರುವಂತೆ ಕೇಳಬರಹತ್ತಿತು. ಅದೇ ನೆಂದು ನೋಡುವದಕ್ಕಾಗಿ ಆತ ಆ ಕೋಣೆಯ ಬಾಗಿಲ ಬಳಿಗೆ ಹೋದ

ಇಷ್ಟರಲ್ಲಿ ಬ್ಲೇಕ ಟಣ್ಣನೆ ಜಿಗಿದು ಬಂದು, ಆತನ ಸಮ್ಮುಖದಲ್ಲಿ ನಿಂತು ಕೊಂಡ!

ಬ್ಲೇಕ ಆ ದೆವ್ವದ ಮನೆಯ ಟಾವರಿನ ಕೆಳಗಿನ ಗವಿಯಲ್ಲಿ ಬಿದ್ದು ಸತ್ತುಹೋಗಿರುತ್ತಾನೆಂಬದು ಆರ್ಟಿನ್ನನ ಮನಸ್ಸಿನಲ್ಲಿ ಚೆನ್ನಾಗಿ ನೆಟ್ಟು ಹೋದದ್ದರಿಂದ, ಆತ ಸಶರೀರವಾಗಿ ತನ್ನೆದುರಿಗೆ ಬಂದು ನಿಂತುಕೊಂಡರೂ ಈತ ಅದನ್ನು ನಂಬದಾದ. ಆಗ ಆರ್ಟಿನ್ನ ಭೀತಿಯಿಂದ ವಿಹ್ವಲನಾಗಿ:- 'ದೆವ್ವ! ದೆವ್ವ!!' ಎಂದು ಒದರಾಡ ಹತ್ತಿದ. ಆತನ ಮೈ ನಡುಗಹತ್ತಿತು. ಆ ಅನುಕೂಲ ಪರಿಸ್ಥಿಯಲ್ಲಿ ಬ್ಲೇಕ ಅವನ ಎರಡೂ ಕೈಗಳನ್ನು ಜೋಡಿಸಿ ಒತ್ತಿ ಹಿಡಿದ. ಸ್ಮಿಥ ಅವುಗಳನ್ನು ಹಿಂದಕ್ಕೆ ಜಗ್ಗಿಕೊಂಡು, ಹಿಂದಿನಿಂದ ಅವುಗಳಿಗೆ ಒಳ್ಳೇ ಭದ್ರವಾದ ಬೇಡಿ ತೊಡಸಿದ. ಆತ್ಮರಕ್ಷಣೆಗೆ ಹತ್ತುವ ಮೊದಲೇ ಆರ್ಟಿನ್ನ ಹಾಗೆ ಆಕಸ್ಮಿಕವಾಗಿ ಸೆರೆಯಾಳಾದ.

ಬ್ಲೇಕ ಪೋಲೀಸರ ಸೈನ್ಯದಿಂದ ಈ ಮೊದಲೇ ಆ ಮನೆಯನ್ನು ಚೆನ್ನಾಗಿ ಸುತ್ತುಗಟ್ಟಿದ್ದರಿಂದ, ಅಲ್ಲಿಂದ ಒಬ್ಬ ಕಳ್ಳನೂ ಪಾರಾಗಿ ಹೋಗು ವಂತಿರಲಿಲ್ಲ. ಮುಂದೆ ಐದೇ ನಿಮಿಷಗಳಲ್ಲಿ ಅಲ್ಲಿದ್ದ ಎಲ್ಲ ತಸ್ಕರರೂ ಹಿಡಿಯಲ್ಪಟ್ಟು, ಕೈಕಾಲು ಬೇಡಿಗಳಿಂದ ಪರಿಶೋಭಿಸತೊಡಗಿದರು!

ಹ್ಯಾಮನ್ ಆರ್ಟಿನ್ನ ಯಾವ ಕೋಣೆಯಲ್ಲಿ ಬ್ಲೇಕನೇ ಮೊದಲಾದ ವರಿಂದ ಸೆರೆ ಹಿಡಿಯಲ್ಪಟ್ಟನೋ, ಡಚ್ಚ ಆದೇ ಕೋಣೆಯಲ್ಲಿ ಬವಳಿ ಬಂದು ಬಿದ್ದುಕೊಂಡಿದ್ದ. ಇಬ್ಬರು ಪಹರೆಯವರು ಆತನಿಗೆ ನೀರು ತಟ್ಟಿ ಗಾಳಿ ಹಾಕಿ, ಚೇತನೆಯನ್ನುಂಟುಮಾಡಲಿಕ್ಕೆ ಪ್ರಯತ್ನಿಸಹತ್ತಿದರು. ಆತ ಎಚ್ಚತ್ತ ಕೂಡಲೆ ಅವನಿಗೂ ಬೇಡಿ ತೊಡಿಸಬೇಕೆಂದು ಅವರು ಸಜ್ಜಾಗಿ ಕುಳಿತಿದ್ದರು; ಆದರೆ ಡಚ್ಚ ತಟ್ಟನೇ ಎದ್ದವನೇ ಟಣ್ಣನೆ ಜಿಗಿದು ಆರ್ಟಿನ್ನನ ಎದುರಿಗೆ ಹೋಗಿ, ತನ್ನ ಬಗಲೊಳಗಿನ ಒರೆಯಿಂದ ತೀಕ್ಷ್ಣವಾದ ಚೂರಿ ಹಿರಿದು, ನಿಮಿಷಾರ್ಧದಲ್ಲಿ ಆತನ ಎದೆಯಲ್ಲಿ ಚುಚ್ಚಿಬಿಟ್ಟ! ಆರ್ಟಿನ್ನ ಚಿಟ್ಟನೆ ಚೀರಿ ಅಲ್ಲಿಯೇ ಬಿದ್ದು ಬಿಟ್ಟ! ಚೂರಿಯ ಹೊಡೆತದಿಂದ ಆತನ ಹೃತ್ಪಿಂಡ ಕತ್ತರಿಸಿ ಹೋಗಿತು. ಮುಂದೆ ಎರಡೇ ನಿಮಿಷಗಳಲ್ಲಿ ಆರ್ಟಿನ್ನನ ಪ್ರಾಣ ವಾಯು ವಾಯುಮಂಡಲದಲ್ಲಿ ಬೆರೆತುಹೋಯಿತು! ಅಷ್ಟರಲ್ಲಿ ಒಬ್ಬ ಕಾವಲುಗಾರ ಡಚ್ಚನ ಕೈಯೊಳಗಿನ ಆ ಚೂರಿ ಕಸಿದುಕೊಂಡ; ಹಾಗು ಉಳಿದ ಕಳ್ಳರಂತೆ ಆತನ ಕೈ-ಕಾಲುಗಳಿಗೂ ಬೇಡಿಗಳನ್ನು ಹಾಕಿದ.

ಆರ್ಟನ್ನನ ಒಳಗಿಸೆಯಲ್ಲಿ ಲೇಡಿ ಕ್ಲಾರೆಯ ಆ ಅಪೂರ್ವವಾದ ಅಲಂಕಾರ ಸಿಕ್ಕಿತು; ಹಾಗು ಆತನ ಕೈಪೆಟ್ಟಿಗೆಗಳಲ್ಲಿ ಯಾವ ಮುತ್ತು-ರತ್ನಾದಿಗಳಿದ್ದವೋ, ಅವೆಲ್ಲವೂ ಪೋಲೀಸರ ಹಸ್ತಗತವಾದವು.

ಆ ೨೦ನೇ ನಂಬರಿನ ಮನೆಯ ಹಿಮ್ಮಗ್ಗಲಿನ ಯಾವ ಮನೆಯ ಮೇಲಿನ ಹೊಗೆಬಂಬಿನಲ್ಲಿ ತಂತಿವಿರಹಿತ ಟೆಲಿಫೋನಿನ ರಿಸೀವ್ಹ ಇದ್ದಿತೋ, ಪೋಲೀಸರು ಅದನ್ನೂ ಸ್ವಾಧೀನಪಡಿಸಿಕೊಂಡರು. ಆ ಮನೆಯಲ್ಲಿದ್ದ ಹಲವು ಬಗೆಯ ಯಂತ್ರ, ಶಸ್ತ್ರ, ವಿದ್ಯುದ್ವಾಹಕಗಳೆಲ್ಲ ಪೋಲೀಸರ ಕೈಸೇರಿದವು. ಹ್ಯಾಮಿಲ್ಲನು ಇದುವರೆಗೆ ಆ ಟೆಲಿಫೋನದಿಂದ ತಿಳಿದ ಯಾವ ಸಂಗತಿಗಳನ್ನು ಟೈಪರೈಟರದಿಂದ ಛಾಪಿಸಿ ಆರ್ಟನ್ನನಿಗೆ ಕಳಿಸುತ್ತಿದ್ದನೋ, ಅವೆಲ್ಲವುಗಳ ನಕಲುಗಳೂ ದೊರೆತವು. ಲಾರ್ಡ ಬೋರ್ಲರ ಕೂಡ ರೆನ್‌ಹ್ಯಾಮು ಅಂದು ಏನೇನು ಹೇಳಿದ್ದನೋ, ರೆನ್‌ಹ್ಯಾಮನು ಯಾವುದನ್ನು ಪ್ರಕಟಿಸಿದನೆಂದೂಹಿಸಿ ಮಂತ್ರಿಮಂಡಲದವರು ಆತನ ಮೇಲೆ ವಿಶ್ವಾಸಘಾತದ ಆರೋಪ ಹೊರಿಸಿದ್ದರೋ, ಆ ಎಲ್ಲ ರಾಜಕೀಯ ಗುಪ್ತರಹಸ್ಯಗಳೂ ಅಲ್ಲಿಯ ಕಾಗದಗಳಲ್ಲಿ ದೊರೆತವು. ಆ ಕಾಗದಗಳನ್ನೆಲ್ಲ ಪಡೆದ ಮೇಲೆ ರೆನ್‌ಹ್ಯಾಮನ ನಿರ್ದೋಷತೆಯನ್ನು ಸಿದ್ಧಮಾಡಲಿಕ್ಕೆ ಜಡವೆನಿಸಲಿಲ್ಲ. ಆ ಕಳ್ಳರರಸ ತನ್ನ ಹಸ್ತಕರ ಕೈಯಿಂದಲೇ ಸತ್ತುಹೋಗಿದ್ದರೂ, ಆ ಗುಂಪಿನೊಳಗಿನ ಸರಾಸರಿ ಇಪ್ಪತ್ತು ಜನ ಕಳ್ಳರು ಸೆರೆಹಿಡಿಯಲ್ಪಟ್ಟರು. ಅವರೆಲ್ಲರನ್ನೂ ಕೈದಿಗಳ ಗಾಡಿಯಲ್ಲಿ ಸ್ಕಾಟಲಂಡ ಯಾರ್ಡಿನೊಳಗಿನ ಬಹು ದೊಡ್ಡ ಜೇಲಿಗೆ ಸಾಗಿಸಿಕೊಂಡು ಹೋದರು.

ಅದೇ ರಾತ್ರಿ ಲಾರ್ಡ ಬೋರ್ಲರ ಬ್ಲೇಕನಿಂದ ಗಗನ ಪಿಶಾಚಿಯ ಆ ಸಮಸ್ತ ಸಂಗತಿಗಳನ್ನು ತಿಳಿದು ಸಂತೋಷಗೊಂಡ; ಆದರೆ ಲೇಡೀ ಎಲೀಸೆಗೆ ಅವಳ ಪ್ರಿಯಸಖಿಯ ಭೇಟಿಯಾಗದ್ದರಿಂದ, ಅವಳ ಕಣ್ಣುಗಳಿಂದ ಅಶ್ರುಗಳುದುರಹತ್ತಿದವು.



## ಉಪಸಂಹಾರ.

ಮರುದಿನ ಬೆಳಿಗ್ಗೆ ಉಷಃಪ್ರಭೆ ಮೂಡಣ ದಿಕ್ಕನ್ನು ಬೆಳಗುವ ಮೊದಲೇ ಒಂದು ಬಹು ದೊಡ್ಡ ರೋಲ್ಸರಾಯಿಸ ಮೋಟಾರ ಈ ಮೊದಲು ವಿವರಿಸಿದ ದೆವ್ವನ ಮನೆಯ ಸಮೀಪಕ್ಕೆ ಹೋಗಿ ನಿಂತುಕೊಂಡಿತು. ಆ ಗಾಡಿಯಿಂದ ಇಬ್ಬರು ತರುಣರೂ ಒಬ್ಬ ತರುಣಿಯೂ ಇಳಿದು, ಆ ಮನೆಯ ಮುಂದಿನ ಪಡಸಾಲೆಯನ್ನು ಹೊಕ್ಕರು. ಆ ತರುಣರೀರ್ವರಲ್ಲಿ ಒಬ್ಬ ಕ್ಯಾಪ್ಟನ್ ರೆನ್‍ಹ್ಯಾಮ, ಇನ್ನೊಬ್ಬ ಡ್ಯೂಕ ವಿಲ್ಯಮ್ಸ್ ಆ ರಮಣಿ ಲಾರ್ಡ ಬೋರ್ಲರ ಮಗಳಾದ ಲೇಡೀ ಎಲೀಸೆ.

ಬ್ಲೇಕ ತನಗೆ ಛಾಯೋಲೆಯ ಸಂಧಾನ ಹತ್ತಿದ ಕೂಡಲೆ ಟೆಲಿಫೋನಿನ ಮೂಲಕ ನಿನಗೆ ತಿಳಿಸುತ್ತೇನೆಂದು ರೆನ್‍ಹ್ಯಾಮನಿಗೆ ಹೇಳಿ ಅಂದು ಆ ದೆವ್ವನ ಮನೆಗೆ ಹೋಗಿದ್ದ; ಅಂತೆಯೇ ರೆನ್‍ಹ್ಯಾಮ ಅಪರಾತ್ರಿಯಾದರೂ ಅಸ್ವಸ್ಥ ಚಿತ್ತದಿಂದ ಆ ವರ್ತಮಾನ ತಿಳಿಯಲಿಕ್ಕೆಂದು ಕುಳಿತು ಬಿಟ್ಟಿದ್ದ; ಆದರೆ ಬ್ಲೇಕನಿಗೆ ಆ ದೆವ್ವನ ಮನೆಯಲ್ಲಿ ಆಕೆಯ ಪತ್ತೆ ಹತ್ತದ್ದರಿಂದ ಆತ ಅವಳ ಆಶೆ ಬಿಟ್ಟು ಬಿಟ್ಟಿದ್ದ; ಆ ದುರ್ವಾರ್ತೆಯನ್ನು ಒಮ್ಮೆಲೆ ರೆನ್‍ಹ್ಯಾಮನಿಗೆ ತಿಳಿಸುವದು ಆತನ ಮನಸ್ಸಿಗೆ ಬರಲಿಲ್ಲ. ಆ ಮೇಲೆ ಆತ ಸೆರೆಮನೆಯಲ್ಲಿ ಛಾಯೋಲೆಯ ಆ ಪಹರೆಯವಳಿಗೆ ನಾನಾ ಬಗೆಯಿಂದ ಪೀಡಿಸಿ, ಅವಳಿಂದ ಛಾಯೋಲೆಯ ಇರವನ್ನು ತಿಳಕೊಳ್ಳಲಿಕ್ಕೆ ಪ್ರಯತ್ನಿಸಿದ. ಎಷ್ಟು ಸಾರೆ ಕೇಳಿದರೂ ಆಕೆ:—'ನೀನು ಅಂಥ ಖಂಬೀರ ಪತ್ತೆದಾರನೇ ಆಗಿದ್ದರೆ ಅವಳನ್ನು ಹುಡುಕಿಕೋ. ನನಗೆ ಅವಳ ವಾಸ್ತವ್ಯ ಗೊತ್ತಿಲ್ಲ' ಎಂದೇ ಹೇಳಿದಳು. ಕಡೆಗೆ ಬ್ಲೇಕ ಲಾರ್ಡ ಬೋರ್ಲರಿಗೆ ಆ ಸಂಗತಿಯನ್ನು ತಿಳಿಸಿ, ಈ ದಾಸಿಯನ್ನು ನಿರಪರಾಧಿಯೆಂದು ಬಿಟ್ಟುಬಿಡಲಿಕ್ಕೆ ಒಪ್ಪಿದರೆ ಮಾತ್ರ ಇವಳು ಛಾಯೋಲೆಯ ವಾಸಸ್ಥಳವನ್ನು ತಿಳಿಸಬಹುದಾಗಿದೆಯೆಂದು ಹೇಳಿದ. ಬೋರ್ಲ ತನ್ನ ಪ್ರೀತಿಯ ಮಗಳ ಅಶ್ರುವರ್ಷಣ ನೋಡಲಾರದೆ, ಬ್ಲೇಕನನ್ನು ಕುರಿತು:—ಆಕೆ ಛಾಯೋಲೆಯನ್ನು ಪತ್ತೆ ಹಚ್ಚಿ ಕೊಟ್ಟರೆ, ಅವಳನ್ನು ಸರಕಾರೀ ಸಾಕ್ಷಿದಾರಳೆಂದು ಯೋಚಿಸಿಕೊಂಡು, ಈ ಖಟ್ಲೆಯ ನಿಕಾಲೆಯಾದ ಬಳಿಕ ಅವಳನ್ನು ಬಿಟ್ಟುಕೊಡಲಾಗುವದೆಂದು ತಿಳಿಸಿ, ಹೇಳಿದ.

ಆ ಮೇಲೆ ಬ್ಲೇಕ ಆ ಪಹರೆಯುವಳಿಗೆ ಆಕೆಯ ಬಿಡುಗಡೆಯ ಬಗ್ಗೆ ವಚನಬದ್ಧನಾಗಲು, ಆಗಲಾಕೆ ಭಾಯೋಲೆಯ ಪತ್ತೆ ತಿಳಿಸಿದಳು. ಬ್ಲೇಕ ಮನೆಗೆ ಬಂದವನೇ, ಟೆಲಿಫೋನಿನ ಮೂಲಕ ಅದನ್ನು ರೆನ್‌ಹ್ಯಾಮನಿಗೆ ತಿಳಿಸಿದ್ದ. ಅದನ್ನು ಕೇಳಿ ರೆನ್‌ಹ್ಯಾಮ ಬಹು ಚಿಂತಾಕ್ರಾಂತನಾದ. ಆತ ಮುಂದೇನು ಮಾಡಬೇಕೆಂದು ನಿರ್ಧರಿಸುವ ಮೊದಲೇ ಡ್ಯಾಕ ವಿಲ್ಯಮ್ಸ ಅವನ ಭೇಟಿಗೆ ಹೋದ. ಅವನನ್ನು ಕಂಡು ರೆನ್‌ಹ್ಯಾಮ:—ಮಿತ್ರನೇ, ಭಾಯೋಲೆಯ ವರ್ತಮಾನ ತಿಳಿದಿರುವೆನು. ಅವಳು ಆ ದೆವ್ವನ ಮನೆಯಲ್ಲೇ ಇರುತ್ತಾಳಂತೆ. ಲಾರ್ಡ ಬೋರ್ಲರು ನನಗೆ ತಮ್ಮ ದೊಡ್ಡ ಮೋಟರಿನೊಡನೆ ಅಲ್ಲಿಗೆ ಹೋಗಲಿಕ್ಕೆ ಅಪ್ಪಣೆಯನ್ನಿತ್ತರೆ, ನಾನು ಬಹಳೇ ಉಪಕೃತನಾಗುವೆನು.

'ನಾನು ಅವರ ಅಪ್ಪಣೆಯಿಂದಲೇ ನಿನ್ನ ಭೇಟಿಗೆಂದು ಬಂದಿರುತ್ತೇನೆ. ಲೇಡೀ ಎಲೀಸೆ ಆ ಸಂಗತಿಯನ್ನು ತಿಳಿದು, ತನ್ನ ಮೋಟರಿನಲ್ಲಿ ನನ್ನೊಡನೆ ಬಂದಿರುತ್ತಾಳೆ. ಅವಳು ಒಳಗೆ ಬರಲಿಕ್ಕೆ ವ್ಯಾಕುಲಳಾದ್ದರಿಂದ ಹೊರಗೆ ಮೋಟರಿನಲ್ಲೇ ಕುಳಿತಿರುತ್ತಾಳೆ.'

ಕೂಡಲೆ ರೆನ್‌ಹ್ಯಾಮ ಎದ್ದು ನಿಂತು, ಒಂದು ಬಹು ದೊಡ್ಡ ಓವ್ಹರ ಕೋಟು ಹಾಕಿಕೊಂಡು ಡ್ಯಾಕನ ಹಿಂದಿನಿಂದ ಹೊರಬಿದ್ದ. ಅವರಿಬ್ಬರೂ ಮೋಟರನ್ನೇರುತ್ತಲೆ, ಶೊಫರನಿಗೆ ಗಾಡಿಯನ್ನು ದೆವ್ವನ ಮನೆಗೊಯ್ಯಲು ಹೇಳಿದರು. ಆಗ ರಾತ್ರಿ ಮುಗಿಯಬಂದಿತ್ತು. ಪ್ರಭಾತವಾಗುವದಕ್ಕೆ ಇನ್ನು ಹೆಚ್ಚು ವಿಲಂಬವಿರಲಿಲ್ಲ.

ಆ ದೆವ್ವನ ಮನೆಯಲ್ಲಿ ಪ್ರವೇಶಿಸುತ್ತಲೆ ಎಲೀಸೆಯ ಮೈ ನಡುಗ ಹತ್ತಿತು; ಆದರೆ ತನ್ನ ಪ್ರಿಯಸಖಿಯ ದರ್ಶನೋತ್ಸುಕಳಾದ ಆಕೆ ಗಟ್ಟಿ ಮನಸ್ಸು ಮಾಡಿದಳು. ಭಾಯೋಲೆಯನ್ನು ತನ್ನ ಖಾಸ ಕೋಣೆಯಲ್ಲೇ ಅಡಗಿಸಿಟ್ಟಿರುತ್ತೇನೆಂದು ಪಹರೆಯವಳು ಬ್ಲೇಕನಿಗೆ ತಿಳಿಸಿದ್ದಳು; ಹಾಗು ತನ್ನ ಖಾಸ ಕೋಣೆಯ ಪತ್ತೆಯನ್ನೂ ಅವಳು ಹೇಳಿದ್ದಳು. ಆದರಿಂದ ಆಕೆಯ ಮಲಗುವ ಕೋಣೆಯನ್ನು ಹೊಕ್ಕು ಹುಡುಕಲಿಕ್ಕೆ ಅವರಿಗ ಪ್ಟೊಂದು ಶ್ರಮವಾಗಲಿಲ್ಲ. ಅದೇ ಕೋಣೆಯಲ್ಲಿ ಒಂದು ಮಾಸಿದ ಹಾಸಿಗೆಯ ಮೇಲೆ ಭಾಯೋಲೆ ಪವಡಿಸಿದ್ದಳು. ಆಕೆ ಕೆಲ ದಿನಗಳಿಂದ ಬಹಳೇ

ಅಶಕ್ತಳಾಗಿ, ಈಗ ಹೆಚ್ಚಾಗಿ ಸೊರಗಿದ್ದಳು. ಆಕೆಯ ಆ ಕ್ಷೀಣ ದೇಹ, ಶುಷ್ಕ ಮಲಿನ ಮುಖ ಇವುಗಳನ್ನು ಕಂಡ ಕೂಡಲೆ ಎಲೀಸೆಯ ಕಣ್ಣುಗಳಿಂದ ಘೋರೆಂದು ಅಶ್ರುಗಳುದುರಹತ್ತಿದವು. ಅವಳು ಆ ಹಾಸಿಗೆಯ ಮೇಲೆ ಬೊಗ್ಗಿ ನಿಂತು, ತನ್ನ ಎರಡೂ ಕೈಗಳಿಂದ ಆ ತನ್ನ ಪ್ರಿಯ ಸಖಿಯನ್ನು ಅವಚಿಕೊಂಡಳು. ತಾನು ಭಾಯೋಲೆಯನ್ನು ಜೀವದಿಂದ ನೋಡುವೆನೋ-ಇಲ್ಲವೋ ಎಂಬ ಬಗ್ಗೆ ಅವಳಿಗೆ ಇದುವರಗೆ ಅಂಜಿಕೆಯೆನಿಸಿತ್ತು. ಅದು ಈಗ ಪರಿಹಾರವಾಗಿ ಸಂತೋಷವೆನಿಸಿತು.

ಕ್ಯಾಪ್ಟನ್ ರೆನ್‌ಹ್ಯಾಮ ಭಾಯೋಲೆಯ ಎದುರಿಗೆ ಹೋಗಿ ನಿಂತುಕೊಳ್ಳಲು, ಅವನನ್ನು ಕಂಡು ತನ್ನ ಕ್ಷೀಣ ಸ್ವರದಿಂದ ಭಾಯೋಲೆ:— ಪ್ರಿಯಕರಾ, ರೆನ್‌ಹ್ಯಾಮ, ನೀನು ಬಂದೇ ತೀರುವೆಯೆಂದು ನನಗನಿಸುತ್ತಿತ್ತು. ನಿನ್ನನ್ನು ನೋಡುವದಕ್ಕೆಂದೇ ನಾನು ಇನ್ನೂ ಜೀವದಿಂದಿರುತ್ತೇನೆ.

'ಪ್ರಿಯತಮೇ, ನಡೆಯಿನ್ನು. ಈ ನರಕದಲ್ಲಿ ಇನ್ನು ಒಂದು ಕ್ಷಣ ಕೂಡ ನಿಲ್ಲುವ ಅವಶ್ಯಕತೆಯಿಲ್ಲ; ಆದರೆ ನೀನು ಮೊಟರಿನವರೆಗೆ ನಡೆದು ಬರುವದೆಂತು? ನಮ್ಮಗಳ ಮೋಟಾರು ಹೊರಗೆ ತಲೆಬಾಗಿಲ ಬಳಿಯಲ್ಲಿದೆ.'

ಕೂಡಲೆ ಭಾಯೋಲೆ ಮೆಲ್ಲಮೆಲ್ಲನೆ ಎದ್ದು ನಿಂತು, ರೆನ್‌ಹ್ಯಾಮನ ಹೆಗಲ ಮೇಲೆ ಭಾರ ಹಾಕಿ ನಡೆಯುತ್ತ ತಲೆಬಾಗಿಲದವರೆಗೂ ಬಂದಳು. ಲೇಡೀ ಎಲೀಸೆಯೂ ಡ್ಯೂಕ ವಿಲ್ಯಮ್ಮನೂ ಅವರನ್ನನುಸರಿಸಿ ನಡೆದರು. ಬಳಿಕ ಅವರೆಲ್ಲರೂ ಮೋಟಾರದಲ್ಲಿ ಕೂಡ್ರಲು, ಶೊಫರನು ಅವರನ್ನು ಧೃತಗತಿಯಿಂದ ಲಂಡನ್ನ ಪಟ್ಟಣದ ಕಡೆ ಸಾಗಿಸಿದನು. ತಾನು ಆ ನೀಚ ಆರ್ಟನ್ನನ ಬಲೆಯಲ್ಲಿ ಸಿಕ್ಕು, ಕಡೆಗೆ ಹೇಗೆ ಬಂದಿನಿಯಾದಳೆಂಬದನ್ನು ಭಾಯೋಲೆ ವಿವರಿಸಿ ಹೇಳಿದಳು. ಅಷ್ಟರಲ್ಲಿ ಅವರ ಗಾಡಿ ಲಾರ್ಡ ಬೋರ್ಲರ ಬಂಗ್ಲೆಯ ಆವಾರದಲ್ಲಿ ಬಂದು ನಿಂತಿತು. ಕೂಡಲೆ ಅವರೆಲ್ಲರೂ ಗಾಡಿಯಿಂದಿಳಿದರು. ಸಮ್ಮುಖದಲ್ಲಿಯೇ ಬೋರ್ಲರೂ ರಾಬರ್ಟ ಬ್ಲೇಕನೂ ನಿಂತುಕೊಂಡು, ಅವರೆಲ್ಲರಿಗೆ ಸುಸ್ವಾಗತ ಮಾಡುತ್ತಿದ್ದರು. ಬಳಿಕ ಕ್ಯಾಪ್ಟನ್ ರೆನ್‌ಹ್ಯಾಮ ಬ್ಲೇಕನಿಗೆ ಶೇಕ್‌ಹ್ಯಾಂಡ ಮಾಡುತ್ತ ಕೃತಜ್ಞ ಅಂತಃಕರಣದಿಂದ:— ನೀವು ನಮ್ಮ ಉಭಯತರ ಮಾನ ಮತ್ತು ಪ್ರಾಣ

ಗಳನ್ನು ರಕ್ಷಿಸಿರುತ್ತೀರಿ. ನಾವು ನಿಮ್ಮ ಈ ಉಪಕಾರಗಳನ್ನು ಜನ್ಮ ಜನ್ಮಾಂತರಗಳಲ್ಲಿಯೂ ತೀರಿಸಲಾರೆವು, ಎಂದಂದ.

ಆಗ ಲಾರ್ಡ ಬೋರ್ಲರು ಮುಗುಳ್ನಗೆಯಿಂದ:—ಆದರೆ ಬ್ಲೇಕರು ಬ್ರಿಟಿಶ ಗವರ್ನಮೆಂಟಿಗೆ ಎಷ್ಟು ಹಿತಸಾಧನ ಮಾಡಿರುತ್ತಾರೆಯೋ ಅದರ ಬೆಲೆ ಅತ್ಯಧಿಕವಾದದ್ದು, ಎಂದಂದು ಬ್ಲೇಕನ ಕಡೆಗೆ ಕೃತಜ್ಞತಾಭಾವದಿಂದ ನೋಡಿದರು.

○ ○ ○ ○

ಎಲ್ಲ ಕೈದಿಗಳ ವಿಚಾರಣೆಯಾಗಿ, ಯೋಗ್ಯ ದಂಡಣೆಯಾಯಿತು.

● ● ● ●

ಲಂಡನ್ ಪಟ್ಟಣದಲ್ಲಿ ಈ ಮೊದಲೆದ್ದ ಹಾ ಹಾ ಕಾರವೆಲ್ಲ ಶಾಂತವಾದ ಬಳಿಕ, ಡ್ಯೂಕ ವಿಲ್ಯಮ್ಸ್-ಎಲೀಸೆ ಮತ್ತು ರೆನ್‌ಹ್ಯಾಮ-ಭಾಯೋಲೆ ಇವರುಗಳ ವಿವಾಹಗಳು ಲಂಡನ್ನಿನ ಪ್ರಸಿದ್ಧ ಚರ್ಚಿನಲ್ಲಿ ಜರುಗಿ, ಆ ನವ ದಂಪತಿಗಳು ಬಹು ಪ್ರೇಮದಿಂದಿರಹತ್ತಿದರು.

ಸಂ

ಸಂ ಪೂ ರ್ಣ

ರ್ಣ